# ಕನ್ನಡ ನುಡಿ ಬಳಕೆಯಲ್ಲಿ ಮಹಿಳೆ

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕರು
ಕಾಳಮ್ಮ



ಮಾರ್ಗದರ್ಶಕರು
ಡಾ. ಪಿ.ಮಹಾದೇವಯ್ಯ
ಪ್ರಾಧ್ಯಾಪಕರು
ಕನ್ನಡ ಭಾಷಾಧ್ಯಯನ ವಿಭಾಗ





ಕನ್ನಡ ಭಾಷಾಧ್ಯಯನ ವಿಭಾಗ
ಭಾಷಾನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ- ೫೮೩ ೨೭೬
೨೦೧೬

730

# ಕನ್ನಡ ನುಡಿ ಬಳಕೆಯಲ್ಲಿ ಮಹಿಳೆ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ., ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ)


ಸಂಶೋಧಕರು

**ಕಾಳಮ್ಮ**

ಮಾರ್ಗದರ್ಶಕರು

**ಡಾ. ಪಿ.ಮಹಾದೇವಯ್ಯ**

ಪ್ರಾಧ್ಯಾಪಕರು

ಕನ್ನಡ ಭಾಷಾಧ್ಯಯನ ವಿಭಾಗ







**ಕನ್ನಡ ಭಾಷಾಧ್ಯಯನ ವಿಭಾಗ**

ಭಾಷಾನಿಕಾಯ

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

ವಿದ್ಯಾರಣ್ಯ ೫೮೩೨೭೬

**೨೦೧೬**

## ಸಂಶೋಧಕರ ಪ್ರಮಾಣಪತ್ರ

**'ಕನ್ನಡ ನುಡಿ ಬಳಕೆಯಲ್ಲಿ ಮಹಿಳೆ'** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು **ಡಾ. ಪಿ.ಮಹಾದೇವಯ್ಯ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಭಾಷಾನಿಕಾಯದ **ಕನ್ನಡ ಭಾಷಾಧ್ಯಯನ ವಿಭಾಗಕ್ಕೆ** ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸಂಶೋಧಕರು

**(ಕಾಳಮ್ಮ)**
ಸಂಶೋಧನಾ ವಿದ್ಯಾರ್ಥಿನಿ
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩೨೭೬

ದಿನಾಂಕ:
ಸ್ಥಳ: ವಿದ್ಯಾರಣ್ಯ

## ಮಾರ್ಗದರ್ಶಕರ ದೃಢೀಕರಣ ಪತ್ರ

ಕಾಳಮ್ಮ ಇವರು ಪಿಎಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **'ಕನ್ನಡ ನುಡಿ ಬಳಕೆಯಲ್ಲಿ ಮಹಿಳೆ'** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಕನ್ನಡ ಭಾಷಾಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದಾರೆ.

ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿ ಹಾಗೂ ಇತರ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಮಾರ್ಗದರ್ಶಕರು

**(ಡಾ.ಪಿ.ಮಹಾದೇವಯ್ಯ)**
ಪ್ರಾಧ್ಯಾಪಕರು
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩೨೭೬

ದಿನಾಂಕ: ೬.೧೨.೧೬
ಸ್ಥಳ: ವಿದ್ಯಾರಣ್ಯ

## ಪರಿವಿಡಿ

# ಅಧ್ಯಾಯ : ಒಂದು

## ಪ್ರಸ್ತಾವನೆ

ಪ್ರವೇಶ

೧.೧. ಅಧ್ಯಯನದ ಉದ್ದೇಶ

೧.೨. ಅಧ್ಯಯನ ವಿಧಾನ

೧.೩. ಅಧ್ಯಯನದ ವ್ಯಾಪ್ತಿ

೧.೪. ಅಧ್ಯಯನದ ಮಹತ್ವ

೧.೫. ಅಧ್ಯಯನದ ಸ್ವರೂಪ

೧.೬. ಇದುವರೆಗಿನ ಅಧ್ಯಯನದ ತಿಳಿವು

# ಅಧ್ಯಾಯ : ಒಂದು

# ಪ್ರಸ್ತಾವನೆ

## ಪ್ರವೇಶ

ಇತ್ತೀಚೆಗೆ ಶಿಕ್ಷಣ ಕ್ಷೇತ್ರದಲ್ಲಿ ಅಂತರ್‌ಶಿಸ್ತೀಯ ಅಧ್ಯಯನಗಳಿಗೆ ವಿಶೇಷವಾದ ಮನ್ನಣೆ ದೊರಕುತ್ತಿವೆ. ಇದಕ್ಕೆ ಕಾರಣ ಒಂದು ವಿಷಯವನ್ನು ಹಲವಾರು ಅಭಿರುಚಿಯ ತಜ್ಞರು ಪರಿಶೀಲಿಸಲು ಹೊರಡುತ್ತಿರುವುದು. ಅದರಲ್ಲೂ ಭಾಷೆ ಮಾನವನ ದಿನನಿತ್ಯದ ಚಟುವಟಿಕೆಯ ಹಿಂದಿರುವ ಧಾತುಶಕ್ತಿ. ಭಾಷೆಯ ಬಗೆಗೆ ಆಲೋಚಿಸದವರು ವಿರಳ. ಭಾಷೆಯ ಸಂಬಂಧವನ್ನು ಕಡಿದುಕೊಂಡಿರುವ ವಿಷಯ ದುರ್ಲಭ. ಹೀಗಾಗಿ ಭಾಷೆ ಎಲ್ಲ ಜನರ, ಎಲ್ಲ ವಿಷಯಗಳ, ಎಲ್ಲ ಕ್ಷೇತ್ರದ ಅನಿವಾರ್ಯ ಅಗತ್ಯಗಳಲ್ಲೊಂದು. ಭಾಷೆಯಿಂದ ಹೊರತಾದ ಸಮಾಜ, ಸಂಸ್ಕೃತಿಗಳನ್ನು ಕಲ್ಪಿಸಿಕೊಳ್ಳುವುದು ಕಷ್ಟ.

ಭಾಷಾವಿಜ್ಞಾನಿಗಳು, ಸಮಾಜಶಾಸ್ತ್ರಜ್ಞರು, ಮಾನವಶಾಸ್ತ್ರಜ್ಞರು ಮತ್ತು ಸಂಸ್ಕೃತಿಯಲ್ಲಿ ಅಡಕಗೊಂಡಿರುವ ಭಾಷೆಯ ಅನನ್ಯತೆಯನ್ನು ತಲಸ್ಪರ್ಶಿಯಾಗಿ ಕಂಡುಹಿಡಿಯಲು ಮಾಡಿದ ಪ್ರಯತ್ನಗಳ ಫಲವಾಗಿ ಹೊಸಶಾಲೆ ಭಾಷಾ ವಿಜ್ಞಾನದಲ್ಲಿ ತಲೆಯೆತ್ತಿತ್ತು. ಸಾಮಾಜಿಕ ಭಾಷಾ ವಿಜ್ಞಾನ ಎಂಬ ಹೆಸರನ್ನು ಪ್ರಚಾರಕ್ಕೆ ತಂದ ಕೀರ್ತಿ ಹ್ಯಾವರ್ ಸಿ. ಕೂರಿ ಅವರಿಗೆ ಸಲ್ಲುತ್ತದೆ. ಅವರು ೧೯೫೨ರಲ್ಲಿ 'Southern Speceh Journal'ಗೆ ಬರೆದ 'A Projection of Sociolinguistics: The Relationship of spece to social status' ಎಂಬ ಲೇಖನದಲ್ಲಿ ಮೊದಲ ಬಾರಿಗೆ Socio - linguistics ಎಂಬ ಹೆಸರನ್ನು ದಾಖಲಿಸಿದ್ದಾರೆ.

ಕನ್ನಡ ಭಾಷೆಯನ್ನು ಕುರಿತ ಅಧ್ಯಯನಗಳು ಬೇರೆ ಬೇರೆ ನೆಲೆಗಳಲ್ಲಿ ನಡೆಯಬೇಕಾದ ಅಗತ್ಯ ಈಗ ಎಂದಿಗಿಂತ ಹೆಚ್ಚಾಗಿದೆ. ಕನ್ನಡ ರಚನೆಯನ್ನು ವಿವರಿಸುವ ಯತ್ನಗಳು ಬಹುಹಿಂದಿನಿಂದಲೂ ನಡೆದಿವೆ. ಆದರೂ ಹೊಸ ಸಾಧ್ಯತೆಗಳನ್ನು ಅನುಸರಿಸಿ ಈ ಅಧ್ಯಯನಗಳು ಸಾಗಿರುವುದು ಇಲ್ಲವೆನ್ನುವಷ್ಟು ಕಡಿಮೆ.

ಭಾಷಾಶಾಸ್ತ್ರದ ಇತ್ತೀಚಿನ ಅಧ್ಯಯನಗಳಲ್ಲಿ ಆಯಾ ಸಾಮಾಜಿಕ ರಚನೆಯನ್ನು ಭಾಷೆಯ ಮೂಲಕ ಅರ್ಥಮಾಡಿಕೊಳ್ಳಬಹುದಾಗಿದೆ. ಭಾಷೆಯು ವೈಯಕ್ತಿಕವಾಗಿರುವಂತೆ ಸಾಮಾಜಿಕವೂ ಹೌದು. ಅಂದರೆ ಭಾಷೆಯು ವ್ಯಕ್ತಿ ನೆಲೆಯಲ್ಲಿ ಜೀವಂತವಾಗಿರುವಂತೆ ತೋರಿದರು. ವ್ಯಕ್ತಿಯ ಭಾಷಾ ಸಾಮರ್ಥ್ಯ ಮತ್ತು ಬಳಕೆಗಳು ಸಾಮಾಜಿಕವಾಗಿಯೇ ನಿಯಂತ್ರಿತವಾಗಿರುತ್ತವೆ. ಇದಕ್ಕೆ ಹಲವು ಕಾರಣಗಳಿವೆ. ಮುಖ್ಯವಾಗಿ ಭಾಷೆ ಎಂಬುದು ಸಮಾಜ ವ್ಯಕ್ತಿಗಳ ನಡುವಣ ಸಂಪರ್ಕ ಜಾಲವನ್ನು ನಿರ್ಮಿಸುವ ಉಪಕರಣವಾಗಿದೆ. ಸಮಾಜವೇ ಅಂಥ ಆಯ್ಕೆಗಳನ್ನು ವ್ಯಕ್ತಿಗೆ ಸಿದ್ಧಪಡಿಸಿಕೊಟ್ಟಿರುತ್ತದೆ. ಈ ಆಯ್ಕೆಗಳಲ್ಲಿ ಯಾವ ಬದಲಾವಣೆಯಾದರೂ ಅದು ಸಾಮಾಜಿಕ ನೆಲೆಯ ಸಮ್ಮತಿಯನ್ನು ಪಡೆದುಕೊಂಡಿರುತ್ತದೆ.

ಸಾಮಾಜಿಕ, ಸಾಂಸ್ಕೃತಿಕ ಸಂರಚನೆ ಒಳಗಡೆ ಹಲವು ನಿಷೇಧ, ನಿರ್ಬಂಧಗಳಿವೆ. ಅದೆಲ್ಲವನ್ನು ಭಾಷೆಯಲ್ಲಿ ನೋಡುವುದಕ್ಕೆ ಸಾಧ್ಯ ಮತ್ತು ಭಾಷೆಯೆ ಅದನೆಲ್ಲ ನಿರ್ವಹಿಸುತ್ತದೆ. ಈ ರೀತಿಯ ಅಧ್ಯಯನ ಸಾಂಸ್ಕೃತಿಕ ಸಾಮುದಾಯಿಕ, ಸಾಮಾಜಿಕ ಸಂದರ್ಭದ ಹಲವು ವಿಚಾರಗಳನ್ನು ಮತ್ತು ಅದರ ಚಹರೆಗಳನ್ನು ತಿಳಿಯುವುದಕ್ಕೂ ಈ ಮಾದರಿಯ ಅಧ್ಯಯನ ಅಗತ್ಯವಾಗಿದೆ.

ಭಾಷಾಶಾಸ್ತ್ರದ ಸಾಮಾಜಿಕ ವಿನ್ಯಾಸಗಳಲ್ಲಿ ಬಳಕೆಗೊಳ್ಳುತ್ತಿರುವ ಭಾಷಿಕ ಮಾದರಿಗಳನ್ನು ಕುರಿತ ಅಧ್ಯಯನಗಳು ನಡೆದಿವೆ. ಆದರೆ ಲಿಂಗತ್ವದ ಭಾಷೆಯ ಚಹರೆಯನ್ನು ಭಾಷಿಕ ಆಕೃತಿಗಳ ಮೂಲಕ ಅಧ್ಯಯನ ಅಷ್ಟಾಗಿ ನಡೆದಿಲ್ಲ. ಹಾಗಾಗಿ ಲಿಂಗತ್ವದ ಭಾಷಿಕ ಚಹರೆಗಳನ್ನು ಭಾಷಿಕ ಆಕೃತಿಗಳ ಮೂಲಕ ಅಧ್ಯಯನ ಮಾಡಬೇಕಾಗಿದೆ. ಹಾಗೆ ಲಿಂಗತ್ವದ ಭಾಷಿಕ ಚಹರೆಯನ್ನು ಕಟ್ಟಿಕೊಡುವಾಗ ವಾಸ್ತವ ಮತ್ತು ನಂಬಿಕೆಯಲ್ಲಿ ವ್ಯತ್ಯಾಸಗಳು ಭಾಷಿಕ ಆಕೃತಿಗಳಲ್ಲಿ ಬಳಕೆಯಲ್ಲಿವೆ. ಗಂಡು - ಹೆಣ್ಣು ಇಬ್ಬರಿಗೂ 'ಒಂದೇ ಕನ್ನಡ' ಎಂದರೂ ಹೆಣ್ಣಿನ ಸಾಮಾಜಿಕ ಮತ್ತು ಸಾಂಸ್ಕೃತಿಕ ಸಂದರ್ಭದಲ್ಲಿ ಬಳಕೆಯಾಗುವ ಕನ್ನಡ ನುಡಿಯ ಸ್ವರೂಪದಲ್ಲಿ ಭಿನ್ನತೆಯಿದೆ ಮತ್ತು ತಾರತಮ್ಯವಿದೆ. ಅಂತಹ ಭಾಷಿಕ ಮಾದರಿಗಳಲ್ಲಿ ಕಾಣಿಸಿಕೊಳ್ಳುವ ಭಿನ್ನತೆಗಳನ್ನು ಗುರುತಿಸಬೇಕಾಗಿದೆ.

ಸಮಾಜದಲ್ಲಿ ಲಿಂಗತಾರತಮ್ಯ ಹಲವು ನೆಲೆಗಳಲ್ಲಿ ಕಂಡು ಬರುತ್ತಿದೆ. ಈ ಅಸಮಾನತೆಗಳಲ್ಲಿ ಭಾಷೆಯೂ ಒಂದು. ಇದು ಹೇಗೆ ಎಂಬುದನ್ನು ಕಟ್ಟಿಕೊಡುವುದು ಮಹಿಳೆಯರ ಕುರಿತು ಪುರುಷ ಧೋರಣೆಗಳು ಪುರುಷಪ್ರಧಾನ ಸಮಾಜ ವ್ಯವಸ್ಥೆ ಒಳಗಡೆ ನಿರ್ವಚನೆಗೊಳ್ಳುವ ಬಗೆಗಳು ಹಲವು ನೆಲೆಯಲ್ಲಿ ಇವೆ. ಒಗಟು, ನುಡಿಗಟ್ಟುಗಳು, ಸೃಜನಾತ್ಮಕ ಬರವಣಿಗೆ, ವ್ಯಕ್ತಿಗತ/ವಸ್ತುನಿಷ್ಟ ಬರವಣಿಗೆ, ಸಾರ್ವಜನಿಕ ಭಾಷಣಗಳು ಇತ್ಯಾದಿ ಸಂದರ್ಭಗಳಲ್ಲಿ ವ್ಯಕ್ತವಾಗುತ್ತವೆ. ಇವುಗಳನ್ನು ವಿರೋಧಿಸಿ ಚಳವಳಿಗಳು ಆಗಾಗ ನಡೆಯುತ್ತಿರುವುದು ಉಂಟು. ಇತ್ತೀಚಿನ ದಿನಗಳಲ್ಲಿ ಪ್ರಮುಖ ರಾಜಕೀಯ ವ್ಯಕ್ತಿಗಳು, ಸಮಾಜದಲ್ಲಿ ಪ್ರಭಾವಿ ವ್ಯಕ್ತಿಗಳು ಎನಿಸಿಕೊಂಡಿರುವವರು, ಲಿಂಗ ತಾರತಮ್ಯ ಧೋರಣೆಯ

ಹೇಳಿಕೆಗಳನ್ನು ಕೊಟ್ಟು ವಿವಾದಕ್ಕೆ ಗುರಿಯಾಗುವ ಭಾಷಿಕ ವಿವಾದಗಳನ್ನು ದಿನನಿತ್ಯ ಗಮನಿಸಲಾಗುತ್ತಿದೆ. ಇಂತಹ ಪ್ರಶ್ನೆಗಳನ್ನು ಮುಂದಿಟ್ಟುಕೊಂಡು ಅಧ್ಯಯನ ನಡೆಸಲಾಗಿದೆ.

ಮಹಿಳೆಗೊಂದು ಕನ್ನಡ ನುಡಿಯಿದೆ ಎಂದು ಸಾಧಿಸುವುದಕ್ಕಿಂತ ಮಹಿಳೆ ಕುರಿತು ಬಳಸುವ ಕನ್ನಡ ನುಡಿ ರಚನೆಯಲ್ಲಿ ಇರುವ ನಂಬಿಕೆಗಿಂತ ವಾಸ್ತವ ಎಷ್ಟು ಭಿನ್ನವಾಗಿದೆ ಎಂಬುದನ್ನು ಸಾಧಿಸುವುದು ಪ್ರಸ್ತುತ ಅಧ್ಯಯನದ ಮುಖ್ಯ ಗುರಿಯಾಗಿದೆ. ಸಮಕಾಲೀನ ಸಂದರ್ಭದಲ್ಲಿ ಮಹಿಳೆಯರ ಕುರಿತ ಅಧ್ಯಯನಗಳು ಹಲವಾರು ದೃಷ್ಟಿಕೋನಗಳಿಂದ ನಡೆಯುತ್ತಿವೆ. ಇಂತಹ ಸಂದರ್ಭದಲ್ಲಿ ಮಹಿಳೆಯರ ಬಳಕೆ ಕನ್ನಡ ನುಡಿ ಸ್ವರೂಪ ಕುರಿತು ಅಧ್ಯಯನ ಪ್ರಸ್ತುತ ಸಂದರ್ಭದಲ್ಲಿ ಮಹತ್ವದ್ದು ಎನಿಸಿದೆ. ಲಿಂಗಸೂಚಕ ಭಾಷೆಯ ಸ್ವರೂಪವನ್ನು ಅರ್ಥಮಾಡಿಕೊಳ್ಳುವುದಕ್ಕೆ ಪ್ರಸ್ತುತ ಅಧ್ಯಯನ ಅಗತ್ಯ ವಿಚಾರಗಳನ್ನು ರೂಪಿಸಿದೆ. ಈ ಎಲ್ಲ ಹಿನ್ನೆಲೆಯಿಂದ ಪ್ರಸ್ತುತ ಅಧ್ಯಯನ ಮಹತ್ವ ಪಡೆದಿದೆ.

## ೧.೧. ಅಧ್ಯಯನದ ಉದ್ದೇಶ

ಪ್ರಸ್ತುತ ಅಧ್ಯಯನ ಹಲವು ಉದ್ದೇಶಗಳನ್ನು ಹೊಂದಿದೆ. ಅವುಗಳಲ್ಲಿ ಮಹಿಳೆಯರ ಕನ್ನಡ ನುಡಿ ಚಹರೆಯನ್ನು ಗುರುತಿಸುವುದು. ಮಹಿಳೆಗೆ ಭಾಷೆಯಿಲ್ಲ ಎನ್ನುವವರು ರೂಪಿಸಿಕೊಡುತ್ತಿರುವ ಚಿಂತನ ಕ್ರಮಗಳೇನು? ಅವು ಹೇಗೆ ಅರ್ಥೈಸಿಕೊಳ್ಳಲ್ಪಡುತ್ತವೆ ಎಂಬುದನ್ನು ಶೋಧಿಸುವುದು. ಒಂದೇ ವಿಷಯವನ್ನು ಕುರಿತು ಅಭಿವ್ಯಕ್ತಿಸುವಾಗ ಗಂಡು ಮತ್ತು ಹೆಣ್ಣು ಕನ್ನಡ ನುಡಿ ಬಳಕೆಯ ಮಾದರಿಗಳನ್ನು ದಾಖಲಿಸುವುದು. ಹಾಗೆಯೇ ಹೆಣ್ಣಿನ ಮಾತನ್ನು ಕುರಿತಾದ ನಂಬಿಕೆಗೂ ಮತ್ತು ವಾಸ್ತವಕ್ಕೂ ಇರುವ ವ್ಯತ್ಯಾಸವನ್ನು ಭಾಷಿಕವಾಗಿ ಹಿಡಿದಿಡುವುದು. ಹೀಗೆ ಹಲವಾರು ಗುರಿಗಳನ್ನು ಪ್ರಸ್ತುತ ಅಧ್ಯಯನ ಹೊಂದಿದೆ. ಭಾಷಿಕವಾಗಿ ಹೆಣ್ಣಿನ ಬಗ್ಗೆ ಇಟ್ಟುಕೊಂಡಿರುವ ವಾಸ್ತವ ಮತ್ತು ಕಟ್ಟಿಕೊಂಡಿರುವ ನಂಬಿಕೆ ಇವುಗಳ ಮಧ್ಯವಿರುವ ಭಾಷಿಕ ಚಹರೆಗಳನ್ನು ಗುರುತಿಸುವುದು.

ಮಾತಿನ ನೆಲೆಯಲ್ಲಿ ಮಹಿಳೆಯರ ಭಾಷಾ ಬಳಕೆ ಒಂದೇ ರೀತಿಯಲ್ಲಿ ಬಳಕೆಯಾಗುತ್ತಿದೆಯಾ ಅಥವಾ ಸಮಾಜಿಕವಾಗಿ ಇರುವಂತ ಜಾತಿ, ವರ್ಗ, ಶ್ರೇಣಿ ಇತ್ಯಾದಿ ಅಂಶಗಳು ಗಡಿಗಳನ್ನು ಹೊಂದಿವೆಯೆ ಎಂಬುದನ್ನು ಪರೀಕ್ಷಿಸುವುದು ಮತ್ತು ಸಾಮಾಜಿಕ ಸಂರಚನೆಯುಳ್ಳ ಕಡೆ ಇರುವಂತಹ ನಿಷೇಧ, ನಿರ್ಬಂಧಗಳು ಮಹಿಳೆಯರ ಬಳಕೆಯ ಭಾಷೆಯನ್ನು ಹೇಗೆ ವಿವರಿಸುತ್ತಿವೆ ಎಂಬುದನ್ನು ಶೋಧಿಸುವುದು ಪ್ರಸ್ತುತ ಅಧ್ಯಯನದ ಉದ್ದೇಶಗಳಾಗಿವೆ.

## ೧.೨. ಅಧ್ಯಯನದ ವಿಧಾನ

ಗುಣಾತ್ಮಕ (Qualitative) ವಿಧಾನವನ್ನು ಅನುಸರಿಸಿ ಪ್ರಸ್ತುತ ಅಧ್ಯಯನ ನಡೆಸಲಾಗಿದೆ. ಭಾಷಿಕ ಮಾಹಿತಿಯನ್ನು ಇರಿಸಿಕೊಂಡು ಚರ್ಚಿಸುವಲ್ಲಿ ವಿಶ್ಲೇಷಣಾತ್ಮಕ ವಿಧಾನವನ್ನು ಅನುಸರಿಸಲಾಗಿದೆ.

ಆರಂಭದ ಹಂತದಲ್ಲಿ ಈ ವಿಷಯದ ಕುರಿತು ಲಭ್ಯವಿರುವ ಪುಸ್ತಕಗಳು, ಅಧ್ಯಯನ ಮತ್ತು ವಿದ್ವಾಂಸರ ಜೊತೆಗಿನ ಸಂವಾದದ ಮೂಲಕ ಪೂರ್ವಕಲ್ಪನೆಯನ್ನು ಕಟ್ಟಿಕೊಳ್ಳಲಾಯಿತು. ಇದನ್ನು ಪರಿಶೀಲಿಸುವ ನಿಟ್ಟಿನಲ್ಲಿ ಪ್ರಾಥಮಿಕ ಹಂತದ ಕ್ಷೇತ್ರಕಾರ್ಯ ನಡೆಸಲಾಯಿತು. ಇವುಗಳ ಆಧಾರದಲ್ಲಿ ಪ್ರಶ್ನಾವಳಿಯೊಂದನ್ನು ರಚಿಸಲಾಯಿತು. ಈ ಪ್ರಶ್ನಾವಳಿಯನ್ನು ಆಧಾರವಾಗಿಟ್ಟುಕೊಂಡು ಮಹಿಳೆಯರ ಜೊತೆ ನೇರ ಮಾತಿಗಿಳಿಯುವ ಮೂಲಕ ಅನೇಕ ಸಂಗತಿಗಳನ್ನು ಗ್ರಹಿಸಲಾಯಿತು.

ಈ ಬಗೆಯ ಅಧ್ಯಯನಗಳಲ್ಲಿ ಪ್ರಶ್ನಾವಳಿಯೊಂದೇ ಎಲ್ಲ ಹಂತದಲ್ಲಿ ನೆರವಾಗುವುದಿಲ್ಲ. ಹೀಗಾಗಿ ವಿವಿಧ ಹಿನ್ನೆಲೆಯ ಮಹಿಳೆಯರೊಂದಿಗೆ ನೇರವಾಗಿ ಮಾತಿಗಿಳಿಯುವ ಮೂಲಕ ಮತ್ತು ಅವರಲ್ಲೊಬ್ಬರಾಗಿ ಚಟುವಟಿಕೆಗಳಲ್ಲಿ ತೊಡಗಿಕೊಂಡು ಗಮನಿಸುವ ಮೂಲಕ ಆಧಾರಗಳನ್ನು ಕಲೆ ಹಾಕಲಾಯಿತು. ಹಾಗೂ ದೂರ ನಿಂತು ಗಮನಿಸುವ ಮೂಲಕ ಅಗತ್ಯ ಮಾಹಿತಿ ಸಂಗ್ರಹಿಸಲಾಯಿತು. ಜೊತೆಗೆ ಪ್ರತಿಯೊಂದು ಹಂತದಲ್ಲಿ ಅನುಭವದ ಆಧಾರದಲ್ಲಿ ಪ್ರಶ್ನಾವಳಿಯನ್ನು ಪರಿಷ್ಕರಿಸುವ ದೃಷ್ಟಿಕೋನವನ್ನು ಸೂಕ್ಷ್ಮಗೊಳಿಸುವ ಪ್ರಯತ್ನ ಮಾಡುತ್ತಾ ಬರಲಾಗಿದೆ. ಈ ಎಲ್ಲ ಬಗೆಯಲ್ಲಿ ಪ್ರಸ್ತುತ ಅಧ್ಯಯನಕ್ಕೆ ಬೇಕಾದ ಮಾಹಿತಿಗಳನ್ನು ಪಡೆದು ಅಧ್ಯಯನವನ್ನು ನಡೆಸಲಾಗಿದೆ. ಇಲ್ಲಿ ಮುಖ್ಯವಾಗಿ ಪ್ರಶ್ನಾವಳಿ ಮುಖಾಂತರ, ಅವಲೋಕನ ಜೊತೆಗೆ ಸಂದರ್ಶನ ವಿಧಾನದಿಂದ ಅಧ್ಯಯನ ಮಾಡಲಾಗಿದೆ.

## ೧.೩. ಅಧ್ಯಯನದ ವ್ಯಾಪ್ತಿ

ಭಾಷೆ ಎನ್ನುವಾಗ ಆಂಗಿಕ ಸನ್ನೆಗಳನ್ನು, ಸಂಕೇತಗಳನ್ನು ಸಂಗ್ರಹವಾಗಿ ಅಧ್ಯಯನ ಮಾಡುತ್ತಿಲ್ಲ. ಇಲ್ಲಿ ಮುಖ್ಯವಾದ ಗಮನ ಇರುವುದು ಮಾತಿನ (Speech) ಕಡೆಗೆ ಮತ್ತು ಈ ಮಾತಿನ ಹಾಗೆಯೇ ಧ್ವನಿಮಾತ್ಮಕವಾದ ಮತ್ತು ರಾಚನಿಕ ವಿಶ್ಲೇಷಣೆಗೂ ಹೋಗಿಲ್ಲ. ಸಾಂದರ್ಭಿಕವಾಗಷ್ಟೇ ಅವುಗಳನ್ನು ಗಮನಿಸಲಾಗಿದೆ.

ಪದಗಳು ಮತ್ತು ಸಂದರ್ಭಕ್ಕನುಗುಣವಾಗಿ ಬಳಕೆಯಲ್ಲಾಗುವ ವ್ಯತ್ಯಾಸ ಮಹಿಳೆಯರ ಭಾಷಿಕ ವರ್ತನೆ ಇವುಗಳನ್ನು ಗಮನಕ್ಕೆ ತೆಗೆದುಕೊಳ್ಳಲಾಗಿದೆ. ಸಮಾಜದ ಭೌತಿಕ ಮತ್ತು ಅಭೌತಿಕ, ಸಂಸ್ಕೃತಿ ಹಾಗೂ ನಂಬಿಕೆ, ಆಚರಣೆ, ಗ್ರಹಿಕೆ ಮತ್ತು ಅವುಗಳಿಗೆ ಮಹಿಳೆಯೊಡನೆ ಇರುವ ಸಂಬಂಧವನ್ನು ಭಾಷಿಕ ವಿವರಗಳ ಮೂಲಕ ವಿಶ್ಲೇಷಣೆಗೊಳಪಡಿಸಲಾಗಿದೆ. ಮಹಿಳೆಯನ್ನು ಒಳಗೊಳ್ಳುವ ಮತ್ತು ಪ್ರತ್ಯೇಕಿಸುವ ಸಂಗತಿಗಳು ಇಲ್ಲಿ ಮುಖ್ಯವಾಗಿವೆ.

ಸಾಮಾಜಿಕ ಮತ್ತು ಸಾಂಸ್ಕೃತಿಕವಾಗಿ ನಿರೂಪಣೆಗೊಳ್ಳುವ ಹಿಂದಿನ ರಾಜಕೀಯ, ಲಿಂಗ ತಾರತಮ್ಯ, ಸಾಮಾಜಿಕ ನಿಯಂತ್ರಣ ಮತ್ತು ಆಚರಣೆಗಳ ನಡುವಣ ಸಂಬಂಧ, ನಿರ್ದಿಷ್ಟ ಕ್ಷೇತ್ರಕ್ಕೆ ಸಂಬಂಧಿಸಿದ ಜ್ಞಾನ ಮತ್ತು ಗ್ರಹಿಕೆ ಸಾಮಾಜಿಕ ಸಂರಚನೆಯಲ್ಲಿ ಹೇಗೆ ಪ್ರತಿನಿಧಿಸುತ್ತವೆ ಎಂಬುದನ್ನು ಇಲ್ಲಿ ಅಧ್ಯಯನ ಮಾಡಲಾಗಿದೆ.

ಪ್ರಾದೇಶಿಕವಾಗಿ ಈ ಅಧ್ಯಯನಕ್ಕೆ ಹೈದಾರಾಬಾದ್ ಕರ್ನಾಟಕ ಪರಿಸರವನ್ನು ಅಧ್ಯಯನದ ವ್ಯಾಪ್ತಿಯಾಗಿ ತೆಗೆದುಕೊಳ್ಳಲಾಗಿದೆ. ಇದು ಅಧ್ಯಯನದ ಪ್ರಾದೇಶಿಕ ಮಿತಿಯಾಗುತ್ತದೆ. ಇಲ್ಲಿ ಕೆಲವು ಪ್ರಾತಿನಿಧಿಕವಾದ ಆಕರಗಳನ್ನು ಅಧ್ಯಯನಕ್ಕೆ ಅನುಕೂಲತೆಗೆ ತಕ್ಕಂತೆ ಬಳಸಿಕೊಳ್ಳಲಾಗಿದೆ.

ಸಮಾಜದಲ್ಲಿ ರೂಢಿಯಲ್ಲಿ ಇರುವ ಜಾತೀಯತೆ, ಶ್ರೇಣೀಕರಣ, ವರ್ಗ ತಾರತಮ್ಯ ಇತ್ಯಾದಿ ಅಂಶಗಳನ್ನು ಅಧ್ಯಯನದ ಅನುಕೂಲತೆಗೆ ವ್ಯಾಪ್ತಿಯಾಗಿ ಮಾಡಿಕೊಳ್ಳಲಾಗಿದೆ. ಹೀಗೆ ಭಾಷಿಕವಾದ ಆಕರಗಳು ಪ್ರಾದೇಶಿಕವಾಗಿರುವ ವ್ಯಾಪ್ತಿಯನ್ನು ಜೊತೆಗೆ ಸಾಮಾಜಿಕ ಆಚರಣೆಗಳ ಸಹಾಯದೊಂದಿಗೆ ಈ ಅಧ್ಯಯನ ರೂಪುಗೊಂಡಿದೆ.

## ೧.೪. ಅಧ್ಯಯನದ ಮಹತ್ವ

ಹೆಣ್ಣು ಗಂಡುಗಳ ನಡುವೆ ಇರುವ ಅಸಮಾನತೆ ಒಂದು ಚಾರಿತ್ರಿಕವಾದ ಮತ್ತು ಸಾಮಾಜಿಕವಾದ ಸಂಗತಿ. ಇದು ಪ್ರಕಟಗೊಳ್ಳುವ ಬಗೆಗಳು ಹಲವು. ಭಾಷೆಯ ಈ ಅಸಮಾನತೆಯನ್ನು ಪ್ರಕಟಿಸುವ ಒಂದು ಸಾಧನವಾಗಿದೆ. ಸಾಮಾಜಿಕ ಭಾಷಾಶಾಸ್ತ್ರಜ್ಞರು ಹೇಳುವಂತೆ ಭಾಷೆಯು ಸಾಮಾಜಿಕ ಸಂಗತಿಗಳ ಸೂಚಕವಾಗಿ ಕೆಲಸ ಮಾಡುತ್ತದೆ. ವಯಸ್ಸು, ಜಾತಿ, ಅಂತಸ್ತು, ಶಿಕ್ಷಣ, ಪ್ರದೇಶ, ಲಿಂಗ ಮುಂತಾದ ನೆಲೆಗಳಲ್ಲಿ ಇರುವ ಸಾಮಾಜಿಕ ಭಿನ್ನತೆಗಳು ಭಾಷಿಕ ಬಳಕೆಗಳಲ್ಲಿ ಮೈದೋರುತ್ತವೆ.

ಈ ಅಧ್ಯಯನದಿಂದಾಗಿ ಹೆಣ್ಣು ಮತ್ತು ಭಾಷೆಯ ಸಂಬಂಧವನ್ನು ಗ್ರಹಿಸಲು ಸಾಧ್ಯವಾಗಿದೆ. ಭಾಷೆಯಲ್ಲೇ ಲಿಂಗತಾರತಮ್ಯವು ಬಿಂಬಿತವಾಗಿದೆ. ಇದರಿಂದಾಗಿ ಹೆಂಗಸು ತನ್ನ ಅಸ್ತಿತ್ವವನ್ನು ಕಡೆಗಣಿಸುವ ಭಾಷೆಯ ಮೂಲಕವೇ ತನ್ನನ್ನು ತಾನು ಮಂಡಿಸುವ ದುಃಸಾಹಸಕ್ಕೆ ತೊಡಗಿದ್ದಾಳೆ. ಜೊತೆಗೆ ತನ್ನ ಇಂತಹ ಬಿಕ್ಕಟ್ಟಿನ ಪರಿಸ್ಥಿತಿಯನ್ನು ಅರಿಯದೆ ತನ್ನ ಅಭಿವ್ಯಕ್ತಿಯ ಸೋಲುಗಳ ಬಗ್ಗೆ ಆಕೆ ಹತಾಶಳಾಗಿದ್ದಾಳೆ. ಈ ಬಗೆಯ ಅರಿವಿರುವ ಕೆಲವು ಮಹಿಳೆಯರೂ ಅನಿವಾರ್ಯವಾಗಿ ಈ ಭಾಷೆಯನ್ನು ಬಳಸುತ್ತಿದ್ದಾರೆ. ಭಾಷೆಯು ಹೆಣ್ಣಿನ ಅಭಿವ್ಯಕ್ತಿಗೆ ತಕ್ಕುದಾಗಿಲ್ಲ. ಬದಲಾಗಿ ಅಡೆತಡೆಗಳನ್ನೇ ಹೊಂದಿದೆ. ಈ ಎಲ್ಲ ಅಂಶಗಳು ಅಧ್ಯಯನದಿಂದ ತಿಳಿದುಬಂದಿದೆ. ಹಾಗಾಗಿ ಅಧ್ಯಯನ ಮಹತ್ವಪೂರ್ಣವಾಗಿದೆ.

## ೧.೫. ಅಧ್ಯಯನದ ಸ್ವರೂಪ

ಪ್ರಸ್ತುತ ಅಧ್ಯಯನದ ವಿಷಯವಾದ ಕನ್ನಡ ನುಡಿ ಬಳಕೆಯಲ್ಲಿ ಮಹಿಳೆ ಕುರಿತು ಅಧ್ಯಯನದ ಅನುಕೂಲತೆಗೆಂದು ಮುಖ್ಯವಾಗಿ ಒಟ್ಟು ಆರು ಅಧ್ಯಾಯಗಳಾಗಿ ವಿಭಾಗಿಸಿಕೊಂಡು ಅಧ್ಯಯನವನ್ನು ಪೂರ್ಣಗೊಳಿಸಲಾಗಿದೆ.

ಮೊದಲನೆಯ ಅಧ್ಯಾಯವು ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವೈಧಾನಿಕತೆಯ ಜೊತೆಗೆ ಇದುವರೆಗೂ ನಡೆದಿರುವಂತಹ ಅಧ್ಯಯನಗಳ ಸಮೀಕ್ಷೆಯನ್ನು ವಿವರಿಸುವ ಭಾಗವಾಗಿದೆ. ಈ ಅಧ್ಯಾಯದಲ್ಲಿ ಪ್ರಸ್ತುತ ವಿಷಯಕ್ಕೆ ಸಂಬಂಧಿಸಿದಂತೆ ಅಧ್ಯಯನಕ್ಕೆ ಬೇಕಾದ ಅಗತ್ಯ ದಾಖಲೆಗಳನ್ನು ಪ್ರಾಥಮಿಕ ಹಂತದಲ್ಲಿ ಸಮೀಕ್ಷೆ ಮಾಡಿ ಅಧ್ಯಯನ ಮುಂದುವರೆಸಲು ಸಹಾಯವಾಗುವ ಅಂಶಗಳನ್ನು ಈ ಅಧ್ಯಯನದಲ್ಲಿ ಗ್ರಹಿಸಲಾಗಿದೆ. ಅಧ್ಯಯನಕ್ಕೆ ಮೂಲ ಆಕರಗಳು, ಪೂರಕ ಆಕರಗಳ ಮಾಹಿತಿಯನ್ನು ಪಡೆದು ಅವುಗಳನ್ನು ವಿಭಾಗಿಸಿಕೊಳ್ಳುವುದು ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ.

ಅಧ್ಯಾಯ ಎರಡು; ಭಾಷೆ - ಮಹಿಳೆಯ ಕುರಿತು ವಿವಿಧ ನಿರ್ವಚನಗಳ ಕುರಿತಾದ ಭಾಗ ಇದಾಗಿದೆ. ಈ ಅಧ್ಯಾಯವನ್ನು ಮೂರು ವಿಭಾಗಗಳಲ್ಲಿ ವಿಭಾಗಿಸಿ ಪ್ರಸ್ತುತ ಅಧ್ಯಯನಕ್ಕೆ ಅನುಕೂಲತೆಗೆ ಅನುಗುಣವಾಗಿ ಇದನ್ನು ರೂಪಿಸಿಕೊಳ್ಳಲಾಗಿದೆ.

ಮುಖ್ಯವಾಗಿ ಸಾಮಾಜಿಕವಾಗಿರುವಂತಹ ನಂಬಿಕೆ, ಗ್ರಹಿಕೆ ಮತ್ತು ನಿರೂಪಣೆಗಳನ್ನು ತೆಗೆದುಕೊಂಡು ಈ ಅಧ್ಯಾಯವನ್ನು ರೂಪಿಸಲಾಗಿದೆ. ಸಮಾಜದಲ್ಲಿ ಇರುವ ಹಲವಾರು ನಂಬಿಕೆಗಳು ಮಹಿಳೆಯರ ಭಾಷೆಯನ್ನು ನಿಯಂತ್ರಿಸುತ್ತಿರುತ್ತವೆ. ಇವುಗಳನ್ನು ಉದಾಹರಣೆ ಸಹಿತ ಚರ್ಚಿಸಲಾಗಿದೆ. ಹಾಗೇನೇ ನಂಬಿಕೆಯಂತೆ ವಾಸ್ತವತೆ ಇರುವುದಿಲ್ಲ. ಹಲವಾರು ನಂಬಿಕೆಗಳು, ಸಮಾಜ ಪರವಾಗಿ ಕಾರ್ಯ ರೂಪಿಸುತ್ತಿರುವುದು ಮಹಿಳೆಯರಿಗೆ ಅವುಗಳು ಹಲವು ತಡೆಗೋಡೆಗಳನ್ನು ರೂಪಿಸಿರುವಂತಹ ಅಂಶಗಳ ಕುರಿತಾಗಿ ಈ ಭಾಗದಲ್ಲಿ ಚರ್ಚಿಸಲಾಗಿದೆ. ಸಮಾಜದಲ್ಲಿ ಗಂಡು, ಹೆಣ್ಣುಗಳನ್ನು ಉದ್ದೇಶಿಸಿದಂತೆ ಕೆಲವು ಪೂರ್ವಕಲ್ಪಿತ ನಂಬಿಕೆಗಳಿವೆ. ಅವುಗಳು ಸಹ ಇಲ್ಲಿ ಚರ್ಚೆಗೆ ಒಳಪಟ್ಟಿವೆ.

ಸಾಮಾಜಿಕವಾಗಿ ಮಹಿಳೆಯರ ಭಾಷೆಯ ಕುರಿತಂತೆ ಇರುವಂತಹ ಗ್ರಹಿಕೆಗಳನ್ನು ವಾಸ್ತವವಾಗಿ ಮಹಿಳೆಯರ ಭಾಷೆ ಹೇಗಿದೆ, ಸಾಮಾಜಿಕವಾಗಿ ಇರುವಂತಹ ಗ್ರಹಿಕೆಗಳನ್ನು ಹಲವಾರು ನಿರೂಪಣೆಗಳ ಸಹಾಯದಿಂದ ಚರ್ಚಿಸಲಾಗಿದೆ. ಮಹಿಳೆ ಭಾಷೆಯನ್ನು ಗ್ರಹಿಸಿಕೊಳ್ಳುತ್ತಿರುವ ವಿಚಾರಗಳನ್ನು ಮಹಿಳೆ ಮತ್ತು ಪುರುಷ ಸಮಾಜದಲ್ಲಿ ಕಾರ್ಯ ನಿರ್ವಹಿಸುವಾಗ ಒಂದೇ ಸಂದರ್ಭದಲ್ಲಿ ಇಬ್ಬರನ್ನು ಗ್ರಹಿಸಿಕೊಳ್ಳುವಂತಹ ವಿಚಾರಗಳನ್ನು ಕ್ಷೇತ್ರಕಾರ್ಯದ ಮೂಲಕ ಕಂಡುಕೊಂಡಿರುವಂತಹ ಸಂಗತಿಗಳನ್ನು ಈ ಭಾಗದಲ್ಲಿ ಚರ್ಚಿಸಲಾಗಿದೆ.

ಸಾಮಾಜಿಕವಾಗಿ ರಚನೆಗೊಂಡಿರುವ ನಿರೂಪಣೆಗಳಲ್ಲಿ ಮಹಿಳೆಯನ್ನು ಒಳಗೊಳ್ಳುವ ನಂಬಿಕೆ, ವಾಸ್ತವ ಗ್ರಹಿಕೆಗಳ ಜೊತೆಗೆ ಮಹಿಳೆಯನ್ನು ನಿರೂಪಿಸುತ್ತಿರುವ ಬಗೆಯನ್ನು ಸಹ ಈ ಭಾಗದಲ್ಲಿ ವಿವರಿಸಲಾಗಿದೆ. ವಾಸ್ತವವಾಗಿ ಮಹಿಳೆ ಎನ್ನುವ ಸಮಾಜದಲ್ಲಿ ಮಹಿಳೆಯನ್ನು ಹೇಗೆ ಮಂಡಿಸುತ್ತಿದೆ ಎಂಬುದನ್ನು ಹಲವು ಆಯಾಮಗಳಿಂದ ಈ ಭಾಗದಲ್ಲಿ ಚರ್ಚಿಸಲಾಗಿದೆ.

ಅಧ್ಯಾಯ ಮೂರರಲ್ಲಿ ಮಹಿಳೆ ಭಾಷಾ ಬಳಕೆ, ನಿರ್ದೇಶನ, ಅಪೇಕ್ಷೆಗಳನ್ನು ಕುರಿತಂತೆ ವಿವರಿಸಲಾಗಿದೆ. ಇದನ್ನು ಮುಖ್ಯವಾಗಿ ಎರಡು ಭಾಗಗಳಲ್ಲಿ ವಿಭಾಗಿಸಿ ಅಧ್ಯಯನ ಮಾಡಲಾಗಿದೆ. ಸಾಮಾಜಿಕ ನಿರ್ದೇಶನ - ಅಪೇಕ್ಷೆ ಎಂಬುದರ ಕುರಿತಾಗಿ ಮೊದಲು ವಿವರಿಸಿಕೊಳ್ಳಲಾಗಿದೆ. ಪುರುಷ ಪ್ರಧಾನ ಸಮಾಜ, ಮಹಿಳೆ ಮತ್ತು ಪುರುಷ ಹೇಗಿರಬೇಕೆಂದು ನಿರೂಪಿಸುತ್ತದೆ. ಅದಕ್ಕೆ ಅನುಗುಣವಾಗಿ ನಂಬಿಕೆಗಳನ್ನು ರೂಪಿಸಲಾಗಿದೆ. ಈ ನಂಬಿಕೆ, ಆಚರಣೆ, ಸಂಪ್ರದಾಯಗಳನ್ನು ಮಹಿಳೆಯರು ಕಡ್ಡಾಯವಾಗಿ ಆಚರಿಸಬೇಕಾಗುತ್ತದೆ. ಪುರುಷರು ಇವುಗಳಿಂದ ವಿನಾಯಿತಿಯನ್ನು ಪಡೆದಿರುತ್ತಾರೆ. ವ್ಯವಸ್ಥೆಯಲ್ಲಿ ಸ್ತ್ರೀ-ಪುರುಷರು ಹೇಗೆ ಇರಬೇಕು ಎಂಬುದನ್ನು ವ್ಯವಸ್ಥೆ ನಿರೀಕ್ಷಿಸುತ್ತದೆಯೋ ಅದನ್ನು ಕುರಿತಾಗಿ ವಿಶ್ಲೇಷಿಸಲಾಗಿದೆ. ಮತ್ತು ಸಮಾಜ ತನ್ನ ಅಪೇಕ್ಷೆಯ ಈಡೇರಿಕೆಗೆ ಮಾಡುತ್ತಿರುವಂತಹ ನಿರ್ದೇಶನಗಳು ಎಂಥವು ಎಂಬುದನ್ನು ಈ ಭಾಗದಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಈ ಅಧ್ಯಾಯದ ಎರಡನೇ ಭಾಗದಲ್ಲಿ ಸಾಂಸ್ಕೃತಿಕ ಪಾರಂಪರಿಕ ನಿರ್ದೇಶನ-ನೀತಿ ನಿರೂಪಣೆಗಳನ್ನು ವಿವರಿಸಿಕೊಳ್ಳಲಾಗಿದೆ. ಪಾರಂಪರಿಕವಾಗಿ ರಚನೆಗೊಂಡಿರುವಂತಹ ಸಾಂಸ್ಕೃತಿಕ ಆಚಾರ ವಿಚಾರಗಳಲ್ಲಿ ಮಹಿಳೆಗೆ ಇರುವಂತಹ ನೀತಿ ನಿರ್ದೇಶನಗಳನ್ನು ಚರ್ಚಿಸಲಾಗಿದೆ. ಸಮಾಜದಲ್ಲಿ ಗಾದೆ, ಒಡಪು, ಒಗಟುಗಳನ್ನು ಮುಂದಿಟ್ಟುಕೊಂಡು ಸಾಮಾಜಿಕವಾಗಿರುವ ನಿರೂಪಣೆಗಳಲ್ಲಿ ಕಂಡು ಬಂದಿರುವಂತಹ ನೀತಿ, ನಿರ್ದೇಶನಗಳನ್ನು ಇಲ್ಲಿ ವಿಶ್ಲೇಷಿಸಲಾಗಿದೆ. ಮಹಿಳೆಯರು ಆ ನೀತಿ ಪಾಲನೆ ಕ್ರಮ ವಿರೋಧಿಸುವ, ಪ್ರತಿರೋಧದ ಕುರಿತು ಚರ್ಚಿಸಲಾಗಿದೆ. ಮಹಿಳೆ ಯಾವ ಬಗೆಯ ಕೆಲಸಗಳನ್ನು ಮಾಡಬೇಕು, ಕುಟುಂಬದಲ್ಲಿ ಮಹಿಳೆಯ ಪಾತ್ರವೆಷ್ಟು, ಸಾಮಾಜಿಕ ವ್ಯವಹಾರದಲ್ಲಿ ಆಕೆಗಿರಬೇಕಾದ ಮಿತಿಗಳೆಷ್ಟು, ವೃತ್ತಿಯಲ್ಲಿ ಯಾವುದು ಪುರುಷನಿಗೆ ಯಾವುದು ಮಹಿಳೆಗೆ ಎಂದು ನೀತಿ ನಿರೂಪಿಸಲಾಗಿದೆ. ಅವುಗಳಿಗೆ ನಿರ್ದೇಶನಗಳನ್ನು ರಚಿಸಿರುವ ಕ್ರಮಗಳನ್ನು ಕುರಿತಂತೆ ಮುಖ್ಯವಾಗಿ ಈ ಭಾಗದಲ್ಲಿ ಚರ್ಚಿಸಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಮಹಿಳೆಯ ಭಾಷಾ ಬಳಕೆ ಮಾತಿನ ನೆಲೆ ಎಂಬ ವಿಷಯದ ಚರ್ಚೆ ಇದೆ. ಈ ವಿಷಯದ ಅಧ್ಯಯನದ ಅನುಕೂಲತೆಗಾಗಿ ಮೂರು ವಿಭಾಗ ಕ್ರಮಗಳಾಗಿ ಮಾಡಿಕೊಂಡು ಈ ಅಧ್ಯಾಯವನ್ನು ರಚಿಸಲಾಗಿದೆ. ಮೊದಲನೆಯದು ಸಾಮಾಜಿಕ ಸಂರಚನೆ ಹಿನ್ನೆಲೆಯಲ್ಲಿ ಭಿನ್ನತೆ. ಇದರಲ್ಲಿ ಜಾತಿ, ವರ್ಗ, ಶ್ರೇಣಿ, ಅಂತಸ್ತು ಈ ವಿಚಾರಗಳನ್ನು ಗಮನದಲ್ಲಿ ಇಟ್ಟುಕೊಂಡು ಈ ಭಾಗವನ್ನು ರೂಪಿಸಲಾಗಿದೆ.

ಸಮಾಜದಲ್ಲಿ ಅನಿಷ್ಟ ಪದ್ಧತಿಯಾಗಿ ಬೆಳೆದುಬಂದಿರುವಂತಹ ಜಾತಿ, ಶ್ರೇಣೀಕೃತ ವ್ಯವಸ್ಥೆ ಒಳಗಡೆ ಮಹಿಳೆ ಹೇಗೆ ರಚನೆಗೊಂಡಿದ್ದಾಳೆ ಎಂಬುದನ್ನು ಈ ಭಾಗದಲ್ಲಿ ಚರ್ಚಿಸಲಾಗಿದೆ. ಮಹಿಳೆ ಎಂಬುದು ಒಂದು ಸಮುದಾಯವಾಗಿದ್ದರೂ, ಸಾಮಾಜಿಕವಾಗಿರುವಂತಹ ಈ ಕಟ್ಟಳೆಗಳಲ್ಲಿ

ಮಹಿಳೆ ಬೇರೆ ಬೇರೆಯಾಗಿಯೇ ನಿರೂಪಿಸಲ್ಪಟ್ಟಿದ್ದಾಳೆ. ಸಾಮಾಜಿಕ ಸಂರಚನೆಯ ಕಾರಣಕ್ಕಾಗಿ ಪ್ರತಿಯೊಂದು ಸಮುದಾಯದ ಅಥವಾ ಜಾತಿಯ, ಶ್ರೇಣಿಯ ಮಹಿಳೆಯ ಭಾಷೆ, ಆಚಾರ, ವಿಚಾರ, ನಂಬಿಕೆ, ಭಿನ್ನ ಮಾದರಿಯಲ್ಲಿ ಕಂಡು ಬರುತ್ತವೆ. ಈ ಎಲ್ಲ ಅಂಶಗಳನ್ನು ಕುರಿತಂತೆ ಈ ಭಾಗದಲ್ಲಿ ಚರ್ಚಿಸಲಾಗಿದೆ. ಒಟ್ಟಾರೆ ಮಹಿಳೆ ಕುರಿತಾದ ಪರಿಕಲ್ಪನೆಗೆ ಸಂಬಂಧಿಸಿದಂತೆ ಅಧ್ಯಯನ ಮಾಡಲಾಗಿದೆ ಹಾಗೂ ಜಾತಿ ಪರಿಕಲ್ಪನೆಯನ್ನು ಕುರಿತಂತೆ ಜಾತಿ ಆಧಾರಿತವಾಗಿ ಭಾಷೆಯ ಬಳಕೆಯಲ್ಲಿ ಇರುವಂತಹ ಭಿನ್ನತೆಯ ಅಂಶಗಳನ್ನು ಗುರುತಿಸುವಲ್ಲಿ ಈ ಅಧ್ಯಯನ ಮಹತ್ವ ಪಾತ್ರ ವಹಿಸುತ್ತದೆ. ಭಾಷೆ ಮತ್ತು ಪ್ರತಿಷ್ಠೆಯ ಪ್ರಶ್ನೆಗಳು, ಬೈಗುಳಗಳು, ಅಸ್ಮಿತೆಯನ್ನು ಸ್ಥಾಪಿಸಿಕೊಳ್ಳುವ ದಾರಿಯಲ್ಲಿ ಮಿತಿಗಳ ರಚನೆ, ಜಾತಿ ವ್ಯವಸ್ಥೆಯಲ್ಲಿ ಹೆಚ್ಚಿನ ಭಾಷಿಕ ಚಹರೆಗಳು ಇತ್ಯಾದಿ ಅಂಶಗಳನ್ನು ಈ ಭಾಗ ಒಳಗೊಂಡಿದೆ.

ಈ ಅಧ್ಯಾಯದ ಎರಡನೆಯ ಭಾಗದಲ್ಲಿ ನಿಷೇಧ ನಿರ್ಬಂಧದ ನೆಲೆಗಳನ್ನು ಚರ್ಚಿಸಲಾಗಿದೆ. ಮಹಿಳೆಯ ಬಗೆಗೆ ಸಮಾಜದಲ್ಲಿ ಅನೇಕ ನಿಷೇಧ, ನಿರ್ಬಂಧಗಳು ರಚನೆಗೊಂಡಿವೆ. ಆ ನಿಷೇಧ ನಿರ್ಬಂಧಗಳು ಭಾಷೆಯಲ್ಲಿ ಗೋಚರಗೊಳ್ಳುತ್ತವೆ. ಈ ಅಂಶಗಳನ್ನು ಮುಂದಿಟ್ಟುಕೊಂಡು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಜೊತೆಗೆ ಮಹಿಳೆಯರ ಭಾಷೆಗೂ ಅಂದರೆ ಮಹಿಳೆಯರ ಮಾತನ್ನು ಮೌನಗೊಳಿಸುವ ಕೆಲವು ನಿಷೇಧಗಳು ರಚನೆಗೊಂಡಿವೆ. ಅವುಗಳ ಕುರಿತಾಗಿ ಅಧ್ಯಯನ ಮಾಡಲಾಗಿದೆ. ಮಹಿಳೆಯರ ಮಾತು ಮತ್ತು ವರ್ತನೆಗೆ ಸಮಾಜದಲ್ಲಿ ಇರುವಂತಹ ನಿರ್ಬಂಧಗಳು ಮತ್ತು ನಿಷೇಧಗಳನ್ನು ಉದಾಹರಣೆಗಳ ಸಹಿತವಾಗಿ ಈ ಭಾಗದಲ್ಲಿ ಚರ್ಚಿಸಲಾಗಿದೆ

ಈ ಅಧ್ಯಾಯನದ ಮೂರನೆಯ ಭಾಗದಲ್ಲಿ ಮಹಿಳೆಗೆ ಇರುವಂತಹ ಮುಕ್ತತೆ ಮತ್ತು ಸ್ವತಂತ್ರತೆಯ ನೆಲೆಗಳು ಹೇಗಿವೆ ಎಂಬುದನ್ನು ಈ ಭಾಗದಲ್ಲಿ ಅಧ್ಯಯನ ಮಾಡಲಾಗಿದೆ. ಸಮಾಜದಲ್ಲಿ ಮಹಿಳೆಗೆ ಮುಕ್ತವಾಗಿ ಮತ್ತು ಸ್ವತಂತ್ರವಾಗಿರಲೂ ಇರುವಂತಹ ಸ್ಥಳಾವಕಾಶಗಳು ಎಲ್ಲಿವೆ. ಮಹಿಳೆಯರು ಈ ಸ್ಥಳಾವಕಾಶಗಳಲ್ಲಿ ಎಷ್ಟು ಸ್ವತಂತ್ರರಾಗಿದ್ದಾರೆ, ಎಷ್ಟು ಮುಕ್ತರಾಗಿದ್ದಾರೆ ಎಂಬುದನ್ನು ಕಂಡುಕೊಳ್ಳುವುದಕ್ಕೆ ಈ ಭಾಗ ಮಹತ್ವದ್ದಾಗಿದೆ. ಹಾಗೆಯೇ ಇಲ್ಲಿ ಹಲವಾರು ಆಚರಣೆ, ವಿಚಾರಗಳಲ್ಲಿ ಮಹಿಳೆಗೆಂದಿರುವ ಸ್ಥಳಾವಕಾಶಗಳನ್ನು ನಿದರ್ಶನ ಸಹಿತ ಗುರುತಿಸುವ ಚರ್ಚೆ ಈ ಭಾಗದಲ್ಲಿದೆ.

ಅಧ್ಯಾಯ ಐದು: ಭಿನ್ನತೆ ಅಸಮಾನತೆಯ ಪರಿಕಲ್ಪನೆ ಮತ್ತು ವಾಸ್ತವ - ಭಾಷೆಯಲ್ಲಿ ಇರುವಂತ ತಾರತಮ್ಯಗಳು ಯಾವುವು, ಭಾಷಾ ಭಿನ್ನತೆಗಳು ಎಂಬ ಪರಿಕಲ್ಪನೆಯನ್ನು ಇಲ್ಲಿ ಹಲವು ಆಯಾಮಗಳಲ್ಲಿ ಚರ್ಚಿಸಲಾಗಿದೆ. ಮಹಿಳಾ ಭಾಷಾಧ್ಯಯನಕಾರರೂ ಭಾಷೆಯೊಳಗಡೆಯ ಭಿನ್ನತೆಗಳನ್ನು ಕೆಲವು ಸಂದರ್ಭದಲ್ಲಿ ತಾರತಮ್ಯವಾಗಿ ಗುರುತಿಸುತ್ತಿದ್ದಾರೆ. ಭಾಷೆಯಲ್ಲಿ ಕೆಲವು

ತಾರತಮ್ಯಗಳಿವೆ. ಇವುಗಳು ಸಹಜ ಎಂಬಂತೆ ಮತ್ತೊಂದು ಪಂಥದ ಪರಿಕಲ್ಪನೆಯಾಗಿದೆ. ಈ ಗೊಂದಲವನ್ನು ಈ ಭಾಗದಲ್ಲಿ ಚರ್ಚಿಸಲಾಗಿದೆ. ಇಲ್ಲಿ ತಾರತಮ್ಯ ಮತ್ತು ಭಿನ್ನತೆಗಳನ್ನು ವಾಸ್ತವದಲ್ಲಿ ಇಟ್ಟು ಚರ್ಚಿಸಲಾಗಿದೆ.

ಈ ಪದಗಳ ಶಬ್ದಶಹ ಅರ್ಥ ನಿಘಂಟುಗಳಲ್ಲಿ ಹೇಗೆ ಬಳಕೆಯಾಗಿದೆ ಎಂದರೆ ಮೊದಲು ನಿಘಂಟಿನ ಅರ್ಥಗಳನ್ನು ಮುಂದಿಟ್ಟುಕೊಂಡು ಈ ಭಾಗವನ್ನು ಮುಂದುವರಿಸಲಾಗಿದೆ. ವಿಶೇಷವಾಗಿ ಮಹಿಳಾ ಪದಕೋಶಗಳನ್ನು ಇರುವಂತಹ ಅರ್ಥಗಳನ್ನು ಇಲ್ಲಿ ಗಮನಿಸಲಾಗಿದೆ. ಈ ಪದಕೋಶಗಳು, ನಿಘಂಟುಗಳು ಕೊಡುತ್ತಿರುವಂತಹ ಅರ್ಥಗಳು ಮತ್ತು ಈ ಪರಿಕಲ್ಪನೆಗಳು ಅಧ್ಯಯನಕಾರರಲ್ಲಿ ಯಾವ ಬಗೆಯಲ್ಲಿ ಗ್ರಹಿತವಾಗುತ್ತಿವೆ ಎಂಬುದನ್ನು, ವಾಸ್ತವದಲ್ಲಿಟ್ಟು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಸಾಮಾಜಿಕರಲ್ಲಿ ಬಳಕೆಯಲ್ಲಿರುವಂತಹ ಸಾಧನಗಳ ಮೂಲಕ ಈ ಚರ್ಚೆಯನ್ನು ಮುಂದುವರೆಸಲಾಗಿದೆ. ಅಂದರೆ ಭಾಷೆಯಲ್ಲಿ ಇರುವಂತಹ ಅರ್ಥವೇನು ಮತ್ತು ಈ ಪರಿಕಲ್ಪನೆಯಲ್ಲಿ ಅರ್ಥಗ್ರಹಿತವಾಗುತ್ತಿರುವಂತಹ ಗ್ರಹಿಕೆ ಈ ಎರಡು ಅಂಶಗಳನ್ನು ಕುರಿತು ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಅಧ್ಯಾಯ ಆರರಲ್ಲಿ ಒಟ್ಟಾರೆ ಕನ್ನಡ ನುಡಿಬಳಕೆಯಲ್ಲಿ ಮಹಿಳೆ ವಿಷಯದ ಅಧ್ಯಯನಕ್ಕೆ ಒಳಪಡಿಸಿರುವಂತಹ ಎಲ್ಲ ಅಂಶಗಳಲ್ಲಿ ಕಂಡುಬಂದಂತಹ ವಿಷಯಗಳನ್ನು ಅಧ್ಯಯನದ ಫಲಿತಗಳಾಗಿ ಕಂಡುಕೊಳ್ಳಲಾಗಿದೆ.

ಪ್ರಸ್ತುತ ಅಧ್ಯಯನಕ್ಕಾಗಿ ಬಳಸಿಕೊಂಡಿರುವಂತಹ ಮಾಹಿತಿಗಳ ವಿವರ ಅಂದರೆ, ವಕ್ತೃ ವಿವರಗಳನ್ನು ಇಲ್ಲಿ ಕೊಡಲಾಗಿದೆ. ಜೊತೆಗೆ ಈ ಅಧ್ಯಾಯ ರೂಪಿಸಲಿಕ್ಕೆ ಮಾಡಿಕೊಂಡಿರುವಂತಹ ಪ್ರಶ್ನಾವಳಿ ಮತ್ತು ವಕ್ತೃಗಳು ಉತ್ತರಿಸಿರುವಂತಹ ಕೆಲವು ಮಾಹಿತಿಗಳನ್ನು ನೀಡಲಾಗಿದೆ. ಜೊತೆಗೆ ಅಧ್ಯಯನಕ್ಕಾಗಿ ಬಳಸಿಕೊಂಡಿರುವಂತಹ ಪೂರಕ ಪುಸ್ತಕ ಗ್ರಂಥಗಳನ್ನು ಸಹ ಇಲ್ಲಿ ಕೊಡಲಾಗಿದೆ.

**ಇದುವರೆಗಿನ ಅಧ್ಯಯನದ ತಿಳಿವು**

"ಸ್ತ್ರೀವಾದಿ ಭಾಷಾಶಾಸ್ತ್ರ ಪ್ರವೇಶಿಕೆ' ಈ ಕೃತಿ ಬಹುಶಃ ಕನ್ನಡದಲ್ಲಿ ಮೊದಲಿಗೆ ಭಾಷೆ ಮುಖಾಂತರ ಮಹಿಳಾ ಸಂವೇದನೆಗಳನ್ನು ಅಧ್ಯಯನಕ್ಕೆ ಒಳಪಡಿಸಿರುವ ಕೃತಿಯಾಗಿದೆ. "ಸ್ತ್ರೀವಾದದ ಹರಹನ್ನು ಭಾಷಿಕ ನೆಲೆಯಲ್ಲಿ ಪರೀಕ್ಷಿಸುವುದು ಮತ್ತು ಪರಿಷ್ಕರಿಸುವುದು ಈ ಕೃತಿಯ ಮುಖ್ಯ ಗುರಿಯಾಗಿದೆ" ಎಂದು ಲೇಖಕರು ಪ್ರಸ್ತಾವನೆಯಲ್ಲಿ ಹೇಳಿಕೊಂಡಿದ್ದಾರೆ.

ಭಾಷಾಶಾಸ್ತ್ರಜ್ಞರು ಇದುವರೆಗೂ ಹಲವು ಜ್ಞಾನ ಶಾಖೆಗಳಲ್ಲಿ ಭಾಷೆಯನ್ನು ಅಧ್ಯಯನ ಮಾಡಿದ್ದಾರೆ. ಉದಾ:- ಭಾಷಾಶಾಸ್ತ್ರ, ಮನೋಭಾಷಾಶಾಸ್ತ್ರ, ಚಾರಿತ್ರಿಕ ಭಾಷಾಶಾಸ್ತ್ರ ಮುಂತಾದ ಭಾಷಾಶಾಸ್ತ್ರದ ಶಾಖೆಗಳಲ್ಲಿ ಭಾಷಾಧ್ಯಯನ ಹರಡಿಕೊಂಡಿದೆ. ಆದರೆ ಸ್ತ್ರೀವಾದಿ ಭಾಷಾಶಾಸ್ತ್ರ

ಅಧ್ಯಯವನ್ನು ಭಾಷಾ ವಿದ್ವಾಂಸರು ಆರಂಭಿಸಲಿಲ್ಲ. ಬದಲಿಗೆ ಸ್ತ್ರೀವಾದಿ ಅಧ್ಯಯನಕಾರರು ಈ ಬಗೆಯ ಅಧ್ಯಯನವನ್ನು ಆರಂಭಿಸಿದ್ದಾರೆ. ಹಾಗಾಗಿಯೇ ಸಹಜವಾಗಿ ಇಲ್ಲಿ ಕೆಲವೊಮ್ಮೆ ಏಕಮುಖ ಅಧ್ಯಯನವು ಏಕಮುಖಿಯಾಗಿದೆ ಎನ್ನಬಹುದು. ಪ್ರಸ್ತಾವನೆಯಲ್ಲಿ ಸ್ತ್ರೀವಾದಿ ಭಾಷಾಶಾಸ್ತ್ರ ಕೃತಿಯ ಭಾಷಾಶಾಸ್ತ್ರದ ಶಾಖೆಯಾಗಿಲ್ಲ. ಅದು ಸ್ತ್ರೀವಾದದ ಮುಖ್ಯ ಕಾರ್ಯಸೂಚಿಯನ್ನು ಗಮನದಲ್ಲಿ ಇರಿಸಿಕೊಂಡಿರುವ ಜ್ಞಾನವಲಯ ಹಾಗಾಗಿ ಇಲ್ಲಿನ ಚರ್ಚೆಗಳೆಲ್ಲವೂ ಸ್ತ್ರೀವಾದಿಗಳ ಪರಿಕಲ್ಪನೆಗಳನ್ನು ಎಂದೂ ಬಿಟ್ಟು ಕೊಡುವುದಿಲ್ಲ ಎಂದು ಸ್ಪಷ್ಟಪಡಿಸುತ್ತಾರೆ.

ಮಹಿಳಾ ಅಧ್ಯಯನದ ದೃಷ್ಟಿಕೋನದಿಂದ ಭಾಷೆಯನ್ನು ಅಧ್ಯಯನ ಮಾಡುತ್ತಿರುವವರು ಮೂರು ವಲಯಗಳನ್ನು ಆಯ್ದುಕೊಂಡಿದ್ದಾರೆ. "ಮೊದಲ ಎರಡು ವಲಯಗಳು ವಿಶ್ಲೇಷಣೆಯ ನೆಲೆಯಲ್ಲಿದ್ದರೆ, ಮೂರನೆಯದು, ಪರಿವರ್ತನೆಯನ್ನು ಗುರಿಯನ್ನಾಗಿರಿಸಿಕೊಂಡಿದೆ. ಮೊದಲೆರಡು ವಲಯಗಳು ೧. ಭಾಷೆಯಲ್ಲಿ ಹೆಣ್ಣಿನ ಪ್ರತಿನಿಧೀಕರಣ, ೨. ಗಂಡು ಹೆಣ್ಣುಗಳ ನಡುವಣ ತಾರತಮ್ಯಗಳನ್ನು ಭಾಷೆಯು ಕಾಯ್ದಿಡುತ್ತಿರುವ ಬಗೆ ಇವುಗಳನ್ನು ಗಮನದಲ್ಲಿರಿಸಿಕೊಳ್ಳುತ್ತದೆ. ಮೂರನೆಯ ವಲಯ ಇಂಥ ಪರಿಸ್ಥಿತಿಯಿಂದ ಹೊರಬರಲು ಭಾಷೆ ಎಂಬ ವ್ಯವಸ್ಥೆಯಲ್ಲೇ ಆಗಬೇಕಾಗಿರುವ ಪರಿವರ್ತನೆಗಳನ್ನು ಕುರಿತದ್ದು. ಈ ಮೂರನೆಯ ವಲಯದಲ್ಲಿ ಕ್ರಮಾಗತವಾಗಿ ಎರಡು ಹಂತಗಳಿವೆ. ಮೊದಲನೆಯದು ಈಗಿರುವ ಭಾಷೆಯಲ್ಲೇ ಸುಧಾರಣೆಗಳನ್ನು ತರುವ ಮೂಲಕ ಅದರಲ್ಲಿರುವ ಅಸಮಾನತೆಯ ಪೋಷಕ ನೆಲೆಗಳನ್ನು ಅಳಿಸಿ ಹಾಕಲು ಪರಿವರ್ತನೆಗೆ ಗುರಿಪಡಿಸಿ ಪ್ರತಿಭಾಷೆಯನ್ನು ಹೆಣ್ಣಿಗಾಗಿಯೇ ರೂಪಿಸಲು ಮುಂದಾಗುತ್ತದೆ. ಈ ಎಲ್ಲ ಅಂಶಗಳನ್ನು ದೃಷ್ಟಿಯಲ್ಲಿ ಇಟ್ಟುಕೊಂಡು ಸ್ತ್ರೀವಾದಿ ಭಾಷಾಶಾಸ್ತ್ರದ ಅಧ್ಯಯನವನ್ನು ಆರಂಭಿಸಿದ್ದಾರೆ ಎಂದು ಕೃತಿಯಲ್ಲಿ ವಿವರಿಸಿದ್ದಾರೆ.

ಈ ಎಲ್ಲ ಚರ್ಚೆಗಳು ಇಂಗ್ಲಿಶ್ ಮತ್ತು ಐರೋಪ್ಯ ಭಾಷೆಗಳನ್ನಾಡುವ ದೇಶಗಳಲ್ಲಿ ನಡೆದವುಗಳಾಗಿವೆ. ಕನ್ನಡದಲ್ಲಿ ಈ ಚರ್ಚೆಗಳನ್ನು ಮುಂದಿಟ್ಟುಕೊಂಡು ಅಧ್ಯಯನ ಮಾಡುವ ಅಗತ್ಯವಿದೆ ಎಂದು ಗುರುತಿಸುತ್ತಾರೆ. ಮುಖ್ಯವಾಗಿ ಈ ಕೃತಿಯು "ಪಾಶ್ಚಾತ್ಯ ಚಿಂತನೆಗಳ ಮಾದರಿಗಳನ್ನು ಅನುವಾದಿಸುವುದನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಈ ಅನುವಾದ ಸಮುಚ್ಚಯದಲ್ಲಿ ಭಾಷಾಶಾಸ್ತ್ರ ಎಂಬ ಜ್ಞಾನವಲಯದಲ್ಲಿ ಕೆಲಸ ಮಾಡುತ್ತಿರುವ ಹಲವು ಸ್ತ್ರೀವಾದಿ ಚಿಂತಕರು, ಸ್ತ್ರೀವಾದಿ ಚಿಂತನೆಗಳ ನೆಲೆಯಿಂದ ಭಾಷಾಶಾಸ್ತ್ರವನ್ನು ಮುಖಾಮುಖಿಯಾಗಿರುವ ಮಾದರಿಗಳು ಸೇರ್ಪಡೆಗೊಂಡಿವೆ.

ಭಾಷೆ ಒಳಗಡೆ ಹೆಣ್ಣನ್ನು ಪ್ರತಿನಿಧಿಸಿರುವ ರೀತಿ, ಪ್ರತಿಯೊಂದು ಭಾಷಿಕ ಸಮುದಾಯ ಹೆಣ್ಣಿನ ಕುರಿತು ಹೊಂದಿರುವ ನಂಬಿಕೆ, ಗ್ರಹಿಕೆ, ನಿರ್ಧಾರಗಳು, ದೃಷ್ಟಿಕೋನಗಳು ಎಲ್ಲವನ್ನು

ತಿಳಿಯಲು ಭಾಷೆಯ ಅಧ್ಯಯನ ಅಗತ್ಯವಾಗಿದೆ. ಈ ಎಲ್ಲ ಸಂದರ್ಭಗಳಲ್ಲಿ ಸಮಾಜ ಪ್ರತ್ಯೇಕವಾಗಿ, ಪರೋಕ್ಷವಾಗಿ ಕಾರಣವಾಗಿರುತ್ತದೆ. ಬಳಕೆಯಲ್ಲಿ ಮಹಿಳೆಯರೂ ಭಾಗೀದಾರರಾಗಿರುತ್ತಾರೆ. ತಮಗೆ ಅರಿವಿಲ್ಲದಂತೆ ತಮ್ಮ ವಿರುದ್ಧವೇ ಇರುವ ಭಾಷಿಕ ನೆಲೆಗಳನ್ನು ಭದ್ರಗೊಳಿಸುವಲ್ಲಿ ತಾವೂ ಪಾಲುದಾರರಾಗಿ ಬಿಡುತ್ತಾರೆ.

ಭಾಷೆಯಲ್ಲಿ ಇರುವಂತಹ ಹಲವು ಅಂಶಗಳನ್ನು ಮುಂದಿಟ್ಟುಕೊಂಡು ತಮ್ಮ ಅಧ್ಯಯನಗಳನ್ನು ಆರಂಭಿಸಿದ್ದಾರೆ. ಭಾಷೆಯ ಆಶಯ, ಭಾಷೆಯ ನಂಬಿಕೆ, ಭಾಷೆಯ ಬಳಕೆ ಈ ಅಂಶಗಳನ್ನು ಮುಖ್ಯವಾಗಿ ಆಧಾರವಾಗಿಟ್ಟುಕೊಂಡು ಅಧ್ಯಯನ ಆರಂಭಿಸಿದ್ದಾರೆ. ಅದರಲ್ಲಿ ಗಾದೆಗಳು, ನುಡಿಗಟ್ಟುಗಳು, ನಗೆಹನಿಗಳು ಇವುಗಳನ್ನು ಭಾಷೆಯ ಆಶಯದ ದೃಷ್ಟಿಕೋನಗಳಲ್ಲಿ ವಿವರಿಸಿದ್ದಾರೆ.

ಈ ರಚನೆಗಳ ಹಿಂದಿರುವ ದೃಷ್ಟಿಕೋನ ಸಮುದಾಯದ ಆಶಯವಾಗಿದ್ದು ಭಾಷೆ ಬಳಸುವವರ ಮೂಲಕ ಆಚರಣೆಗೆ ಬರುತ್ತದೆ. ಇಲ್ಲಿ ಕಂಡುಬರುವ ಅಂಶಗಳು ಭಾಷೆಯನ್ನು ಆಡುವ ಸಮುದಾಯದ ಅಪೇಕ್ಷೆಗಳಾಗಿರುತ್ತವೆ. ಆದರೆ ವಾಸ್ತವಗಳು ಬೇರೆಯದನ್ನೆ ಪ್ರತಿಬಿಂಬಿಸುತ್ತಿರುತ್ತದೆ ಎಂಬುದು ಸ್ತ್ರೀವಾದದ ಮುಖ್ಯವಾದ ತಕಾರಿನ ಅಂಶವಾಗಿದೆ. ಈ ಅಂಶಗಳನ್ನು ಮುಂದಿಟ್ಟುಕೊಂಡು ಸಮಾಜ ರಚಿಸಿರುವ ಹಲವು ನುಡಿಗಟ್ಟುಗಳು, ಗಾದೆಗಳು ಹೀಗೆ ಹಲವು ಅಂಶಗಳನ್ನು ಮುಂದಿಟ್ಟುಕೊಂಡು ವಾಸ್ತವಕ್ಕೂ ಮತ್ತು ಸಮುದಾಯದ ಆಶಯದಿಂದ ಒಳಗೊಂಡ ನುಡಿಗಟ್ಟುವಿಗೂ ಇರುವ ಪರಸ್ಪರ ವ್ಯತ್ಯಾಸಗಳನ್ನು ಮುಖಾಮುಖಿ ಮಾಡುವ ಮೂಲಕ ಅಧ್ಯಯನ ಆರಂಭಿಸಿದ್ದಾರೆ. ಸರ್ವಕಾಲಕ್ಕೂ 'ಸತ್ಯ'ವೆನಿಸುವಂತೆ ತೋರುವ ಹೇಳಿಕೆಗಳನ್ನು ಭಾಷೆಯಲ್ಲಿ ರೂಪಿಸಲಾಗಿರುತ್ತದೆ. ಇಂಥ ಆಶಯಗಳನ್ನುಳ್ಳ ರಚನೆಗಳು ಹೆಂಗಸನ್ನು ಹಲವು ನಕಾರಾತ್ಮಕ ಚಹರೆಗಳಲ್ಲಿ ಇರಿಸುತ್ತವೆ. ಆಕೆ ಅಗತ್ಯಕ್ಕಿಂತ ಹೆಚ್ಚು ಮಾತನಾಡುವವಳು. ಆಸೆ ಬುರುಕಿ, ಜಿಪುಣಿ, ಹಟಮಾರಿ, ತರ್ಕವಿಲ್ಲದವಳು, ದಡ್ಡಿ, ವಿತಂಡವಾದಿ ಮುಂತಾದ ಅಂಶಗಳನ್ನು ಆಕೆಯ ಮೇಲೆ ಆರೋಪಿಸಿ ಚಿತ್ರಿಸಲಾಗಿರುವ ಆಶಯ ನುಡಿಗಳೇ ಹೆಚ್ಚಿನ ಪ್ರಮಾಣದಲ್ಲಿವೆ. ಈ ರಚನೆಗಳು ಸರ್ವಕಾಲಿಕ ಸತ್ಯಗಳು. ಈ ಇತಿಮಿತಿ ಒಳಗೆ ಮಹಿಳೆ ಬದುಕಬೇಕು. ಇವುಗಳು ಮಹಿಳೆಯನ್ನು ಒಳ್ಳೆಯ ದಾರಿಯಲ್ಲಿ ಮುನ್ನಡೆಸಲು ರೂಪಿತವಾದ ಅನುಭಾವಿಕ ಅಂಶಗಳು ಎಂದು ನಂಬಿಸಿರುತ್ತಾರೆ. ಹೆಂಗಸಿನ ಬಗೆಗೆ ಈ ಭಾಷಿಕಾಂಶಗಳಲ್ಲಿ ವ್ಯಕ್ತವಾಗುವುದಕ್ಕೂ ಆಕೆಯ ವಾಸ್ತವಕ್ಕೂ ಕಂದರವಿರುತ್ತದೆ.

ಮಹಿಳಾ ಭಾಷಾಧ್ಯಯನಕಾರರು ಸಮಾಜ ಮಹಿಳೆಯ ಭಾಷೆಯನ್ನು ಕುರಿತಂತೆ ಹೊಂದಿರುವಂತಹ ಧೋರಣೆಗಳನ್ನು ಪಟ್ಟಿ ಮಾಡಿ ಕೊಡುತ್ತಾರೆ. "ಹೆಂಗಸು ಹೇಗೆ ಮಾತಾಡಬೇಕು" ಎಂಬ ಬಗ್ಗೆ ಪ್ರತಿಯೊಂದು ಭಾಷಿಕ ಸಮುದಾಯವು ಅದರದ್ದೇ ಆದ ನಂಬಿಕೆಯನ್ನು ಹೊಂದಿದೆ. ಧ್ವನಿಯನ್ನು ಎತ್ತರಿಸಿ ಮಾತಾಡಬಾರದು. ಮಾತಾಡುವಾಗ ನಡುವೆ ತನ್ನ ಮಾತನ್ನು ಸೇರಿಸಬಾರದು,

ಉಚ್ಚಾರಣೆಯಲ್ಲಿ ಹೆಂಗಸಿಗೆ ವಿಶಿಷ್ಟವೆಂದು ತಿಳಿಯಲಾದ ಕಾಕನ್ನು ಕಾಯ್ದುಕೊಳ್ಳಬೇಕು. ಕೆಲವು ಪದಗಳು ಹಾಗೂ ಪದರಚನೆಗಳನ್ನು ಬೇರೆಯವರ, ಅದರಲ್ಲೂ ಗಂಡಸರ ಎದುರು ಹೇಳಬಾರದು. ಮುಂತಾದ ಬಳಕೆಯ ನಿಯಮಗಳು ಅಲಿಖಿತವಾಗಿ ಜಾರಿಯಲ್ಲಿವೆ. ಇಂತಹ ಅಂಶಗಳನ್ನು ಮುಂದಿಟ್ಟುಕೊಂಡಿರುವ ಸಮುದಾಯ ಮಹಿಳೆಯರಿಗೆ ಭಾಷೆಯ ಒಳಗಡೆ ಇರುವ ನಿರ್ಬಂಧ ನಿಷೇಧಗಳನ್ನು ಪ್ರತಿಪಾದಿಸುತ್ತವೆ. ಭಾಷಿಕ ಸಮುದಾಯ ಮಹಿಳೆಗೆ ಭಾಷೆಯೊಳಗೆ ಕೊಡಮಾಡಿರುವ ಸ್ವತಂತ್ರ ವಾಸ್ತವ ಸಂಗತಿಯನ್ನು ಸೂಚಿಸುತ್ತವೆ.

ಮಹಿಳೆಯ ದೈಹಿಕ ರಚನೆ, ಧ್ವನಿ ಶ್ರುತಿಯ ರಚನೆಗೂ ಭಾಷೆಗೂ ಯಾವುದೇ ಸಂಬಂಧವಿಲ್ಲ. ಭಾಷೆ ಮನುಷ್ಯರಿಗೆ ಸಮಾನವಾಗಿಯೇ ಇದೆ. ಆದರೆ ಬಳಕೆಯ ಸಂದರ್ಭದಲ್ಲಿ ದೈಹಿಕ ನೆಲೆಯಲ್ಲಿ ಗಂಡು ಹೆಣ್ಣುಗಳನ್ನು ಬೇರೆಯಾಗಿಡುವ ಅಂಶಗಳು ಭಾಷೆಯಲ್ಲಿ ಯಾವುದೀದೆ? ಆದರೆ ಒಂದು ಭಾಷಿಕ ಸಮುದಾಯ ಈ ವ್ಯತ್ಯಾಸವನ್ನು ತಾನೇ ಸೃಷ್ಟಿಸಿ ಹೆಂಗಸಿನ ಮೇಲೆ ಆರೋಪಿಸಿದೆ.

ಭಾಷೆಯಲ್ಲಿ ಮಹಿಳೆಗೆ ಇರುವಂತಹ ನಿಷೇಧಗಳು, ನಿರ್ಬಂಧಗಳು ಮಹಿಳೆಯ ಮನೋಧೋರಣೆಯ ಮೇಲೆ ಇಕ್ಕಟ್ಟಿನ ಪರಿಸ್ಥಿತಿಯನ್ನು ಒದಗು ಮಾಡುತ್ತದೆ. ಮಹಿಳೆಯ ಮಾತಿನೊಳಗೆ ಸ್ಫೋಟಗೊಳ್ಳುವ ಸಂದರ್ಭಗಳು ಇರುತ್ತವೆ. ಇದರಿಂದ ಮಹಿಳೆ ಹಲವು ಮಾನಸಿಕ ಒತ್ತಡಗಳಿಗೆ ಒಳಪಡಬಹುದು. ಇದರ ಪರಿಣಾಮವಾಗಿ ದೇವಾ-ದೇವರುಗಳು ಮಹಿಳೆಯ ಮೈಮೇಲೆ ಕಾಣಿಸಿಕೊಳ್ಳುವುದು, ತನಗಿಂತ ದುರ್ಬಲರಾದವರ ಮೇಲೆ ದಾಳಿ ನಡೆಸಿ ಹೊರಹಾಕಬಹುದು. ಅಕ್ಕಪಕ್ಕದ ಮನೆಯವರೊಟ್ಟಿಗೆ ಜಗಳ ಆಡುವುದು, ಬೈಗುಳಗಳು, ಗಾದೆಗಳು, ಒಡಪುಗಳು, ಹಾಡುಗಳ ಮುಖಾಂತರ ಸೃಜನಶೀಲ ರಚನೆಗಳ ಮುಖಾಂತರ ಹೊರಹಾಕಬಹುದು ಇಲ್ಲವೆ ಕೆಲವು ಗುಪ್ತ ಭಾಷೆಗಳನ್ನು ರಚಿಸುವುದಕ್ಕೆ ಸಾಧ್ಯವಾಗುತ್ತವೆ. ಪದಗಳ ಮಧ್ಯದಲ್ಲಿ ಕ, ಚ, ಟ ಮುಂತಾದ ಅಕ್ಷರಗಳ್ನು ಬಳಸಿ ಅಥವಾ ಅಂಕಿಗಳ ಬಳಸಿ ರೂಪಿಸಿಕೊಳ್ಳುವ ರಹಸ್ಯ ಭಾಷೆಯಂಥವು. ಹೀಗೆ ಹಲವು ಆಯಾಮಗಳಲ್ಲಿ ಮಹಿಳೆಯರು ತಮ್ಮ ಅಭಿವ್ಯಕ್ತಿಯನ್ನು ಕಂಡುಕೊಳ್ಳುತ್ತಾರೆ ಎಂದು ಗುರುತಿಸುತ್ತಾರೆ.

ಭಾಷೆಯು ಸಾಮಾಜಿಕ ಸಂಗತಿಗಳ ಸೂಚಕವಾಗಿ ಕೆಲಸ ಮಾಡುವುದನ್ನು ಒಪ್ಪಿದ್ದಾರೆ. ವಯಸ್ಸು, ಅಂತಸ್ತು, ಶಿಕ್ಷಣ, ಪ್ರದೇಶ, ಲಿಂಗ ಮುಂತಾದ ನೆಲೆಗಳಲ್ಲಿ ಇರುವ ಸಾಮಾಜಿಕ ಭಿನ್ನತೆಗಳು ಭಾಷಿಕ ಬಳಕೆಗಳಲ್ಲಿ ಮೈದೋರುತ್ತವೆ ಎನ್ನುವುದು ಸಾಮಾಜಿಕ ಭಾಷಾಶಾಸ್ತ್ರಜ್ಞರಿಗೆ ಸಮ್ಮತವಾದ ವಿಷಯ. ಮಹಿಳಾ ಭಾಷಾಧ್ಯಯನಕಾರು ಈ ಅಂಶಗಳನ್ನು ಮುಂದಿಟ್ಟುಕೊಂಡೇ ತಮ್ಮ ಅಧ್ಯಯನವನ್ನು ಆರಂಭಿಸುತ್ತಾರೆ. ಹೆಣ್ಣು ಗಂಡುಗಳ ನಡುವೆ ಇರುವ ಅಸಮಾನತೆ ಒಂದು ಚಾರಿತ್ರಿಕವಾದ ಮತ್ತು ಸಾಮಾಜಿಕವಾದ ಸಂಗತಿ. ಇದು ಪ್ರಕಟಗೊಳ್ಳುವ ಬಗೆಗಳು ಹಲವು

ಭಾಷೆಯ ಈ ಅಸಮಾನತೆಯನ್ನು ಪ್ರಕಟಿಸುವ ಒಂದು ಸಾಧನವಾಗಿದೆ. ಆದ್ದರಿಂದ ಸಾಮಾಜಿಕ ಭಾಷಾಶಾಸ್ತ್ರದ ಮುಖಾಂತರ ಸಮಾಜದಲ್ಲಿ ಹೆಣ್ಣುಗಂಡುಗಳ ತಾರತಮ್ಯಗಳನ್ನು ಅಧ್ಯಯನ ಮಾಡಲು ಸಾಧ್ಯವೆಂದು ಕೃತಿ ಪ್ರತಿಪಾದಿಸುತ್ತದೆ.

ಹೆಣ್ಣು ಗಂಡು ಎಂಬ ಭೇದವು ಭಾಷೆಯಲ್ಲಿ ಪ್ರಕಟಗೊಳ್ಳುವ ಕೆಲವು ನಿದರ್ಶನಗಳನ್ನು ಕೃತಿಯುದ್ದಕ್ಕೂ ವಿಶ್ಲೇಷಿಸಿದ್ದಾರೆ. ಸಾಮಾಜಿಕ ಸಂವಾದಗಳಲ್ಲಿ ಹೆಣ್ಣು ಮತ್ತು ಗಂಡು ಇಬ್ಬರೂ ಭಾಗೀದಾರರಾಗಿರುವಾಗ ಅವರು ಭಾಷೆಯ ಮೂಲಕ ತಮ್ಮನ್ನು ಮಂಡಿಸುವ ಬಗೆಯಲ್ಲಿ ವ್ಯತ್ಯಾಸಗಳಿರುತ್ತವೆ. ಇಂಥ ಸಂವಾದಗಳಲ್ಲಿ ಗಂಡಸರು ಹೆಚ್ಚು ಅವಕಾಶಗಳನ್ನು ನೀಡಿದರೂ ಅದರಲ್ಲಿ ನಿರ್ಣಾಯಕ ನೆಲೆ ಇಲ್ಲದಿರುವುದು; ಗಂಡಸರು ಇತರ ಭಾಗೀದಾರರ ಅಭಿಪ್ರಾಯಗಳಿಗೆ ಗಮನ ಕೊಡದಿರುವುದು; ಹೆಂಗಸರು ತಮ್ಮ ಅಭಿಪ್ರಾಯಗಳನ್ನು ಅನನ್ಯಗೊಳಿಸಬೇಕೆಂಬ ನೆಲೆಗೆ ದಾಟದಿರುವುದು; ಹೀಗೆ ಹಲವು ಬಗೆಯ ಭಿನ್ನತೆಗಳನ್ನು ಅಧ್ಯಯನ ಮಾಡಿ ತೋರಿಸಿದ್ದಾರೆ.

ಹೆಂಗಸರಿಗೆ ಭಾಷೆಯು ತಾನೇ ಅವಕಾಶ ವಂಚಿತ ಸ್ಥಿತಿಯನ್ನು ತಂದೊಡ್ಡುವುದಿಲ್ಲ. ಬದಲಾಗಿ, ಹೆಂಗಸು ತನ್ನ ಸಾಮಾಜಿಕ ಸ್ಥಿತಿಯ ಪರಿಣಾಮವಾಗಿ ಭಾಷಿಕ ಪರಿಕರಗಳನ್ನು ಬಳಸಿಕೊಳ್ಳುವ ಪರ್ಯಾಯ ಮಾರ್ಗಗಳನ್ನು ಹುಡುಕಿಕೊಂಡಿರುತ್ತಾಳೆ. ಹೀಗಾಗಿ ಮಹಿಳೆ ಭಾಷೆಗೆ ಅಸಮಾನತೆಯನ್ನು ಹಂಚುತ್ತಿಲ್ಲ. ಅಸಮಾನತೆಯಿಂದ ಒಳಗೊಂಡ ಭಾಷೆಯ ಚಹರೆಗಳನ್ನು ತೋರಿಸಲು ಭಾಷಿಕ ಪರಿಕರಗಳನ್ನು ತಕ್ಕಂತೆ ಬದಲಿಸಿಕೊಂಡಿದ್ದಾಳೆ.

ಒಂದೇ ಸಂದರ್ಭದಲ್ಲಿ ಇರುವ ಬೇರೆ ಬೇರೆ ಭಾಷಿಕ ಸಂಸ್ಕೃತಗಳ ಹೆಂಗಸರನ್ನು ಮತ್ತು ಒಂದೇ ಸಮಾಜದಲ್ಲಿ ಇದ್ದರೂ ಬೇರೆ ಬೇರೆ ಸಾಮಾಜಿಕ ಸ್ತರಗಳಿಗೆ ಸೇರಿದ ಹೆಂಗಸರನ್ನೂ, ಒಂದೇ ಪರಿಕಲ್ಪನೆಯಡಿಯಲ್ಲಿ ಇರಿಸುವುದು ಸರಿಯಾದ ಕ್ರಮವಲ್ಲ. ಏಕೆಂದರೆ ಹೆಣ್ಣು ಎಂಬ ಪರಿಕಲ್ಪನಾತ್ಮಕ ಚೌಕಟ್ಟಿನಲ್ಲಿ ಬರುವವರ ನಡುವಣ ಭಿನ್ನತೆಗಳು ಕೂಡಾ ಮೂಲಭೂತವಾಗಿ ಸಾಮಾಜಿಕ ಅಸಮಾನತೆಗಳಿಂದ ಸೃಷ್ಟಿಗೊಂಡು ನಿಯಂತ್ರಣಕ್ಕೆ ಒಳಗಾಗುತ್ತವೆ. ಅಂದರೆ ಹೆಂಗಸರ ನಡುವಣ ಅಂತಸ್ತು, ಶಿಕ್ಷಣ, ಅಧಿಕಾರ ಮುಂತಾದ ನೆಲೆಗಳ ಶ್ರೇಣಿಗಳು ಸಹಜ ಆಯ್ಕೆಗಳೇನಲ್ಲ. ಈ ಬಗೆಯ ಸಾಮಾಜಿಕ ವ್ಯತ್ಯಾಸಗಳು ಮಹಿಳೆಯರ ಭಾಷೆಯಲ್ಲಿ ಭಿನ್ನತೆ ಇರುತ್ತದೆ ಎಂದು ಕೃತಿಯಲ್ಲಿ ವಿವರಿಸಿದ್ದಾರೆ.

ಮಹಿಳಾ ಭಾಷಾಧ್ಯಯನಕಾರರು ತಾವು ಸಾಮಾಜಿಕ ಭಾಷಾಧ್ಯಯನಕಾರರಿಗಿಂತಲೂ ಭಿನ್ನವಾಗಿ ಅಧ್ಯಯನ ಮಾಡುತ್ತಿದ್ದೇವೆ. ಸಾಮಾಜಿಕ ಭಾಷಾಧ್ಯಯನಕಾರರು ಕೇವಲ ಶಿಷ್ಟ ಇಲ್ಲವೇ ಪ್ರಮಾಣ ಭಾಷೆಗಳಿಗೂ, ಉಪಭಾಷಾ ಪ್ರಭೇದಗಳಿಗೂ ಇರುವ ಯಾಜಮಾನ್ಯದ ಸಂಬಂಧವನ್ನು ಎತ್ತಿ ಹೇಳುತ್ತಾರೆ.

ಭಾಷೆಯಲ್ಲಿ ಹೆಣ್ಣಿಗೆ ಸ್ಥಾನವಿಲ್ಲ ಮತ್ತು ಬಳಕೆಯ ಭಾಷೆಯಲ್ಲಿ ಗಂಡು ಹೆಣ್ಣುಗಳಿಗಿರುವ ತಾರತಮ್ಯವನ್ನು ಅಧ್ಯಯನ ಮಾಡಿದ ಮೇಲೆ ಇವುಗಳಿಗೆ ಮಹಿಳಾ ಅಧ್ಯಯನಕಾರರು ಕೆಲವು ಪರಿಹಾರೋಪಾಯಗಳನ್ನು ಕಂಡುಕೊಂಡಿದ್ದಾರೆ ಎಂದು ಕೃತಿಯಲ್ಲಿ ವಿವರಿಸಲಾಗಿದೆ. ಆ ವಿಚಾರಗಳು ಹೀಗಿವೆ. ೧. ಎಲ್ಲಕ್ಕಿಂತ ಮುಖ್ಯವಾಗಿ ಭಾಷೆ ಎಂಬುದು ಹೆಂಗಸಿಗೆ ಪೂರ್ಣಪ್ರಮಾಣದ ಅವಕಾಶವನ್ನು ಒದಗಿಸಿಲ್ಲ ಎನ್ನುವುದನ್ನು ಎಲ್ಲ ಮಹಿಳೆಯರು ತಿಳಿಯುವಂತೆ ಮಾಡುವುದು. ೨. ಭಾಷೆಯಲ್ಲಿ ಅಡಗಿರುವ ತಾರತಮ್ಯದ ನೆಲೆಗಳನ್ನು ಪಲ್ಲಟಗೊಳಿಸಬೇಕಾದ ಹೊಣೆ ಹೊತ್ತಿದ್ದಾರೆ. ಭಾಷೆಯ ತಾರತಮ್ಯದ ನೆಲೆಗಳಿಂದ ಹೊರಬರಲು ಎರಡು ಬಗೆಯ ದಾರಿಗಳನ್ನು ಕಂಡುಕೊಳ್ಳುತ್ತಾರೆ. ೧. ತಾರತಮ್ಯದ ತೀವ್ರತೆಯನ್ನು ಕುಗ್ಗಿಸುವ ಕಡೆಗೆ ಚಲಿಸಿದರೆ, ೨. ತಾರಮತ್ಯವನ್ನು ಸಂಪೂರ್ಣವಾಗಿ ನಿವಾರಿಸುವ ಕಡೆಗೆ ಚಲಿಸುತ್ತಾರೆ. ಮೊದಲನೆಯದು ಭಾಷೆಯ ಬಳಕೆಯಲ್ಲಿ ಬದಲಾವಣೆಗಳನ್ನು ತರುವ ಕ್ರಮಗಳನ್ನು ಮುಂದಿಡುತ್ತವೆ. ಎರಡನೆಯದು, ಭಾಷೆಯನ್ನು ಆಮೂಲಾಗ್ರವಾಗಿ ಬದಲಿಸುವ ಕಡೆಗೆ ಪ್ರಯತ್ನಗಳನ್ನು ಮಾಡುತ್ತಾರೆ. ಮೊದಲನೆಯ ಬಗೆಯನ್ನು 'ಸುಧಾರಣಾ ಮಾದರಿ' ಎಂದು ಕರೆಯುತ್ತಾರೆ.

'ಸುಧಾರಣಾ ಮಾದರಿ' ಭಾಷಾಧ್ಯಯನದ ಮಹಿಳೆಯರ ಅನೇಕ ವಾದಗಳನ್ನು ಸಿದ್ಧಾಂತಗಳನ್ನು ಅವರು ಅಧ್ಯಯನ ಮಾಡಿ ವಿವರಿಸಿದ ತತ್ವಗಳನ್ನು ಅಜ್ಞಾನ ಶಿಸ್ತಿನ ಅಧ್ಯಯನಕಾರರು ಅವುಗಳನ್ನು ಕುರಿತಂತೆ, ಲೇವಡಿ ಮಾಡಿದ್ದಾರೆ. ಸಮಾಜಶಾಸ್ತ್ರಜ್ಞರು ಮಾಡಿರುವ ಆಕ್ಷೇಪ. ಇಂಗ್ಲಿಶ್ ಭಾಷೆ 'he' ಎಂಬ ರೂಪವು ವಾಸ್ತವವಾಗಿ ಗಂಡಸನ್ನೇ ಸೂಚಿಸಿದರೂ, ಎಷ್ಟೋ ಸಂಕಥನಗಳಲ್ಲಿ ಅದು ಇಡೀ ಮಾನವ ಜನಾಂಗವನ್ನು ಗಂಡು ಹೆಣ್ಣುಗಳೆಂದು ಭೇದವಿಲ್ಲದೆ ಪ್ರತಿನಿಧಿಸುತ್ತದೆ ಎಂಬ ನಂಬಿಕೆ ಬೇರೂರಿದೆ. ಮನುಷ್ಯರನ್ನು ಕುರಿತ ನಿರೂಪಣೆಗಳಲ್ಲಿ ಸರ್ವನಾಮ ಅಗತ್ಯವಾದ 'he' ಮತ್ತು ಅದರ ಅಂತರ್ಗಮತ ರೂಪಗಳಾದ his, him ರೂಪಗಳನ್ನು ಬಳಸಲಾಗುತ್ತದೆ. ಸ್ತ್ರೀವಾದಿ ಭಾಷಾ ಚಿಂತಕರು ಇಂಥ ಬಳಕೆಗಳು ಹೆಂಗಸರನ್ನು ಹೊರಗಿಡುವ ಇಲ್ಲವೇ ನಗಣ್ಯವಾಗಿಸುವ ಯತ್ನಗಳೆಂದು ವಾದಿಸಿದ್ದಾರೆ.

ಆಕ್ಷೇಪ ಎತ್ತಿದ ಸಾಮಾಜಶಾಸ್ತ್ರಜ್ಞರು ಈ ವಿಚಾರವನ್ನು ಅವರು ತಮ್ಮದೇ ನೆಲೆಯಲ್ಲಿ ವಿವರಿಸಿದ್ದಾರೆ. ಅಂದರೆ ಅವರು ಹೇಳುತ್ತಿರುವ ಮಾನವ ಸಮುದಾಯವನ್ನು he ಎಂಬ ಪದದಿಂದ ಪ್ರತಿನಿಧಿಸುವ ಕ್ರಮದ ಹಿಂದೆ ಹೆಣ್ಣು ಗಂಡುಗಳನ್ನು ತರತಮ ಭಾವದಲ್ಲಿ ನೋಡುವ ಮತ್ತು ಹೆಣ್ಣಿನ ಅಸ್ತಿತ್ವವನ್ನು ಕಡೆಗಣಿಸುವ ಹುನ್ನಾರವಿದೆ ಎಂದು ಒಪ್ಪಿಕೊಂಡರೆ. ಸಮಾಜದಲ್ಲಿ ಇರುವ ನಂಬಿಕೆ ಮತ್ತು ಆಚರಣೆಗಳು ಮನುಷ್ಯರ ಆಡುವ ಭಾಷೆಯ ಮುಖಾಂತರ ಸೂಚಿತವಾಗುತ್ತದೆ ಎಂದರೆ ಭಾಷೆಯು ಸೂಚಕ ಮತ್ತು ಸಾಮಾಜಿಕ ನಂಬಿಕೆ ಮತ್ತು ಆಚರಣೆಗಳು ಸೂಚಿತಾರ್ಥಗಳು.

ಇವುಗಳಲ್ಲಿ ಯಾವುದು ಇನ್ನೊಂದು ನಿಯಂತ್ರಿಸುತ್ತದೆ ಎನ್ನುವ ಪ್ರಶ್ನೆ ಮುಖ್ಯ ಎಂದಿದ್ದಾರೆ. ಸೂಚಕವು ಸೂಚಿತಾರ್ಥದ ನಿಯಂತ್ರಣಕ್ಕೆ ಒಳಪಟ್ಟಿರುತ್ತದೆ ಎಂದು ಒಪ್ಪಿ ಮುಂದುವರೆದರೆ, ಸರಿಯಾಗುತ್ತದೆ. ಅಂದರೆ ಸಮಾಜದಲ್ಲಿ ಇರುವ ನಂಬಿಕೆ ಮತ್ತು ಆಚರಣೆಗಳಲ್ಲಿ ತಾರತಮ್ಯ ಬದಲಾವಣೆಗೆ ಒಳಪಟ್ಟರೆ ಅಂದಾಗ ಮಾತ್ರ ಸೂಚಕವಾದ ಭಾಷೆಯಲ್ಲಿ ಬದಲಾವಣೆಗಳು ತರುವುದಕ್ಕೆ ಸಾಧ್ಯವಾಗುತ್ತದೆ ಎಂದು ಸಮಾಜಶಾಸ್ತ್ರಜ್ಞರು ಆಕ್ಷೇಪ ಎತ್ತಿರುವ ವಿಚಾರವನ್ನು ಕೃತಿಯಲ್ಲಿ ನಮೋದಿಸಲಾಗಿದೆ.

ಮಹಿಳಾ ಭಾಷಾಧ್ಯಯನಕಾರರು ಮಾಡುತ್ತಿರುವ ಭಾಷೆಯ ಬದಲಾವಣೆಗಳ ಕುರಿತಂತೆ ಭಾಷಾಶಾಸ್ತ್ರಜ್ಞರು ಕೆಲವು ಅಭಿಪ್ರಾಯಗಳನ್ನು ವಿವರಿಸಿದ್ದಾರೆ. ಅವರ ವಿವರಣೆ ಇಲ್ಲಿ ಸಂಕ್ಷಿಪ್ತವಾಗಿ ನೋಡುವುದಾದರೆ ಭಾಷಿಕ ಬದಲಾವಣೆಗಳು ನಡೆಯುವ ಕ್ರಮ ವಿಶಿಷ್ಟವಾದುದು. ಅದು ಯೋಚಿತವಾದದ್ದಲ್ಲ ಮತ್ತು ಒಂದೇ ಕಾಲಕ್ಕೆ ಇಡೀ ಭಾಷಾ ಸಮುದಾಯದ ಅರಿವಿಗೆ ಬರುವಂತೆ ನಡೆಯುವುದಿಲ್ಲ. ಅದು ಹರಡುವ ಬಗೆಯನ್ನು ಭಾಷಾಶಾಸ್ತ್ರಜ್ಞರು ಅಧ್ಯಯನ ಮಾಡಿದ್ದಾರೆ. ಸ್ತ್ರೀವಾದಿ ಭಾಷಾ ಚಿಂತಕರು ಮಂಡಿಸುವ ಭಾಷಿಕ ಬದಲಾವಣೆಗಳು 'ಸಹಜ' ಭಾಷಾ ಬದಲಾವಣೆಗಳ ಚೌಕಟ್ಟಿಗೆ ಹೊಂದುವುದಿಲ್ಲ. ಏಕೆಂದರೆ ಯಾರೋ ಎಲ್ಲೋ ಯೋಜಿಸಿದ ಬದಲಾವಣೆಗಳ ಚೌಕಟ್ಟಿಗೆ ಹೊಂದುವುದಿಲ್ಲ. ಏಕೆಂದರೆ ಯಾರೋ ಎಲ್ಲೋ ಯೋಜಿಸಿದ ಬದಲಾವಣೆಗಳನ್ನು, ಭಾಷಾ ಸಮುದಾಯ ಒಮ್ಮಲೇ ಒಪ್ಪಿಕೊಳ್ಳುವುದು ಅಸಾಧ್ಯ.

ಮಹಿಳಾ ಭಾಷಾ ಚಿಂತಕರು ಈ ಬಗೆಯಲ್ಲಿ ಬಂದಿರುವ ಹಲವು ಆಕ್ಷೇಪ, ಲೇವಡಿಗಳಿಗೆ ತಮ್ಮದೇ ವಿಧಾನದಿಂದ ಉತ್ತರವನ್ನು ಕೊಟ್ಟಿದ್ದಾರೆ. ಹೊಸದನ್ನು ಸ್ವೀಕರಿಸಿದ ಈ ಬಗೆಯ ಮೂಲಭೂತವಾದಿಗಳು ಎಲ್ಲ ಕಾಲಕ್ಕೂ ಎಲ್ಲ ಸಂದರ್ಭಕ್ಕೂ ಚರಿತ್ರೆಯುದ್ದಕ್ಕೂ ಸಿಗುತ್ತಾರೆ. ಇವರುಗಳು ಒಡ್ಡುವ ಆಕ್ಷೇಪಗಳು ಅಧ್ಯಯನದ ಹಲವು ಮಗ್ಗಲುಗಳನ್ನು ಅಧ್ಯಯನಕ್ಕೆ ಒಳಪಡಿಸಲು ಸಹಾಯಕವಾಗುತ್ತವೆ. ಇದೇನೇ ಇರಲಿ ಮಹಿಳಾ ಭಾಷಾ ಚಿಂತಕರು ಇವರುಗಳಿಗೆ ಉತ್ತರವನ್ನು ನೀಡಿರುವುದರ ಕುರಿತಂತೆ ಕೃತಿಯಲ್ಲಿ ಗುರುತಿಸಿರುವುದು ಕಂಡುಬರುತ್ತದೆ.

ಮಹಿಳಾ ಭಾಷಾ ಚಿಂತನಕಾರರಲ್ಲಿ ನಂತರವಾಗಿ ಮತ್ತೊಂದು ಹಂತದ ಚಿಂತಕರು ಬರುತ್ತಾರೆ. 'ಸುಧಾರಣವಾದಿ' ಭಾಷಾ ಚಿಂತಕರು ಮಂಡಿಸುವ ವಿಚಾರಗಳು ಭಾಷಾ ತಾರತಮ್ಯ ಗುರುತಿಸುವ ನೆಲೆಯಲ್ಲಿಯೇ ನಿಂತು ಹೋಗುತ್ತದೆ. ಇದಕ್ಕೆ ಮತ್ತೊಂದು ಆಯಾಮ ದೊರೆಯುತ್ತದೆ. ಮಹಿಳಾ ಭಾಷಾ ಚಿಂತನೆಗಳ ಕಾರ್ಯಯೋಜನೆಯಲ್ಲಿ 'ತೀವ್ರವಾದಿ' ಭಾಷಾ ಚಿಂತಕರು ಇದ್ದಾರೆ. ಇವರು ಸುಧಾರಣವಾದಿಗಳ ಒಳಗಡೆಯಿಂದಲೇ ಹುಟ್ಟಿಕೊಂಡಿರುವರು. ಪುರುಷ ಕೇಂದ್ರಿತ ನೆಲೆಗಳ ಸೂಚಕಗಳು ತಾರತಮ್ಯವನ್ನು ಹೊಂದಿರುವುದರಿಂದ ಭಾಷಾ ಸುಧಾರಕರು ಹೆಣ್ಣು,

ಗಂಡು ಇಬ್ಬರನ್ನು ಒಳಗೊಳ್ಳುವ ಪರ್ಯಾಯ ಬಳಕೆಗಳನ್ನು ಸೂಚಿಸಿದರಷ್ಟೆ ತೀವ್ರವಾದಿಗಳು ಹೆಣ್ಣನ್ನಷ್ಟೇ ಸೂಚಿಸುವ ಪರ್ಯಾಯ ಬಳಕೆಗಳನ್ನು ಜಾರಿಗೆ ಕೊಡಲು ಪ್ರಸ್ತಾಪಿಸುತ್ತಾರೆ. ಹೆಣ್ಣನ್ನು ಹೊರಗಿಡುವ ಭಾಷಾಂಶಗಳಿಗೆ ಪ್ರತಿಯಾಗಿ ಗಂಡನ್ನು ಪ್ರಜ್ಞಾಪೂರ್ವಕವಾಗಿಯೇ ಹೊರಗಿಡುವ ಭಾಷಾಂಶಗಳನ್ನು ಬಳಸಲು ಹೇಳುತ್ತಾರೆ.

ಜಗತ್ತಿನ ಅತಿಶ್ರೇಷ್ಠ ಚಿಂತಕರಲ್ಲಿ ತತ್ವಜ್ಞಾನಿಗಳಲ್ಲಿ, ವಾಕ್‌ಪಟುಗಳಲ್ಲಿ, ಸಂಧಾನಕಾರರಲ್ಲಿ ಹೀಗೆ ಎಲ್ಲೆಲ್ಲಿ ಭಾಷಾ ಸಾಮರ್ಥ್ಯಗಳು ಮುಂಚೂಣಿಯಲ್ಲಿ ಇರುತ್ತವೋ ಅಂಥ ಕಡೆಗಳಲ್ಲಿ ಹೆಂಗಸಿನ ಗೈರು ಹಾಜರಿಯನ್ನು ಚರಿತ್ರೆಯುದ್ದಕ್ಕೂ ಗುರುತಿಸಲಾಗುತ್ತದೆ. ಭಾಷಾ ಕೌಶಲ್ಯಗಳು ಮುಖ್ಯವಾಗಿರುವ ಸೃಜನಶೀಲ ಸಾಹಿತ್ಯ ಕ್ಷೇತ್ರದಲ್ಲೂ ಹೀಗೆ ಹೆಂಗಸು ತನ್ನ ಗುರುತನ್ನು ಉಳಿಸಲಾಗಿಲ್ಲ. ಇಂಥ ವಿಕಲತೆಗಳ ಆರೋಪಗಳು ಎಷ್ಟು ಬಲವಾಗಿವೆ ಎಂದರೆ; ಹೆಂಗಸರು ತಮ್ಮ ಭಾಷಿಕ ಕೊರತೆಗಳನ್ನು ತಮ್ಮ ಅಸಾಮರ್ಥ್ಯತೆಗಳೆಂದೇ ನಂಬುತ್ತಾ ಬಂದಿದ್ದಾರೆ. ಒಮ್ಮೆಯೂ ತಮಗೆ ಬಳಸಲು ದೊರಕಿರುವ ಭಾಷೆಯೇ ಇಂಥ ವಿಕಲತೆಯ ನೆಲೆಗೆ ತಮ್ಮನ್ನು ತಳ್ಳಿರಬಹುದೆಂದು ಊಹಿಸಲು ಮುಂದಾಗಿಲ್ಲ. ತೀವ್ರವಾದಿ ಭಾಷಾ ಚಿಂತಕರು ಈ ದಿಕ್ಕಿನಲ್ಲಿ ಚಿಂತಿಸಿ ಭಾಷೆಯು ಹೆಂಗಸಿಗೆ ತಂದಿಟ್ಟಿರುವ ಬಿಕ್ಕಟ್ಟುಗಳನ್ನು ಬಯಲಿಗೆಳೆಯಲು ತಕ್ಕ ತಾತ್ವಿಕತೆಯೊಂದನ್ನು ರೂಪಿಸಿಕೊಳ್ಳುತ್ತಿದ್ದಾರೆ ಎಂದು ಕೃತಿ ನಿರೂಪಿಸುತ್ತದೆ.

ಮಾರ್ಕ್ಸ್‌ವಾದದ ಹಿನ್ನೆಲೆಯಲ್ಲೂ ಮಹಿಳಾ ಭಾಷಾ ಚಿಂತಕರು ತಮ್ಮ ವಿಚಾರಗಳನ್ನು ಮಂಡಿಸುತ್ತಿದ್ದಾರೆ. ಅಧಿಕಾರವುಳ್ಳವರು ಭಾಷೆಯನ್ನು ಒಂದು ಹತಾರವನ್ನಾಗಿ ಪರಿವರ್ತಿಸಿ ತಮ್ಮ ಹಿಡಿತವನ್ನು ಕಾಯ್ದುಕೊಳ್ಳುತ್ತಿದ್ದಾರೆ. ಇಲ್ಲಿ ಯಜಮಾನ ಅಧೀನ ಸಂಬಂಧದಲ್ಲಿ ಬದಲಾವಣೆಯನ್ನು ತಾರದೇ ಕೇವಲ ಮೇಲ್‌ಸ್ತರದಲ್ಲಿ ಬದಲಾವಣೆಯನ್ನು ತರುವುದರಿಂದ ಯಾವ ಪ್ರಯೋಜನವೂ ಆಗುವುದಿಲ್ಲ. ಏಕೆಂದರೆ ಮೇಲ್‌ಸ್ತರದ ಮೇಲಿನ ಹಿಡಿತವನ್ನು ಹೊಂದಿರುವ ವರ್ಗವು ತನ್ನ ಅಧಿಕಾರ ಸ್ಥಾಪನೆಗಾಗಿ ಎಲ್ಲ ಬದಲಾವಣೆಗಳನ್ನು ಸುಳ್ಳಾಗಿಸುವ ಸಾಧ್ಯತೆಗಳಿವೆ. ಇದಕ್ಕೆ ಮಹಿಳಾ ಚಿಂತಕರು ಮಾರ್ಕ್ಸ್‌ಚಿಂತನ ಕ್ರಮದಿಂದಲೇ ಉತ್ತರ ಕಂಡುಕೊಂಡಿದ್ದಾರೆ ಎಂದು ಕೃತಿಯಲ್ಲಿ ವಿವರಿಸಲಾಗಿದೆ. ಅಂದರೆ ಶೋಷಿತರು ಶೋಷಣೆಯನ್ನು ಮಾಡುವವರ ಅಧಿಕಾರದ ಪರಿಕರಗಳನ್ನು ತಮ್ಮ ನೆಲೆಯಿಂದ ಬಳಸತೊಡಗುವುದೇ ಒಂದು ಪ್ರತಿರೋಧ.

ಮಹಿಳಾ ಭಾಷಾ ಚಿಂತನೆಗಳು ಕೇವಲ ಯುರೋಪ್ ಕೇಂದ್ರಿತವಾಗಿವೆ ಎಂಬ ವಿಚಾರವನ್ನು ಪ್ರತಿಪಾದಿಸಿದೆ. ಅಂದರೆ ಮೊದಲಿನಿಂದಲು ಯುರೋಪ್‌ನಲ್ಲಿ ಬೆಳೆದುಬಂದ ಈ ಚಿಂತನಕ್ರಮ ಜಾಗತಿಕ ಮಟ್ಟದಲ್ಲೂ ಇದೇ ಸಮಸ್ಯೆ ಇದೆಯೆಂದು ಏಕಮುಖವಾದ ಅಧ್ಯಯನಗಳು ನಡೆದವು. ಅಲ್ಲಿಯ ಸಮಸ್ಯೆಗಳನ್ನೆ ಸಾರ್ವತ್ರಿಕವಾಗಿ ನೋಡುವ ಕ್ರಮ ಬೆಳೆಯಿತು. ಇದು ಹಲವು ಪ್ರಶ್ನೆಗಳಿಗೆ

ದಾರಿ ಮಾಡಿಕೊಟ್ಟಿತ್ತು. ಈ ಪ್ರಶ್ನೆಗಳಿಂದ ಬಿಡಿಸಿಕೊಳ್ಳಬೇಕೆಂದರೆ ಭಾಷಾ ಚಿಂತನೆಗಳು ತಮ್ಮ ಏಕರೂಪಿ ಚೌಕಟ್ಟನ್ನು ಬಿಟ್ಟುಕೊಡಬೇಕಾಗಿದೆ ಮತ್ತು ಎಲ್ಲ ವಲಯಗಳ ಹೆಂಗಸರ ಸಮಸ್ಯೆಗಳ ಸ್ವರೂಪವನ್ನು ಬಿಡಿಯಾಗಿಯೇ ಪರಿಗಣಿಸಬೇಕಾಗಿದೆ.

ಕೃತಿಯಲ್ಲಿನ ಅನುವಾದಿತ ಲೇಖನಗಳು ಮೇಲಿನ ಸಿದ್ಧಾಂತಗಳನ್ನು ಪ್ರತಿನಿಧಿಸುವಂತಹ ಹಲವು ಪ್ರಾಯೋಗಾತ್ಮಕ ಅಂಶಗಳನ್ನು ಒಳಗೊಂಡಿವೆ. ಡೆಬೊರಾ ಕ್ಯಾಮರಾನ್ ಅವರ The Feininist Critique of Language ಎಂಬ ಲೇಖನವನ್ನು ಸ್ತ್ರೀವಾದಿಗಳು ಭಾಷೆಯನ್ನು ಕುರಿತು ಏಕೆ ಚರ್ಚಿಸಬೇಕು? ಎಂಬುದನ್ನು ಕನ್ನಡಕ್ಕೆ ಶ್ರೀಮತಿಯವರು ತಂದಿದ್ದಾರೆ. ಈ ಲೇಖನದಲ್ಲಿ ಬಹುಮುಖ್ಯವಾಗಿ ಮೀಮಾಂಸೆ ಅಂದರೇನು, ಅದರ ವಿಭಿನ್ನ ಅರ್ಥಗಳನ್ನು ವಿವರಿಸಿ. ಮಹಿಳಾ ಚಿಂತಕರು ಮಾಡಬೇಕಾದ ಮೀಮಾಂಸೆ ಯಾವುದು ಎಂಬುದಾಗಿ ಇಲ್ಲಿ ಚರ್ಚಿಸಲಾಗಿದೆ. ಜೊತೆಗೆ 'ಮಾತು ಮತ್ತು ಮೌನ' ಕುರಿತ ವಿಚಾರಗಳನ್ನು ಇಲ್ಲಿ ಚರ್ಚಿಸಲಾಗಿದೆ. ಎಂದರೆ ಮಹಿಳೆಯ ಜೀವನದಲ್ಲಿ ಎಲ್ಲಿ ಮೌಲ್ಯಯುತವಾಗಿರಬೇಕೋ ಅಲ್ಲಲ್ಲಿ ಮೌನ ಆವರಿಸಿದೆ. ಮಾತನ್ನು ಹೊಂದಿದರೂ ಮೌನವೇ ಭೂಷಣ ಎಂದು ಮಹಿಳೆಯನ್ನು ನಂಬಿಸಿರುವ ಕ್ರಮದ ಕುರಿತಂತೆ ಚಿತ್ರಿಸುತ್ತಾರೆ. ಜೊತೆಗೆ ಕೆಲವು ಪ್ರಾಯೋಗಾತ್ಮಕವಾದಂತಹ ನಿದರ್ಶನಗಳನ್ನು ಕೊಡುತ್ತಾರೆ. ಮಹಿಳೆಯರು ತಮಗೆ ಇಲ್ಲದಿರುವ ಮಾತಿನ ಅವಕಾಶವನ್ನು ತಮಗಿಂತ ಕೆಳಗಿನವರ ಮಾತಿಗೆ ಪ್ರಕಟಗೊಳ್ಳುವ ಒತ್ತಡಗಳನ್ನು ಕುರಿತಂತೆಯೂ ಅವರು ವಿಚಾರಿಸಿದ್ದಾರೆ. ಈ ಲೇಖನದಲ್ಲಿ 'ಸಾಕ್ಷರತಾ ಚಟುವಟಿಕೆಗಳು' ವಿಷಯವನ್ನು ಕುರಿತಂತೆಯೂ ಹಲವು ಆಯಾಮಗಳಲ್ಲಿ ಚರ್ಚಿಸಿದ್ದಾರೆ. ಸಮಾಜದಲ್ಲಿ ಮಹಿಳೆ ಮತ್ತು ತಳಸಮುದಾಯದ ಗುಲಾಮರುಗಳಿಗೆ ಸಾಕ್ಷರತೆ ಧಕ್ಕದಂತೆ ಕೈಗೊಂಡಿರುವಂತಹ ಕ್ರಮ ಮತ್ತು ಸಾಕ್ಷರತೆಯನ್ನು ಹೊಂದುವ ಸಮಾಜದಲ್ಲಿ ಇದ್ದಂತಹ ಅಡ್ಡಿ ಆತಂಕಗಳು ಅವುಗಳ ಗೋಡೆ ಹೊಡೆಯಲಿಕ್ಕೆ ನಡೆಯುವ ಸಂಘರ್ಷಗಳನ್ನು ವಿವರಿಸಿದ್ದಾರೆ. 'ಬರವಣಿಗೆ ಮತ್ತು ವ್ಯತ್ಯಾಸ' ಈ ವಿಷಯವಾಗಿ ಮಹಿಳೆಯರ ಬರವಣಿಗೆ ಮತ್ತು ಇತರ ಬರಹದ ಕುರಿತು ಇರುವಂತಹ ವ್ಯತ್ಯಾಸಗಳನ್ನು ಕುರಿತು ಚರ್ಚಿಸಿದ್ದಾರೆ. 'ಪ್ರತಿನಿಧೀಕರಣಗಳು : ಲೈಂಗಿಕತಾವಾದಿ ಭಾಷೆ ಮತ್ತು ಲೈಂಗಿಕತಾವಾದಿ ಸಂಕಥನ' ಈ ವಿಚಾರವಾಗಿ ಕೆಲವು ಸಂಕಥನಗಳನ್ನು ಮುಂದಿಟ್ಟುಕೊಂಡು ಅವುಗಳಲ್ಲಿ ಇರುವ ಲೈಂಗಿಕತಾವಾದಿ ಭಾಷೆಗಳನ್ನು ಗುರುತಿಸಿದ್ದಾರೆ. ಅವುಗಳು ಮಹಿಳೆಯ ಮೇಲೆ ನಡೆಸುತ್ತಿರುವ ದೌರ್ಜನ್ಯಗಳಿಗೆ ಸಂಬಂಧಿಸಿದಂತೆ ವಿಚಾರಿಸಿ ಅವುಗಳನ್ನು ಅಧ್ಯಯನಕ್ಕೆ ಒಳಪಡಿಸಿದ್ದಾರೆ. ಹೆಂಗಸನ್ನು ಲೈಂಗಿಕ ಹಿಂಸೆಗೆ ಒಳಗು ಮಾಡುವ ಸಂದರ್ಭವನ್ನು ಮಂಡಿಸುವ ಬಗೆಯನ್ನು ಕೃತಿಯ ಈ ಲೇಖನದಲ್ಲಿ ಚರ್ಚಿತಗೊಂಡ ಬಹುಮುಖ್ಯ ವಿಷಯ. ಇಲ್ಲಿ ಮುಖ್ಯವಾಗಿ ಪತ್ರಿಕೆಗಳ ಉದಾಹರಣೆಗಳನ್ನು ಇಟ್ಟುಕೊಂಡು ಇವರು ವಿಷಯವನ್ನು ನಿರೂಪಿಸುವ ಕ್ರಮದ ಕುರಿತಂತೆ ತಕರಾರುಗಳನ್ನು ಎತ್ತಿದ್ದಾರೆ. ಮುಂದುವರೆದು ಲೇಖನದಲ್ಲಿ "ಸ್ತ್ರೀವಾದಿ ಭಾಷಾ

ಮೀಮಾಂಸೆ ಮತ್ತು ಅಸ್ಮಿತೆಯ ರಾಜಕಾರಣ"ವನ್ನು ಹಲವು ಸ್ತ್ರೀವಾದಿ ಬರಹಗಾರರ ಚಿಂತೆಗಳನ್ನು ಮುಂದಿಟ್ಟುಕೊಂಡು ಚರ್ಚೆಗೆ ಒಳಪಡಿಸಿದ್ದಾರೆ. ಇಲ್ಲಿ ಪರವಿರೋಧಗಳ ಹಲವು ಆಯಾಮಗಳು ಇವೆ. 'ಹೆಂಗಸರ ಭಾಷೆ' ಎಂಬುದು ಹಲವು ಬಗೆಗಳಲ್ಲಿ ಹರಡಿಕೊಂಡಿರುವಂತಹ ವಿವರಗಳು ಲೇಖನದಲ್ಲಿ ಮಂಡಿತವಾಗಿವೆ.

ಭಾಷೆಯಲ್ಲಿರುವ ಜಂಡರ್ ವ್ಯತ್ಯಾಸಗಳಿಂದ ಆಗುವ "ಸಾಮಾಜಿಕ ಪರಿಣಾಮಗಳು" ಎಂಬ ಈ ಲೇಖನದಲ್ಲಿ ಹೆಂಗಸರು ಮತ್ತು ಗಂಡಸರ ನಡುವಣ ಸಂವಾದದಲ್ಲಿ ಉಂಟಾಗುವ ತಪ್ಪು ತಿಳಿವಳಿಕೆಗಳು ಮಹಿಳೆಯರ ಮಾತಾಡುವ ಸಮಯ ಆದರೆ ಪ್ರಮಾಣದ ಕುರಿತಂತೆ ಕಡಿಮೆ ಬದಲು ಮಾತುಗಳನ್ನು ಆಡದೇ ಕೇವಲ ಸಮ್ಮತಿ ತೋರಿಸುವಂತಹ ರೀತಿಯ ಮಾತು ಪ್ರಶ್ನೆಗಳು ಕೇಳುತ್ತಾರೆ. ಅದನ್ನು ಅರ್ಥಮಾಡಿಕೊಳ್ಳುವ ವಿಧಾನದಲ್ಲಿ ಇರುವಂತಹ ತಪ್ಪುಗಳು, ನಡುವಣ ಕೊಂಡಿಗಳು ಮತ್ತು ವಿಷಯ ಬದಲಾವಣೆ ಮಾಡುತ್ತಿರುವಂತಹ ಮನೋಭಾವ ಗಂಡಸರಲ್ಲಿ ಹೆಚ್ಚು ಮಹಿಳೆಯರು ದೀರ್ಘಕಾಲದವರೆಗೆ ಒಂದೇ ವಿಷಯವನ್ನು ಕುರಿತು ಮಾತನಾಡುತ್ತಾರೆ. ಹೆಂಗಸರು ಮಾತುಗಳು ಸಾತ್ ಕೊಡುವ ರೀತಿಯಲ್ಲಿ ಅಥವಾ ಸಾಂತ್ವನ ಕೊಡುವುದನ್ನು ಬಯಸುತ್ತವೆ. ಆದರೆ ಗಂಡಸರು ಪರಿಹಾರಗಳನ್ನು ಕೊಡುವ ಮಾತುಗಳನ್ನು ಆಡುತ್ತಾರೆ. ಮಾತಿನ ಧಾಳಿ ಗಂಡಸರಲ್ಲಿ ಹೆಚ್ಚು ಕೇಳಿಸಿಕೊಳ್ಳುವುದು ಹೆಣ್ಣುಮಕ್ಕಳು ಹೆಚ್ಚು. ಒಟ್ಟಾಗಿ ಮಾತಾಡುವಾಗ ಮಹಿಳೆಯರು ಸರದಿಯಲ್ಲಿ ಮಾತನಾಡಿದರೆ ಗಂಡಸರು ಮಧ್ಯೆ ಮಧ್ಯೆ ಬಾಯಿ ಹಾಕುತ್ತಿರುತ್ತಾರೆ. ಮತ್ತು ತಮ್ಮ ವಿಚಾರಗಳನ್ನು ಮಾತ್ರ ಹೇಳಲು ಹೋಗುತ್ತಾರೆ. ಭಾಷೆ ಒಳಗಡೆಗೆ ಗಂಡಸರಿಗೆ ಅನುಕೂಲತೆಗಳು ಹೆಚ್ಚು ಎಂಬ ವಿಚಾರವನ್ನು ಲೇಖನ ಬಿಚ್ಚಿಡುತ್ತದೆ. ಈ ಲೇಖನವನ್ನು ಜೆನ್ನಿಫರ್ ಕೋಟ್ಸ್ ಬರೆದಿರುವ "Women, Main and Gender" ಎಂಬ ಲೇಖನದಿಂದ ಅನುವಾದಿಸಿದ್ದಾರೆ.

ಭಾಷಿಕ ವಿವರಗಳನ್ನು ಸಾಮಾಜಿಕ ನೆಲೆಗೆ ಕೊಂಡಿ ಹಾಕುವ ಬಗೆ ಎಂಬ ಲೇಖನ "Penelope Exkert and Sally Meceneldgint" ಅವರು ಬರೆದಿರುವ Langauage and Gender ದಿಂದ ಆಯ್ಕೆ ಮಾಡಿಕೊಂಡಿದ್ದಾರೆ. ಈ ಲೇಖನದಲ್ಲಿ ಭಾಷಿಕವಾಗಿ ಬದಲಾದ ಹಲವು ವಿಚಾರಗಳನ್ನು ಅಧ್ಯಯನ ಮಾಡಿದ್ದಾರೆ. ಬದಲಾಗುವ ಪದ್ಧತಿಗಳು, ಬದಲಾಗುವ ತಾತ್ವಿಕತೆಗಳು, ಬದಲಾವಣೆಯ ಸಾಮಾಜಿಕ ನೆಲೆಗಳು, ಸ್ವಂತಿಕೆಯನ್ನು ಕಂಡುಕೊಳ್ಳುವ ಕೆಲಸ ಮುಖಾಮುಖಿ ಸಂಘರ್ಷದಿಂದ ಸಮಾಜದಲ್ಲಿನ ದಿನನಿತ್ಯದ ಮುಖಾಮುಖಿ ವಿಚಾರಗಳು ಅಡಗಿವೆ. ಭಾಷಿಕ ಸಂಪನ್ಮೂಲಗಳು, ಧ್ವನಿ ರಚನೆ, ಪದರಚನೆ, ವ್ಯಾಕರಣದಲ್ಲಿ ಜಂಡರ್, ಪದಕೋಶ, ವಾಕ್ಯರಚನೆ, ಕಥನ, ವಿಶ್ಲೇಷಣೆ ಇತ್ಯಾದಿ ಅಂಶಗಳನ್ನು ಪ್ರಾಯೋಗಿಕವಾಗಿ ಲೇಖನದಲ್ಲಿ ಅಧ್ಯಯನ ಮಾಡಿದ್ದಾರೆ.

ಅಧ್ಯಯನ ವಿಧಾನವನ್ನು ಕುರಿತು ಭಾಷೆ ಮತ್ತು ಜಂಡರ್ ಸಂಶೋಧನೆಯಲ್ಲಿ ಸಿದ್ಧ ಮಾದರಿಗಳು ಪರಿಶೀಲನೆಯಿಂದ ತೀರ್ಮಾನದ ಕಡೆಗೆ ಇತ್ಯಾದಿ ಅಂಶಗಳು ಲೇಖನದಲ್ಲಿ ಅಧ್ಯಯನಕ್ಕೆ ಒಳಪಡಿಸಿದ್ದಾರೆ.

"ಭಾಷೆಯೇ ಯಜಮಾನ್ಯವಾದಾಗ : ಲಿಂಗ ಭಿನ್ನತೆಯನ್ನು ಸಾಂಸ್ಕೃತಿಕವಾಗಿ ನೋಡುವ ಬಗೆ" ಎಂಬ ಈ ಲೇಖನವನ್ನು Language in Society Journalನ ೨೧ನೇ ಸಂಚಿಕೆಯ Akiuchida : When Difference is dominast A Critique of the anti - power based cultural approach to sex difference ಎಂಬ ಲೇಖನವನ್ನು ಆಯ್ಕೆ ಮಾಡಿಕೊಂಡಿದ್ದಾರೆ. ಇದರಲ್ಲಿ ಗಂಡು ಹೆಣ್ಣುಗಳ ನಡುವಣ ಸಾಂಸ್ಕೃತಿಕ ಭಿನ್ನತೆ : ಒಂದು ಪರಿಚಯವನ್ನು ಪ್ರಾಯೋಗಿಕವಾಗಿ ಚರ್ಚಿಸಿದ್ದಾರೆ. ಹೆಣ್ಣು ಗಂಡುಗಳ ಮಾತುಕತೆಗಳ ವಿಶ್ಲೇಷಣೆಗೆ ಭಿನ್ನ ಸಂಸ್ಕೃತಿ ಚೌಕಟ್ಟನ್ನು ಅನ್ವಯಿಸುವಾಗ ಉಂಟಾಗುವ ಸಮಸ್ಯೆಗಳು, ಭಿನ್ನತೆ ಮತ್ತು ಯಜಮಾನಿಕೆಯ ಸಮಸ್ಯೆಗಳು ಮತ್ತು ಜಂಡರ್‌ನ್ನು ಒಂದು ಸಾಮಾಜಿಕ ರಚನೆ ಎಂದು ಪರಿಗಣಿಸುವ ಬಗೆ ಈ ಎಲ್ಲ ಅಂಶಗಳನ್ನು ಚರ್ಚಿಸಿದ್ದಾರೆ.

"Extracts from man made language" ಎಂಬ ಲೇಖನ Dale Spender ಅವರು ಬರೆದಿರುವುದನ್ನು ಕನ್ನಡಕ್ಕೆ ಗಂಡಸು ಕಟ್ಟಿದ ಭಾಷೆ ಲೊಲ್ ಸ್ಪೆಂಡರ್‌ಳ Man made Language ಕೃತಿಯ ಆಯ್ದ ಭಾಗಗಳು ಎಂಬ ಲೇಖನವಾಗಿ ಮಾಡಿದ್ದಾರೆ. ಈ ಲೇಖನದಲ್ಲಿ ಹಲವಾರು ತತ್ವಜ್ಞಾನಿಗಳು ಗಂಡಸನ್ನು ಪ್ರತಿನಿಧಿಸಿ ಈ ಪ್ರಪಂಚ ಅವನು ಕಟ್ಟಿರುವುದು ಎಂಬುದಾಗಿ ನೀಡಿರುವಂತಹ ಹಲವು ವ್ಯಾಖ್ಯಾನಗಳನ್ನು ಮುಂದಿಟ್ಟುಕೊಂಡು ಭಾಷೆಯನ್ನು ಚರ್ಚೆಗೆ ಒಳಪಡಿಸುತ್ತಾರೆ. ಭಾಷೆಯು ನಮ್ಮ ಜಗತ್ತನ್ನು ರೂಪಿಸುತ್ತದೆ ಎನ್ನುವುದಾದರೆ, ಸಂಕೇತಗಳನ್ನು ರಚಿಸುವ ಮತ್ತು ಅವುಗಳಿಗೆ ಅರ್ಥ ಪ್ರಧಾನ ಮಾಡುವ ಅಧಿಕಾರವುಳ್ಳವರು ಈ ಲೋಕದಲ್ಲಿ ವಿಶಿಷ್ಟ ಸ್ಥಾನಮಾನಗಳನ್ನು ಪಡೆದುಕೊಳ್ಳುತ್ತಾರೆ. ತಮ್ಮ ಉದ್ದೇಶಕ್ಕನುಗುಣವಾಗಿ ಈ ಜಗತ್ತನ್ನು ವ್ಯವಸ್ಥೆಗೊಳಿಸುತ್ತಾರೆ. ತಾವೇ ಕೇಂದ್ರದಲ್ಲಿರುವಂತೆ ನೋಡಿಕೊಳ್ಳುವ ಭಾಷೆಯನ್ನು, ವಾಸ್ತವತೆಯನ್ನು, ಜ್ಞಾನವನ್ನು ಸೃಷ್ಟಿಸಿಕೊಳ್ಳುತ್ತಾರೆ. ಯಾರೂ ಪ್ರಶ್ನಿಸಲಾಗದ ನಂಬಿಕೆಯ ಜಾಲವು ಬೇರು ಬಿಡುವಂತೆ ನೋಡಿಕೊಳ್ಳುತ್ತಾರೆ ಎಂಬೆಲ್ಲ ವಿಚಾರಗಳನ್ನು ವಿವರಿಸಿ ಭಾಷೆ ಗಂಡಸರ ಪರವಾಗಿ ನಿರ್ಮಾಣಗೊಂಡಿರುವಂಥದ್ದನ್ನು ವಿವರಿಸಿದ್ದಾರೆ.

"Maria Black and Rolalingal Coward" ಎಂಬುವವರು ಬರೆದಿರುವ Screen Education - 39(1981) ಎಂಬುದರಿಂದ ಆಯ್ದುಕೊಂಡು, ಭಾಷಿಕ, ಸಾಮಾಜಿಕ ಮತ್ತು ಲೈಂಗಿಕ ಸಂಬಂಧಗಳು ಎಂಬುದಾಗಿ ಕನ್ನಡಕ್ಕೆ ತಂದಿದ್ದಾರೆ. ಈ ಲೇಖನ ಡೇಲ್ ಸ್ಪೆಂಡರ್ ಬರೆದ "Man made Language" ಕೃತಿಗೆ ಪ್ರತಿಕ್ರಿಯೆ ಆಗಿದೆ. ಇದರಲ್ಲಿ ಗಂಡಸು ಕಟ್ಟಿದ್ದು ಎಂಬ

ಪರಿಕಲ್ಪನೆ ಕುರಿತಂತೆ ಚರ್ಚಿಸಿದ್ದಾರೆ. ಯಾವ ಭಾಷೆ? ಯಾರ ಭಾಷೆ ಎಂಬ ವಿಚಾರಗಳನ್ನು ಮುಂದಿಟ್ಟುಕೊಂಡಿದ್ದಾರೆ. ಲಿಂಗತಾರತಮ್ಯದ ವಾಕ್ಯರಚನೆ ಹೇಗಿದೆ, ಲಿಂಗ ತಾರತಮ್ಯ ನೆಲೆಯ ಅರ್ಥಗಳೇನು, ಅರ್ಥಾನ್ವಯರ ರಚನೆಗಳು ಹಾಗೂ ಜಂಡರ್ ರಹಿತ ಗಂಡಸು; ಅರ್ಥಾತ್ ವಿನಾಶದೆಡೆಗೆ ಸಾಗುತ್ತಿರುವ ಜೀವಿ ಹೀಗೆ ಇತ್ಯಾದಿ ಅಂಶಗಳಿಂದ ಒಳಗೊಂಡಿದೆ.

ಜಂಡರ್ ಲೇಪಿತ ವ್ಯಾಖ್ಯಾನಗಳು ಈ ಲೇಖನವನ್ನು Sara Mills ಎಂಬುವವರು ಬರೆದಿರುವ "Feminist Syslistias(1995) ಎಂಬ ಲೇಖನವನ್ನು ಕನ್ನಡಕ್ಕೆ ತಂದಿದ್ದಾರೆ. ಇದರಲ್ಲಿ ಹೆಂಗಸರ ಮಾತು? ಹೆಣ್ಣು ವಾಕ್ಯ (Ceriture Feminine), ವ್ಯತ್ಯಾಸವನ್ನು ಭಾಷಿಕವಾಗಿ ಗುರುತಿಸುವುದು ಹೇಗೆ? ಜಂಡರ್‌ಯುಕ್ತ ವಾಕ್ಯಗಳ ಸವಾಲುಗಳು, ಶಿಶ್ನ ಕೇಂದ್ರೀಯತೆ ಮತ್ತು ಹೆಂಗಸರ ಬರವಣಿಗೆ ಕುರಿತ ತೀರ್ಮಾನಗಳು ಇತ್ಯಾದಿ ಅಂಶಗಳ ಕುರಿತಂತೆ ಚರ್ಚಿಸಿದ್ದಾರೆ.

False dichotomics : Grammer and Sexual Polarites(in) Feminsim and Lingustic Theory ಎಂಬುದನ್ನು Deboarh carmerak ಬರೆದಿದ್ದಾರೆ. ಇದನ್ನು ಕನ್ನಡಕ್ಕೆ ಹುಸಿ ದ್ವಿಧಾಭಾವಗಳು ವ್ಯಾಕರಣ ಮತ್ತು ಲೈಂಗಿಕತೆಯ ಧ್ರುವೀಕರಣ ಎಂಬುದಾಗಿ ತಂದಿದ್ದಾರೆ. ಇದರಲ್ಲಿ ಭಾಷಾಶಾಸ್ತ್ರ ಮತ್ತು ದ್ವಿದಾಕಲ್ಪನೆ, ಗಂಡು ಆಗಿರುವುದು ಮತ್ತು ಆಗಿಲ್ಲದಿರುವುದು : ಅರ್ಥದ ನಕಾರಾತ್ಮಕ ನೆಲೆಯೇ? ಜಂಡರ್ ಪ್ರಸಂಗ : ವ್ಯಾಕರಣ ಮತ್ತು ತಾತ್ವಿಕತೆ, ಜಂಡರ್ ವ್ಯಾಖ್ಯಾನ, ವ್ಯಾಕರಣಾತ್ಮಕ ಜಂಡರ್ : ಪರಿಶೀಲನೆ, ಸಹಜ ಜಂಡರ್ ಎಂಬ ಹಲವು ಪರಿಕಲ್ಪನೆಗಳನ್ನು ಪರಿಚಯಿಸಿ ಅವುಗಳಿಗೂ ಭಾಷೆಗೂ ಇರುವಂತಹ ಹಲವು ನೆಲೆಯನ್ನು ಚರ್ಚಿಸಿದ್ದಾರೆ.

ಪರಿವರ್ತನೆಗಳನ್ನು ತರುವುದು : ಲೈಂಗಿಕತಾವಾದಿ ಭಾಷೆ ಕುರಿತ ಚರ್ಚೆ ಎಂಬ ಲೇಖನವನ್ನು Deborah Cameron ಅವರು ಬರೆದಿರುವ Feminism and Lingustic Theory ಎಂಬುದರಿಂದ ಆಯ್ದುಕೊಂಡು ಕನ್ನಡಿಸಿದ್ದಾರೆ. ಈ ಲೇಖನವು ಲೈಂಗಿಕತಾವಾದಿ ಭಾಷೆಯ ವ್ಯಾಖ್ಯಾನ, ಲೈಂಗಿಕತಾವಾದಿ ಭಾಷೆಯನ್ನು ಅರಿಯುವುದು, ಭಾಷೆಯಲ್ಲಿ ಲೈಂಗಿಕತಾವಾದಿ ನೆಲೆ ಸೂಚಕವೋ, ಕಾರಣವೋ? ವಿಶ್ಲೇಷಣೆ ಮತ್ತು ಪ್ರತಿರೋಧ ಎಂಬಲ್ಲಿ ಭಾಷೆಯ, ಲೈಂಗಿಕತಾವಾದೀ ನೆಲೆಗಳ ವಿರುದ್ಧ ಸ್ತ್ರೀವಾದಿಗಳ ಹೋರಾಟ ದಿನದಿನದ ವ್ಯವಹಾರಗಳಲ್ಲಿ ಲೈಂಗಿಕತಾವಾದ ಇದರಲ್ಲಿ ಚಿಕ್ಕ ಬೈಗುಳಗಳು: ಮುಚ್ಚಟೆಯ ಮಾತುಗಳ ಕುರಿತು ಚರ್ಚಿಸಿದ್ದಾರೆ. ಅಷ್ಟೇನೂ ಚಿಕ್ಕವಲ್ಲದ ಬೈಗುಳಗಳು: 'ಬೀದಿ ಮಾತುಗಳು' ಮತ್ತು ಹೆಂಗಸರ ಮೇಲೆ ಶಾಬ್ದಿಕ ಹಿಂಸಾಚಾರ, ಸಾಮಾಜಿಕ ನಿಯಂತ್ರಣಕ್ಕಾಗಿ ಬೈಗುಳಗಳು, ಆದಿ ಭಾಷಿಕ ತಂತ್ರಗಳು herstoryಯ ಮರುಗಳಿಕೆ, ಭಾಷೆಯಲ್ಲಿ ಸಾಂಸ್ಥಿಕ ನೆಲೆಯ ಲೈಂಗಿಕತಾವಾದ : ನಿಘಂಟುಗಳು ಮತ್ತು ವ್ಯಾಕರಣಗಳು, ಪದ ಪ್ರಸಾರ :

ದ್ವಾರಪಾಲಕರು, ಸ್ತ್ರೀವಾದಿಗಳು ಮತ್ತು ನಿಘಂಟು ರಚನೆ : ನಮಗೆ ಬೇಕಾಗಿರುವುದು Dictonaryಯೇ ಹೊರತು Dich-lionaryಯಲ್ಲ" ಎಂಬ ವಿಚಾರಗಳ ಜೊತೆಗೆ ಸ್ತ್ರೀವಾದಿಗಳು ಮತ್ತು ವ್ಯಾಕರಣ : ತಟಸ್ಥ ಭಾಷೆ ಎಂಬ ಮಿಥ್ಯಾಕಲ್ಪನೆ, ಲೈಂಗಿಕತಾವಾದಿಯಲ್ಲದ ಭಾಷೆ ಇರುವುದು ಸಾಧ್ಯವೇ? ಎಂಬ ಹಲವು ವಿಚಾರಗಳು ಈ ಲೇಖನದಲ್ಲಿ ಚರ್ಚೆಗೆ ಒಳಪಟ್ಟಿವೆ.

ಮೌನ, ಪ್ರತ್ಯೇಕೀಕರಣ ಮತ್ತು ದಮನ : ಸ್ತ್ರೀವಾದಿ ಭಾಷಾ ಮಾದರಿಗಳು ಎಂಬ ಲೇಖನವನ್ನು Deboarh Cameron ಅವರು ೧೯೮೫ರಲ್ಲಿ ಬರೆದಿರುವ Making changes : The debate on sexist language silence alienation and oppression : Feminist models of Language Sourei Feminishs and Lingustic Theoryಯಿಂದ ಆಯ್ದು ಕನ್ನಡಕ್ಕೆ ತಂದಿದ್ದಾರೆ. ಇದರಲ್ಲಿ ತೀವ್ರವಾದಿ, ಸ್ತ್ರೀವಾದಿ ಸಿದ್ಧಾಂತಕಾರರು ವಿಧವಾದ ಭಾಷೆ ಮತ್ತು ವಾಸ್ತವತೆ, ವಿಧಿವಾದದ ಸೈದ್ಧಾಂತಿಕ ಬೇರುಗಳು ಇದರಲ್ಲಿ ಸಸೂರ್ ವಿಚಾರಗಳನ್ನು, ಸಪೀರ್ ಮತ್ತು ವ್ಯೂರ್ಫ್ ಇವರ ವಿಚಾರಗಳು ಚರ್ಚಿಸಿದ್ದಾರೆ. ನಿಯಂತ್ರಣ ಬಾಯಿಕಟ್ಟಿದ ಹೆಂಗಸು ಮತ್ತು ಗಂಡು ಕಟ್ಟಿದ ಭಾಷೆ : ಕೆಲವು ತೀವ್ರವಾದಿ, ಸ್ತ್ರೀವಾದಿ ಭಾಷಿಕ ಸಿದ್ಧಾಂತಗಳು : ಬಾಯಾಳಿ ಮತ್ತು ಬಾಯಿ ಕಟ್ಟಿದವಳು : ಹೆಂಗಸಿನ ವಾಸ್ತವ, ಗಂಡಸರ ಪ್ರತಿನಿಧೀಕರಣ, ನಿಯಂತ್ರಣದ ಸಮಸ್ಯೆ, ವಿಧಿವಾದದ ಸಮಸ್ಯೆ, ಅಧಿಕಾರದ ಸಮಸ್ಯೆ, ಗಂಡು ಕಟ್ಟಿದ ಭಾಷೆ : ಪಿತೃಪ್ರಧಾನತೆ ಮತ್ತು ವ್ಯಾಖ್ಯಾನ ಸಾಮರ್ಥ್ಯ, ನಿಯಂತ್ರಣ, ಪ್ರತಿರೋಧ: ಸಾಮಾನ್ಯ ಭಾಷೆಯ ಕನಸು ಇತ್ಯಾದಿ ವಿಚಾರದ ಕುರಿತು ಚರ್ಚಿಸಿದ್ದಾರೆ.

ಸ್ತ್ರೀವಾದಿ ಭಾಷಾಯೋಜನೆ : ಏನಾದರೂ ಉಪಯೋಗವಾಗಿದೆಯೆ? ಎಂಬ ಲೇಖನವನ್ನು Anne Pauwels Feminist Language Planing : Has it been worth while? ಎಂಬ ಲೇಖನವು Linguistic : Oline ಎಂಬುವರು ರಚಿಸಿದ್ದಾರೆ. ೧. San ೧೯೯೮ರಲ್ಲಿ ಅದನ್ನು ಕನ್ನಡಕ್ಕೆ ತಂದಿದ್ದಾರೆ. ಇಲ್ಲಿ ಮುಖ್ಯವಾಗಿ ಸ್ತ್ರೀವಾದ ಮತ್ತು ಭಾಷೆ, ಸ್ತ್ರೀವಾದ ಮತ್ತು ಭಾಷಾ ಸುಧಾರಣೆ, ಸ್ತ್ರೀವಾದಿ ಭಾಷಾ ಸುಧಾರಣೆಗಳ ಮೌಲ್ಯಮಾಪನ, ಸ್ತ್ರೀವಾದಿ ಭಾಷಾ ಸುಧಾರಣೆಗಳ ಬಳಕೆ ಗೆಲುವೋ? ಸೋಲೋ?, ಸ್ತ್ರೀವಾದಿ ಭಾಷಾ ಬದಲಾವಣೆಗಳ ಪ್ರಸರಣ ಈ ಎಲ್ಲ ಅಂಶಗಳಿವೆ.

ಕೊನೆಯದಾಗಿ ಡೆಬೊರಾ ಕೆಮೊರೋನ್ ಅವರು ಬರೆದಿರುವ Feminisim and Linguistic Theory ಎಂಬ ಲೇಖನವನ್ನು ಸ್ತ್ರೀವಾದಿ ಭಾಷಾ ಮಾದರಿಗಳು: ಸೀಮಿಯಾಲಜಿ; ಆಧುನಿಕೋತ್ತರವಾದ ಮತ್ತು ಜಂಡರ್‌ಯುಕ್ತ ಕರ್ತೃ ಕುರಿತು ಚರ್ಚೆ ವಿಚಾರವಾಗಿ ಕನ್ನಡಿಕರಿಸಿದ್ದಾರೆ. ಇದರಲ್ಲಿ ಡೇಲ್ ಸ್ಪೆಂಡರ್ ಕುರಿತ ವಿಮರ್ಶೆ, ಮನೋವಿಶ್ಲೇಷಣೆ ಮತ್ತು ಲಕಾನ್, ಲಕಾನ್ ಮತ್ತು

ಸ್ತ್ರೀವಾದಿ ಚಿಂತನೆಗಳು : ಇರಿಗೆರೆ ಮತ್ತು ಕ್ರಿಸ್ತೀವಾ ಲೂಸ್ ಇರಿಗೆರೆ ಆಮೇಲೆ ಜ್ಯೋಲಿಯ ಕ್ರಿಸ್ತೀವಾ, ಇವರ ವಿಚಾರಗಳ ನಂತರದಲ್ಲಿ ಸ್ತ್ರೀವಾದ ಮತ್ತು ಆಧುನಿಕೋತ್ತರವಾದ, ಭಾಷೆ, ದೇಹಗಳು, ಚರಿತ್ರೆ, ಭಾಷೆ, ಜಂಡರ್, ವಿಚ್ಛಿದ್ರೀಕರಣ ಇತ್ಯಾದಿ ಅಂಶಗಳ್ನು ಕುರಿತು ಚರ್ಚಿಸಿದ್ದಾರೆ.

ಒಟ್ಟಾರೆಯಾಗಿ ಸ್ತ್ರೀವಾದಿ ಭಾಷಾಶಾಸ್ತ್ರ ಪ್ರವೇಶಿಕೆ ಕೃತಿಯ ಇದುವರೆಗೆ ಪಾಶ್ಚಿಮಾತ್ಯರಲ್ಲಿ ಮಹಿಳಾ ಭಾಷಾ ಚಿಂತನೆಗಳು ಕುರಿತಂತೆ ನಡೆದಿರುವ ಹಲವು ಮಾದರಿಯ ಚರ್ಚೆಗಳನ್ನು ನಮ್ಮ ಮುಂದೆ ಇಡುತ್ತದೆ. ಇತರ ಭಾಷೆಗಳಲ್ಲಿ ಆಗಬೇಕಾದ ಅಧ್ಯಯನಗಳ ಹಲವು ವಿಚಾರಗಳನ್ನು ವಿವರಿಸಿಕೊಡುತ್ತದೆ.

ಮಹಿಳಾ ಭಾಷಾ ಚಿಂತನೆಗೆ ಸಂಬಂಧಿಸಿದಂತೆ ಮಹತ್ವವಾದ ಅಧ್ಯಯನ ನಡೆಯಬೇಕಿದೆ. ಈ ಚಿಂತನೆಗಳು ಕನ್ನಡ ಸಂದರ್ಭದಲ್ಲಿ ಕೆಲವು ವಿಚಾರ ಸಂಕಿರಣಗಳಲ್ಲಿ ಬಿಡಿ ಲೇಖನಗಳಲ್ಲಿ ಪ್ರಕಟಗೊಳ್ಳುತ್ತಿದೆ. ಈ ನಿಟ್ಟಿನಲ್ಲಿ ನಡೆದಿರುವ ಒಂದು ಮಹತ್ವದ ಚಿಂತನೆಯ ಎಂದರೆ ಕನ್ನಡ ವಿಶ್ವವಿದ್ಯಾಲಯದ ಮಹಿಳಾ ಅಧ್ಯಯನ ಕೇಂದ್ರದವರು ನಡೆಸಿರುವ ವಿಚಾರ ಸಂಕಿರಣ ಎನ್ನಬಹುದು. ವಿಚಾರ ಸಂಕಿರಣದಲ್ಲಿ ಮಂಡಿತಗೊಂಡ ಮಹತ್ವದ ವಿಚಾರಗಳು ಪುಸ್ತಕದ ರೂಪದಲ್ಲಿ "ಹೆಣ್ಣು ಮತ್ತು ಭಾಷೆ" ಎಂಬ ಹೆಸರಿನಲ್ಲಿ ಪ್ರಕಟಗೊಂಡಿದೆ. ಈ ಕೃತಿ ಮಹತ್ವವಾದ ವಿಚಾರಗಳನ್ನು ಮುಂದಿಡುತ್ತದೆ. ಡಾ. ಕೆ.ವಿ. ನಾರಾಯಣ ಅವರು ಈ ಕೃತಿಯಲ್ಲಿ ನಾಲ್ಕು ಲೇಖನಗಳನ್ನು ಬರೆದಿದ್ದಾರೆ. ಒಟ್ಟಾರೆ ವಿಚಾರಗಳು ಕನ್ನಡದ ಸಂದರ್ಭವನ್ನು ಇಟ್ಟುಕೊಂಡು ಹೆಣ್ಣಿನ ಭಾಷೆಯ ಹಲವು ಆಯಾಮಗಳ ಕುರಿತ ಚಿಂತನೆಗಳನ್ನು ಮಂಡಿಸಿದ್ದಾರೆ.

ಭಾಷಾ ಕಲಿಕೆ ಮತ್ತು ಬಳಕೆಗಳಲ್ಲಿ ಹೆಣ್ಣಿಗೆ ಇರುವ ಸವಾಲುಗಳು ಈ ವಿಚಾರದಡಿಯಲ್ಲಿ ಹಲವಾರು ಸಂಗತಿಗಳನ್ನು ಮಂಡಿಸಿದ್ದಾರೆ. ಅದರಲ್ಲಿ "ಹೆಣ್ಣಿನ ಭಾಷೆ ಮೌನವಾಗುವ ಬಗೆ" ಎಂಬ ಲೇಖನವನ್ನು ಬರೆದಿದ್ದಾರೆ. ಇದರಲ್ಲಿ ಅವರು ವಿವರಿಸುತ್ತಿರುವ ಯಾವ ಅಂಶವೆಂದರೆ ಭಾರತೀಯ ಚಿಂತನ ನೆಲೆಯಲ್ಲಿ ಹೆಣ್ಣುತನ, ಗಂಡುತನ ಎಂಬ ಎರಡು ರೂಢಿಗಳು ಬೆಳೆದುಬಂದಿವೆ. ಭಾಷೆ ಒಳಗಡೆ ಇದನ್ನು ಗುರುತಿಸುತ್ತಾರೆ. ಗಂಡು ಚಿಂತನಾ ಕ್ರಮ ಗ್ರಹಿಕೆ ಮತ್ತು ಅಭಿವ್ಯಕ್ತಿ ಯಾವಾಗಲೂ ಕೂಡಾ ಸವಾಲು ಹಾಕುವ ರೀತಿಯದು. ಏನನ್ನಾದರೂ ಸ್ಥಾಪಿಸುವ ಮಾದರಿಯದು. ಆ ಚಿಂತನಾ ಕ್ರಮವೇ ಒಂದು ಅಭಿಪ್ರಾಯವನ್ನು ಸ್ಥಾಪಿಸುವ ದೃಷ್ಟಿಯಿಂದ, ಬೇರೊಂದು ಅಭಿಪ್ರಾಯವನ್ನು ನಿರಾಕರಿಸುವ ದೃಷ್ಟಿಯನ್ನು ಹೊಂದಿರುತ್ತದೆ. ಹೆಣ್ಣು ಚಿಂತನಾಕ್ರಮ ಎನ್ನುವುದು ಹಾಗಲ್ಲ, ಅದು ಒಳಗೊಳ್ಳುವ ವಿಧಾನವನ್ನು ಅನುಸರಿಸುತ್ತದೆ. ಗಂಡು ಚಿಂತನಾಕ್ರಮವನ್ನು ವಾದ ಹೂಡುವ ಬಗೆಯೆಂದೂ, ಹೆಣ್ಣು ಚಿಂತನಾಕ್ರಮವು ನಿರೂಪಣಾ ಮಾರ್ಗವನ್ನು ಅವಲಂಬಿಸುವ ಬಗೆಯೆಂದೂ ಹೇಳುತ್ತಾರೆ. ಈ ಎರಡು ವಿರೋಧಿ ನೆಲೆಯಲ್ಲಿ ಇಲ್ಲ. ಅವೆರಡು ಪರಸ್ಪರ

ಮುಖಾಮುಖಿಯಾಗುವ ನೆಲೆಯಲ್ಲಿಲ್ಲ. ಪೂರಕ ನೆಲೆಯಲ್ಲಿವೆ ಎಂದು ಎಲ್ಲರೂ ಹೇಳುತ್ತಾ ಬರುತ್ತಿದ್ದಾರೆ. ಆದರೆ, ಅವೆರಡರಲ್ಲಿ ತಾರತಮ್ಯ ಭಾವವಿದೆಯೆಂದು ಯಾರು ಗುರುತಿಸುತ್ತಿಲ್ಲ ಎನ್ನುತ್ತಾರೆ. ಭಾಷಿಕ ಸಾಮರ್ಥ್ಯವನ್ನು ಪಡೆದುಕೊಳ್ಳುವ ಹಂತದಲ್ಲಿ ಹೆಣ್ಣು ಮತ್ತು ಗಂಡು ಎಂಬ ವ್ಯತ್ಯಾಸವಿಲ್ಲದೆ ಇರಬಹುದು. ಆದರೆ ಸಾಮರ್ಥ್ಯವನ್ನು ಪಡೆದುಕೊಂಡ ಮೇಲೆ ಅದರ ಬಳಕೆಯ ನೆಲೆಗೆ ಬಂದಾಗ ಹೆಂಗಸಿನ ಪ್ರಮಾಣ ಶಬ್ದದಿಂದ ಮೌನದ ಕಡೆಗೆ ಎನ್ನುತ್ತಾರೆ.

ಭಾಷೆ ಒಳಗಡೆಯಿರುವ ಮೂರು ನೆಲೆಗಳಲ್ಲಿ ಇರುವ ವಿಚಾರಗಳನ್ನು ವಿವರಿಸುತ್ತಾರೆ. ಅರ್ಥ, ಭಾವ ಮತ್ತು ಕ್ರಿಯೆ ಇವುಗಳಿಂದ ಭಾಷೆ ಹಲವು ನೆಲೆಯ ಹಲವು ಅರ್ಥಗಳನ್ನು ಪಡೆದುಕೊಳ್ಳುತ್ತದೆ. ಇಲ್ಲಿ ಭಾಷೆ ಸ್ವರೂಪವನ್ನು ಗಮನಿಸುವುದರ ಮೂಲಕ ಅದರಲ್ಲಿ ಅಡಗಿರುವ ತಾರತಮ್ಯ ಭಾವವನ್ನು ಗಮನಿಸಬಹುದು.

ಇಂದಿನ ಸ್ತ್ರೀವಾದಿ ಮತ್ತು ಭಾಷಾ ಚಿಂತಕರ ಮುಂದಿರುವ ದೊಡ್ಡ ಸವಾಲನ್ನು ಕುರಿತಂತೆ ಮಾತನಾಡುತ್ತಾರೆ. ತಮ್ಮ ಭಾಷಾ ಬಳಕೆಯ ಮಿತಿಗಳ ಬಗೆಗೆ ಅರಿವನ್ನು ಪಡೆದ ಹೆಂಸರು ತಮ್ಮ ಭಾಷೆಯ ಬಳಕೆಗೆ ಇರುವ ತಾರತಮ್ಯದ ನೆಲೆಯನ್ನು ಅರ್ಥಮಾಡಿಕೊಂಡಾಗ ಆ ತಾರತಮ್ಯವನ್ನು ನಿವಾರಿಸುವ ಹಂತದಲ್ಲಿ ಕೆಲಸ ಮಾಡಬೇಕೋ ಅಥವಾ ಆ ವ್ಯತ್ಯಾಸವನ್ನು ಚಹರೆ ಎಂಬಂತೆ ಕಾಯ್ದುಕೊಳ್ಳುವ ಹಂತದಲ್ಲಿ ಕೆಲಸ ಮಾಡಬೇಕೋ ಎನ್ನುವ ಪ್ರಶ್ನೆಗಳನ್ನು ಮುಂದಿಡುತ್ತಾರೆ.

'ಹೆಣ್ಣಿನ ಮೌನವು ಸ್ವಗತವಾಗುವ ಪ್ರಕ್ರಿಯೆ' ಕುರಿತ ಲೇಖನದಲ್ಲಿ ಭಾಷೆ ಒಳಗಡೆಗೆ ಹಲವು ಅಂಶಗಳನ್ನು ಚರ್ಚಿಸಿದ್ದಾರೆ. ಭಾಷೆ ಕಲಿಕೆ ಮತ್ತು ಭಾಷಾ ಬಳಕೆ ವಿಚಾರಗಳನ್ನು ಚರ್ಚಿಸಿದ್ದಾರೆ. ಭಾಷೆ ಕಲಿಯುವ ಸಂದರ್ಭದಲ್ಲಿ ಒಂದೇ ಆಗಿರುತ್ತದೆ. ಭಾಷೆ ಕಲಿಯುವ ಮಹಿಳೆಯರು ಭಾಷೆ ಕಲಿಯುವಂತಹ ಸಂದರ್ಭದಲ್ಲಿ ಪುರುಷ ಕೇಂದ್ರಿತ ನೆಲೆಯಲ್ಲಿ ಕಲಿಯುತ್ತಾರೆ. ಕಲಿಕೆ ಪ್ರಕ್ರಿಯೆಯಲ್ಲಿ ಭಾಷೆಯನ್ನು ಎರಡು ಬಗೆಯಲ್ಲಿ ಅರ್ಥಮಾಡಿಕೊಳ್ಳಬಹುದಾದುದ್ದನ್ನು ಗುರುತಿಸುತ್ತಾರೆ. ೧. ಕಲಿಕಾ ಪ್ರಕ್ರಿಯೆಯು ಪುರುಷ ಕೇಂದ್ರಿತವಾಗಿರುವುದನ್ನು ಗುರುತಿಸುವುದು. ೨. ಪುರುಷ ಕೇಂದ್ರಿತವಾದ ಭಾಷಾ ಪ್ರಭೇದವಿದೆಯೆಂಬುದನ್ನು ಗುರುತಿಸುವುದು. ಶಿಕ್ಷಣ ಸಂಸ್ಥೆಗಳ ಪಠ್ಯಕ್ರಮದಲ್ಲಿ ಮೇಲಿನ ಬಗೆಯ ಅಂಶಗಳನ್ನು ಗುರುತಿಸುತ್ತಾರೆ. ಹಾಗಿದ್ದರೂ ಮಹಿಳೆಯರು ಆರಂಭದಲ್ಲಿ ಅಂದರೆ ಕಲಿಯುವಂತಹ ಸಂದರ್ಭದಲ್ಲಿ ಗಂಡಸರಿಗಿಂತ ವೇಗವಾಗಿ ಕಲಿಯುತ್ತಾರೆ. ಹೀಗೆ ಪಡೆದುಕೊಂಡ ಸಾಮರ್ಥ್ಯವನ್ನು ಅವರು ಬೆಳೆಯುತ್ತಾ ಹೋದಂತೆಲ್ಲಾ ಕಳೆದುಕೊಳ್ಳುತ್ತಾ ಹೋಗುತ್ತಾರೆ ಎನ್ನುತ್ತಾರೆ. ಅನೌಪಚಾರಿಕ ವಲಯದಲ್ಲಿ ಹೆಂಗಸರಿಗೆ ಭಾಷಾ ಬಳಕೆಯ ಮೇಲೆ ಎರಡು ಬಗೆಯ ನಿಯಂತ್ರಣಗಳಿವೆ. ೧. ಭಾಷೆಯನ್ನು ಬಳಸದೇ ಇರುವುದು. ೨. ಬಳಸಿದರೆ ಸಾಮಾಜಿಕ ನಿರೀಕ್ಷೆ ಮತ್ತು ನಿರ್ದೇಶನಕ್ಕೆ ತಕ್ಕಂತೆ ಬಳಸಬೇಕೆಂಬ ಒತ್ತಡವಿರುವುದು. ಬಳಕೆಯ ಭಾಷಾ ಸ್ವರೂಪಗಳನ್ನು ಈ ಎರಡು

ಅಂಶಗಳೇ ನಿರ್ದೇಶಿಸುತ್ತದೆ. ಈ ಬಗೆಯ ಸಾಮಾಜಿಕ ನಿರ್ಬಂಧಗಳ ಕಾರಣಕ್ಕಾಗಿ ಮಹಿಳೆಯರು ಮಾತನಾಡದೇ ಮೌನಗೊಳ್ಳುತ್ತಾ ಹೋಗುತ್ತಾರೆ ಎಂದು ವಿವರಿಸಿದ್ದಾರೆ.

ಒಟ್ಟಾರೆಯಾಗಿ ಕೆ.ವಿ. ನಾರಾಯಣ ಅವರು ಲೇಖನದಲ್ಲಿ ಗಂಡಿನ ಭಾಷೆ, ಲಕ್ಷಣ ಮತ್ತು ಹೆಣ್ಣಿನ ಭಾಷೆಯ ಲಕ್ಷಣವನ್ನು ಎರಡು ಪದಗಳಲ್ಲಿ ವಿವರಿಸಿದ್ದಾರೆ. ಇವುಗಳಲ್ಲಿ ರಿಪೋರ್ಟ್ ಇನ್ನೊಂದನ್ನು ರಾಪೋರ್ಟ್ ಎಂದು ಕರೆಯಬಹುದೆನ್ನುತ್ತಾರೆ. ಗಂಡಿನ ಭಾಷಾ ಸಂವಹನವು ಯಾರ ಜೊತೆಯಲ್ಲಿ ನಡೆಯುತ್ತಿರಲಿಲ್ಲ. ಅವರು ಎಲ್ಲಿ ಹೇಗೆ ಮಾತನಾಡುತ್ತಿರಲಿಲ್ಲ. ಅದರ ಮೂಲ ಲಕ್ಷಣ ರಿಪೋರ್ಟಿಂಗ್ ಆಗಿರುತ್ತದೆ. ಅವರು ತಮ್ಮನ್ನು ತಾವು ಮಂಡಿಸಿಕೊಳ್ಳುತ್ತಾರೆ. ಗಂಡಿನ ಭಾಷೆಯ ಪ್ರಧಾನ ಲಕ್ಷಣ ತನ್ನನ್ನು ತಾನು ಹೊರಗಿಟ್ಟುಕೊಂಡು ಅಂದರೆ ತನ್ನ ವ್ಯಕ್ತಿತ್ವ ಮನಸ್ಥಿತಿಯನ್ನು ಹೊರಗಿರಿಸಿಕೊಂಡು ಸಂಭಾಷಣೆ/ಸಂವಹನದಲ್ಲಿ ತೊಡಗಿರುವುದು. ಹೆಂಗಸಿನ ಭಾಷೆಯಲ್ಲಿ ಕ್ಯಾಪಪೋರ್ಟ್ ಕಲ್ಪಿಸಿಕೊಳ್ಳುವುದು ಮುಖ್ಯವಾಗಿರುತ್ತದೆ. ಒಂದು ಬಗೆಯ ಸಂಬಂಧವನ್ನು ಕಲ್ಪಿಸಿಕೊಳ್ಳುವುದು ಅವರ ಭಾಷಾ ಸಂವಹನದ ಮುಖ್ಯ ಲಕ್ಷಣವಾಗಿರುತ್ತದೆ. ಈ ರೀತಿಯ ಅಂಶಗಳಿಗೆ ಸಂಬಂಧಿಸಿದಂತೆ ವಿಚಾರಗಳನ್ನು ಮಂಡಿಸಿದ್ದಾರೆ.

'ಮೌನವಾಗುವಿಕೆ ಮತ್ತು ಮೂಕವಾಗುವಿಕೆ' ಇಲ್ಲಿ ಮುಖ್ಯವಾಗಿ ಹೆಂಗಸಿನ ಸ್ಥಿತಿ ಮೌನವೋ ಮೂಕವೋ ಎಂಬ ಪ್ರಶ್ನೆಯನ್ನು ಮುಂದಿಟ್ಟುಕೊಂಡು ಈ ಲೇಖನವನ್ನು ರೂಪಿಸುತ್ತಾರೆ. ಭಾಷೆಯ ಬಳಕೆಯ ವಲಯಗಳನ್ನು ತಮ್ಮ ಉದ್ದೇಶಗಳಿಗನುಗುಣವಾಗಿ ರೂಪಿಸಿಕೊಂಡಿರುತ್ತಾರೆ. ಅದೇ ಭಾಷೆಯನ್ನು ಬಳಸಬೇಕೆಂಬ ಒತ್ತಾಯ ಹೆಂಗಸಿನ ಮೇಲಿರುತ್ತದೆ. ಅಂದರೆ ಹೆಣ್ಣಿನ ವಿಶಿಷ್ಟವಾದ ಅಭಿವ್ಯಕ್ತಿ ವಿಧಾನಕ್ಕೆ ತಕ್ಕ ಭಾಷೆಯ ರಚನೆಗಳು ಬಳಕೆಯ ಸಾಧ್ಯತೆಗಳು ಇಲ್ಲ. ಇರುವ ಭಾಷೆಯೊಡನೆ ಸಂಬಂಧವನ್ನು ಕಲ್ಪಿಸಿಕೊಳ್ಳಬೇಕಾದ ಒತ್ತಡ ಆಕೆಯ ಮೇಲಿದೆ. ಸಾಮಾಜಿಕ ಸಂಕಥನಗಳಲ್ಲಿ ಒತ್ತಾಯವು ಯಾವ ರೀತಿ ಇರುತ್ತದೆಂದರೆ ಈಕೆ ಕೂಡ ಯಾವ ರೀತಿಯ ಪದವನ್ನು ಹೇಗೆ ಬಳಸಬೇಕೆಂಬ ಬಗೆಗೆ ನಿಯಮಗಳು ಇರುತ್ತವೆ. ಸಮಾಜದಲ್ಲಿ ಇರುವಂತಹ ಈ ಬಗೆಯ ಪರಿಸ್ಥಿತಿಗಳನ್ನು ನಿಭಾಯಿಸಿ ತನ್ನ ಅಭಿವ್ಯಕ್ತಿಯನ್ನು ಮಾಡಲಾಗಿದೆ. ಅವಳು ಮೌನವಾಗಿ ಉಳಿಯುತ್ತಾಳೆ. ಗಂಡಸರು ನಿರ್ಮಿಸಿದ ಭಾಷೆಯನ್ನು ಬಳಸಲಾಗದೇ ಅವರು ಮೂಕತ ಭಾವವನ್ನು ತೋರುತ್ತಾರೆ. ಇದನ್ನು ಸಮಾಜವೇ ಸೃಷ್ಟಿಸಿದೆ.

ಹೀಗೆ ಹಲವು ವಿಚಾರಗಳನ್ನು ಕುರಿತಂತೆ ಇವರುಗಳು ಮಂಡಿಸುತ್ತ ಹೋಗುತ್ತಾರೆ. ಕನ್ನಡ ಸಂದರ್ಭಗಳನ್ನು ಇಟ್ಟುಕೊಂಡು ಭಾಷಾ ಚಿಂತನೆಗಳನ್ನು ಮಾಡಿರುವವರು ಡಾ. ಕೆ.ವಿ. ನಾರಾಯಣ ಅವರು ಪ್ರಮುಖರಾಗುತ್ತಾರೆ. ಮುಂದುವರೆದು ಈ ಕೃತಿಯಲ್ಲಿ ಇನ್ನೂ ಹಲವರು ಹೆಣ್ಣು ಮತ್ತು ಭಾಷೆಯನ್ನು ಕುರಿತಂತೆ ಚಿಂತಿಸಿದ್ದಾರೆ. ಅವರಲ್ಲಿ ಮತ್ತೊಬ್ಬ ಪ್ರಮುಖರು ಎಂದರೆ ಡಾ. ಎಚ್.ಎಸ್.

ರಾಘವೇಂದ್ರರಾವ್ ಇವರು "ಕಲಾತ್ಮಕ ಅಭಿವ್ಯಕ್ತಿಗಳಲ್ಲಿ ಹೆಣ್ಣಿನ ಭಾಷೆಗಿರುವ ಸವಾಲು" ಎಂಬ ವಿಷಯದ ಅಡಿಯಲ್ಲಿ ಹಲವಾರು ವಿಚಾರಗಳನ್ನು ನಮ್ಮ ಮುಂದಿಟ್ಟಿದ್ದಾರೆ.

"ಹೆಣ್ಣು ಮತ್ತು ಭಾಷೆ : ಅಭಿವ್ಯಕ್ತಿ" ಮನುಷ್ಯರನ್ನು 'ಪುರುಷೀಕರಣಗೊಳಿಸುವ' ಪ್ರಕ್ರಿಯೆಯಲ್ಲಿಯೇ, ಹುಟ್ಟಿಕೊಳ್ಳುವ ನಿರೀಕ್ಷೆಗಳು ಮತ್ತು ಆ ನಿರೀಕ್ಷೆಗಳನ್ನು ನಿಜ ಮಾಡಬೇಕು ಅನ್ನುವ ಪ್ರಯತ್ನಗಳು, ಹೆಣ್ಣನ್ನು ಮತ್ತು ಅವಳ ಭಾಷೆಯನ್ನು, ತನಗೆ ನೈಜವಾದ ಅಭಿವ್ಯಕ್ತಿಯ ಕಡೆಯಿಂದ ದೂರ ಕರೆದುಕೊಂಡು ಹೋಗುತ್ತವೆಂದು ಕಾಣುತ್ತದೆ. ಇಲ್ಲಿ ಮುಖ್ಯವಾಗಿ ಅಭಿವ್ಯಕ್ತಿ ಎಂದರೆ ಸೃಜನಾತ್ಮಕ ಬರವಣಿಗೆ ಕುರಿತಂತೆ ಮಾತನಾಡುತ್ತಿದ್ದಾರೆ.

ಮಧ್ಯಮವರ್ಗದ ಗೃಹಿಣಿಯರಿಗಿಂತ, ಮದುವೆಯಾದ ಹೆಣ್ಣು ಮಕ್ಕಳಿಗಿಂತ ಹೆಚ್ಚು ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಅಲೆಮಾರಿ ಮಹಿಳೆ ಹೆಚ್ಚು ಪಡೆದಿರುತ್ತಾಳೆ(ಆಕೆ ಕೊರವಂಜಿ ಇರಬಹುದು. ಬುಡಬುಡಕೆಯವಳಿರಬಹುದು, ದೇವದಾಸಿಯೋ, ಮತ್ಯಾರೋ ಇರಬಹುದು.). ಅವರು ಜೋಗತಿಯರಾಗಿರುವುದಿಂದಲೇ, ಕೆಲವು ನಿರ್ದಿಷ್ಟವಾದ ಬಗೆಗಳಲ್ಲಿ ಮಾತನಾಡುವ, ಗಂಡಸರನ್ನು ಚೇಡಿಸುವ ಅವಕಾಶ ಸಿಕ್ಕಿರುತ್ತದೆ. ಅದನ್ನು ಅಂಥ ರಚನೆಗಳು ಬಳಸಿಕೊಂಡಿರುತ್ತವೆ. ಈ ರಚನೆಗಳನ್ನು ಅಭಿವ್ಯಕ್ತಿಯ ಇನ್ನೊಂದು ಸಾಧ್ಯತೆಯೆಂದು ತೋರುತ್ತದೆ ಎಂಬ ಅಭಿಪ್ರಾಯವನ್ನು ಪಡುತ್ತಾರೆ. ಮುಂದುವರೆದು ಲೇಖನದಲ್ಲಿ ಅಭಿವ್ಯಕ್ತಿ ಸ್ವಾತಂತ್ರ್ಯದ ಮತ್ತೊಂದು ಆಯಾಮವನ್ನು ಕುರಿತಂತೆ ಚರ್ಚಿಸುತ್ತಾರೆ. ಅಂದರೆ ಇಂದಿನ ಸನ್ನಿವೇಶದಲ್ಲಿ ಆರ್ಥಿಕ ಸ್ವಾವಲಂಬನೆಯು ಈ ರೀತಿಯ ಮುಕ್ತ ಸಂವಹನಕ್ಕೆ ಎಡೆಮಾಡಿಕೊಡಬಹುದು. ಗೀತಾ ನಾಗಭೂಷಣ ಅವರು ಸೃಷ್ಟಿಸಿರುವ ಹತ್ತಾರು ಪಾತ್ರಗಳಲ್ಲಿ ಕಾಣಬಹುದು ಎಂದು ತೋರಿಸಿಕೊಡುತ್ತಾರೆ.

ಲೇಖನದಲ್ಲಿ ಸ್ತ್ರೀವಾದಿ ಚಿಂತಕಿಯರ ಪ್ರಕಾರ ಮಹಿಳೆಯರ ಅಭಿವ್ಯಕ್ತಿ, ಲಕ್ಷಣಗಳನ್ನು ಕೆಲವನ್ನು ಗುರುತಿಸಿದ್ದಾರೆ. "ಅಹಂ ಜನ್ಯವಾದ ಅಸ್ಮಿತೆಯ ಅಭಾವ ಎಂದರೆ ಇದನ್ನು ನಾನು ಹೇಳ್ತಾ ಇದ್ದೀನಿ. ಇದು ನನ್ನದು, ಇದು ಒರಿಜಿನಲ್ ಆದುದು ಎನ್ನುವ ತಿಳುವಳಿಕೆಯೆ ಒಂದು ಅಹಂಕಾರ. ಈ ಅಹಂಕಾರವನ್ನು ಬಿಟ್ಟು, ನಾನು ಹೇಳ್ತಾ ಇರುವುದು. ನನ್ನದು ಮಾತ್ರವಲ್ಲ. ಎಲ್ಲವನ್ನು ಒಳಗೊಳ್ಳುವ ಹಂಬಲ ನನಗಿದೆ. ಆದ್ದರಿಂದ ನಾನು ನನ್ನನ್ನು ಬದಿಗಿಟ್ಟು ಮಾತನಾಡಲು ಬಯಸುತ್ತೇನೆ. ಆಗ ನಾನು ಎಲ್ಲರ ಪರವಾಗಿಯೂ ಮಾತನಾಡುತ್ತೇನೆ. ಆಗ ನನ್ನ ಸಮಸ್ತ ಸಮುದಾಯದ ಮಾತಾಗುತ್ತೆ. ಕೇವಲ ಒಬ್ಬ ಲೇಖಕಿಯ ಮಾತು ಆಗುವುದಿಲ್ಲ. ಇದು ಅಸ್ಮಿತೆಯ ಅಭಾವ. ಇದು ಗುಣವೇ ಹೊರತು ದೋಷವಲ್ಲ. ಇನ್ನೊಂದು ಸಂಗತಿಯೆಂದರೆ ಪುರುಷ ತರ್ಕವು ಭಾಷೆಗೆ ಇರಬಹುದಾದ ದ್ರವಗುಣವನ್ನು (Fluidity) ಒಪ್ಪುವುದಿಲ್ಲ. ಎಂದರೆ, ಅದರ ಪ್ರಕಾರ ಮಾತಿಗೆ ಖಚಿತವಾದ ಅರ್ಥ ಇರಬೇಕು. ಈ ಮಾತಿಗೇ ಇಂಥಹದ್ದೇ ಅರ್ಥವಿದೆ. ಇಷ್ಟೇ

ಅರ್ಥವಿದೆ, ಇದಕ್ಕಿಂತ ಭಿನ್ನವಾದ ಅರ್ಥವಿಲ್ಲ ಎಂಬ ಹಟಮಾರಿತನದಿಂದ ಹುಟ್ಟುತ್ತದೆ. ಭಾಷೆಯ ದ್ರವಗುಣವಾದರೋ ಇದನ್ನು ನಿರಾಕರಿಸಿ, ಹೊಸ ಅರ್ಥಗಳ ಸಾಧ್ಯತೆಯನ್ನು ಹುಟ್ಟುತ್ತದೆ. ಭಾಷೆಯ ದ್ರವಗುಣವಾದರೋ ಇದನ್ನು ನಿರಾಕರಿಸಿ, ಹೊಸ ಅರ್ಥಗಳ ಸಾಧ್ಯತೆಯನ್ನು, ಹುಟ್ಟನ್ನು ಒಪ್ಪಿಕೊಳ್ಳುತ್ತದೆ. ಇದು ಹೆಣ್ಣಿನ ಅಭಿವ್ಯಕ್ತಿಯ ಲಕ್ಷಣವೂ ಹೌದು ಎಂದು ವಿವರಿಸಿದ್ದಾರೆ.

ಮಹಿಳೆಯರ ಸಾಹಿತ್ಯದಲ್ಲಿ ಕಾಣಿಸಿಕೊಳ್ಳಬಹುದಾದ ಮತ್ತೊಂದು ಲಕ್ಷಣವನ್ನು "ಪ್ರಕಾರಗಳ ಸಂಕರವೆಂದು" ಕರೆಯುತ್ತಾರೆ. ಅಲ್ಲಿರುವುದು ಕಥೆಯೋ; ಪದ್ಯವೋ, ಪ್ರಬಂಧವೋ ಅಥವಾ ನಾಟಕವೋ ಹೇಳುವುದಕ್ಕೆ ಆಗುವುದಿಲ್ಲ ಎನ್ನುವಂತಹ ಬರವಣಿಗೆ. ಮಹಿಳೆಯರಲ್ಲಿ ಈ ಪ್ರಕಾರ ಸಂಕರವು ಬುದ್ಧಿಪೂರ್ವಕವಾಗಿಯೇ ನಡೆಯುತ್ತದೆ. ಈ ಸಾಹಿತ್ಯ ಪ್ರಕಾರಗಳನ್ನು ಗಂಡಸರು ಮಾಡಿಕೊಂಡಿದ್ದಾರೆ. ಇದನ್ನು ಹಾಗೆಯೇ ಇರಬೇಕು ಎಂಬ ನಿಯಮ ಮಾಡಿಕೊಂಡಿದ್ದೀರಿ. ನಿಮ್ಮ ನಿಯಮದೊಳಗೆ ಇಲ್ಲದಿರುವುದೆಲ್ಲ ಅಲ್ಲ ಎಂಬ ತೀರ್ಮಾನ ನಿಮ್ಮದು. ಹೀಗಾಗಿ ಮಹಿಳೆಯರು ತಮ್ಮದೇ ರೀತಿಯಲ್ಲಿ ರಚಿಸುವ ರಚನೆಗಳು ಸರಿ ಇಲ್ಲದಂತೆ ಕಾಣುತ್ತವೆ ಎಂಬ ಅಭಿಪ್ರಾಯವನ್ನು ಲೇಖನದಲ್ಲಿ ಮಂಡಿಸಿದ್ದಾರೆ.

ಲೈಂಗಿಕತಾವಾದಿ ಭಾಷೆ ಮತ್ತು ಸಂಕಥನ ಪ್ರವೇಶ ಮತ್ತು ಭಾಷಿಕ ವಾಸ್ತವಗಳು ಈ ಲೇಖನದಲ್ಲಿ ಮುಖ್ಯವಾಗಿ ಭಾಷಿಕ ನಿರ್ವಚನಗಳು, ಸಂಕಥನಗಳನ್ನು ಇಟ್ಟುಕೊಂಡು ಈ ವಿಷಯವನ್ನು ಚರ್ಚಿಸಿದ್ದಾರೆ. ಭಾಷೆಯಲ್ಲಿ ಲೈಂಗಿಕ ತಾರತಮ್ಯ ಕಂಡುಬರುವ ಸಂಗತಿಗಳನ್ನು ಬದಲಾವಣೆ ಮಾಡಬೇಕು. ಪುರುಷಪ್ರಧಾನ ಸಮಾಜದ ಸಾಮಾಜಿಕ ವಾಸ್ತವಗಳು ಕಲೆಯ ಜಗತ್ತಿನಲ್ಲಿ ಪ್ರತಿಫಲಿತವಾಗುತ್ತವೆ. ಹೆಣ್ಣು ಸೃಜನಾತ್ಮಕವಾಗಿ ಭಾಷೆಯನ್ನು ಬಳಸತೊಡಗಿದ ಕೂಡಲೇ ಸಾಮಾನ್ಯವಾಗಿ ಅದರ ಬಗ್ಗೆ ಕೆಲವು ಆಕ್ಷೇಪಣೆಗಳನ್ನು ಮಾಡಲಾಗಿದೆ. ಹೆಂಗಸರ ಕಾದಂಬರಿ ಬಗ್ಗೆ ಬರೆಯುತ್ತಾ 'ಅಡಿಗೆ ಮನೆ ಕಾದಂಬರಿ', 'ಅಡಿಗೆ ಮನೆ ಭಾಷೆ' ಎಂಬ ಟೀಕೆ ಗಂಡಸರ ಭಾಷೆ ಬಹಳ ಚೆನ್ನಾಗಿದೆ ಎಂದು ಹೊಗಳುವಾಗ, ಒಂದು ಕಾಲದಲ್ಲಿ ವೀರ್ಯವತ್ತಾದ ಭಾಷೆ/ಶೈಲಿ ಎನ್ನುತ್ತಿದ್ದರು. ಇಂಗ್ಲಿಶ್‌ನಲ್ಲಿ Virile Language ಎನ್ನುತ್ತಾರೆ. ವೀರ್ಯವತ್ತಾದ ಶೈಲಿ ಎನ್ನುವುದು ಯಾವುದರ ಬಗ್ಗೆ ಹೇಳುತ್ತೆ? ವೀರ್ಯರಹಿತವಾದ ಭಾಷೆ ಯಾವುದು ಹಾಗಾದರೆ? ಈ ಪ್ರಶ್ನೆಯನ್ನು ಕೇಳಿಕೊಂಡಾಗ ಬೆರಗಾಗುತ್ತದೆ. ಅಂತರಂಗದ ಅರ್ಥದ ನೆಲೆಯಲ್ಲಿ ಬಹಿರಂಗದ ವ್ಯಾಕರಣದ ನೆಲೆಯಲ್ಲಿ, ಈ ಲಿಂಗತಾರತಮ್ಯದ ಮತ್ತು ಪುರುಷಪಾರಮ್ಯಗಳು ಹಾಸುಹೊಕ್ಕಾಗಿವೆ ಎಂಬ ಹಲವಾರು ತಾರತಮ್ಯದ ಭಾಷಿಕ ವಿಚಾರಗಳನ್ನು ಲೇಖನದಲ್ಲಿ ಮಂಡಿಸಿದ್ದಾರೆ.

"ಸ್ತ್ರೀವಾದಿ ಚಿಂತನೆಯ ಕೆಲವು ನೆಲೆಗಳು ಮತ್ತು ಕಲಾತ್ಮಕ". "ಭಾಷಿಕ ಅಭಿವ್ಯಕ್ತಿ: ಒಂದು ಅಪೂರ್ಣ ಉಪನ್ಯಾಸ" ಈ ಲೇಖನದಲ್ಲಿ ಸೃಜನಾತ್ಮಕ ಬರವಣಿಗೆಗಳು ಮತ್ತು ಮಹಿಳಾ ಚಿಂತಕಿಯರ

ಅಭಿಪ್ರಾಯಗಳನ್ನು ಮುಖಾಮುಖಿ ಮಾಡಿದ್ದಾರೆ. ಅಂದರೆ ಸ್ತ್ರೀವಾದಿ ಚಿಂತಕಿಯರ ಪ್ರಕಾರ, ಸಾಹಿತ್ಯವು ಗಂಡಸರಿಂದ ಸೃಷ್ಟಿಯಾದ, ನಿರ್ದೇಶಿತವಾದ ಸಂಸ್ಥೆಯಾಗಿದೆ. ಆದ್ದರಿಂದ ತಮ್ಮ ತಾತ್ವಿಕತೆಗೆ ವಿರುದ್ಧವಾದ ಸೃಷ್ಟಿಯನ್ನು ಪುರುಷರು ನಿರಾಕರಿಸಿದರು. ಅದರ ಅನುಭವಲೋಕದ ಸೀಮಿತತೆಯನ್ನು ಹಂಗಿಸುತ್ತಾ ಸ್ತ್ರೀಯರು ಬರೆಯುವ ಸಾಹಿತ್ಯವು 'ಅಡುಗೆ ಮನೆಯ ಸಾಹಿತ್ಯ' ಹೇಗೆ ಕತ್ತರಿಸಿದರೂ ಸೌತೇಕಾಯಿ ಸೌತೇಕಾಯಿಯೇ ಎಂದು ಹೇಳಿದರು.

ಲಿಂಗದೇವರು ಹಳೆಮನೆ ಇವರು ಈ ಕೃತಿಯಲ್ಲಿ "ಕಲಿಕೆ ಬಳಕೆ ಮತ್ತು ಭಾಷೆ" ಎಂಬ ವಿಷಯದ ಮೇಲೆ ತಮ್ಮ ವಿಚಾರಗಳನ್ನು ಮಂಡಿಸಿದ್ದಾರೆ. ಬಹಳ ಹಿಂದಿನಿಂದಲೂ ನಾವು ಮಾಡುತ್ತಾ ಬಂದಿರುವಂತಹ ಒಂದು ರೀತಿಯ ಹೆಣ್ಣು ಮತ್ತು ಗಂಡು - ಎನ್ನುವ ಭೇದದ ಅಂಶಗಳು ಭಾಷೆಯ ಒಳಗೆ ಹೇಗೆ ಪ್ರಕಟವಾಗುತ್ತದೆ ಎನ್ನುವುದನ್ನು ಅದರ ಸಾಂಸ್ಕೃತಿಕವಾದ ಸಾಮಾಜಿಕವಾದ ಹಾಗೂ ರಾಜಕೀಯವಾದ ಹಿನ್ನೆಲೆಗಳಲ್ಲಿ ಆಳವಾಗಿ ಅಧ್ಯಯನ ಮಾಡಬೇಕಾದಂತಹ ಅಂಶ ಇದೆ ಎಂದು ನಾನು ತಿಳಿದಿದ್ದೇನೆ ಎನ್ನುತ್ತಾರೆ ಲೇಖಕರು. ಹೆಣ್ಣಿನ ಪ್ರತಿನಿಧೀಕರಣ ಎನ್ನುವುದು ಇಡೀ ಸಮಾಜದ ಒಳಗಡೆ ಎಲ್ಲಾ ಕಡೆ ಹಾಸುಹೊಕ್ಕಿದೆ. ಹೆಣ್ಣನ್ನು ನಿಯಂತ್ರಿಸುವವರಂತೂ ನಿಧಾನವಾಗಿ ಹೆಣ್ಣನ್ನು ಮೌನದ ಕಡೆಗೆ ತೆಗೆದುಕೊಂಡು ಹೋಗುವಂತ ಕೆಲಸ ಮಾಡುತ್ತಿರುತ್ತಾರೆ. ಇದು ಭಾಷೆಯ ಕಲಿಕೆ, ಬಳಕೆ ಎಂಬ ನೆಲೆಗಳಲ್ಲಿ ನಡೆಯುತ್ತಿರುತ್ತದೆ.

"ಸಮಕಾಲೀನ ಮಹಿಳಾ ಕಾವ್ಯ ಮತ್ತು ಭಾಷೆ" ಎಂಬ ಲೇಖನವನ್ನು ಮಮತಾ ಜಿ. ಸಾಗರ ಅವರು ಬರೆದಿದ್ದಾರೆ. ಲೇಖಕರು ಹೇಳುವಂತೆ ಈ ಲೇಖನವನ್ನು ಎಂಬತ್ತರ ನಂತರದ ಎರಡು ದಶಕಗಳಲ್ಲಿ ಪ್ರಕಟವಾದ ಮಹಿಳಾ ಕಾವ್ಯದ ಕೆಲವು ಸಂಕಲನಗಳನ್ನು ಆಧಾರವಾಗಿಟ್ಟುಕೊಂಡು ಈ ಚರ್ಚೆಯನ್ನು ಮಾಡಿದ್ದಾರೆ.

ಕೃತಿಯಲ್ಲಿ ಡಾ. ಶಿವಾನಂದ ಎಸ್. ವಿರಕ್ತಮಠ ಇವರು "ಭಾಷೆಯಲ್ಲಿ ಹೆಣ್ಣಿನ ಪ್ರತಿನಿಧೀಕರಣ' ಎಂಬ ವಿಷಯವಾಗಿ ಹಲವು ಆಯಾಮಗಳಲ್ಲಿ ಚರ್ಚೆ ಮಾಡಿದ್ದಾರೆ. ಇದರಲ್ಲಿ ವಿರು ಬೈಗುಳಗಳು ಭಾಷೆಯಲ್ಲಿ ಮಹಿಳೆಯ ಬಾಯಿ ಮುಚ್ಚಿಸುವಂತಹ ಸಹಜ ಮಾತುಕತೆಗಳ ಅಥವಾ ಸ್ವಂತ ವಿಚಾರಗಳು, ಗಾದೆಗಳಲ್ಲಿ ಮಹಿಳೆಯರನ್ನು ವ್ಯಕ್ತಪಡಿಸುವಂತಹ ರೀತಿ ಗಂಡಿನ ಒಡಪುಗಳು, ಹೆಣ್ಣಿನ ಒಡಪುಗಳು, ಹೆಂಗಸರಿಗೆ ಬೈಯ್ಯುವ ಬೈಗುಳಗಳು, ಗಂಡಸರಿಗೆ ಬಳಸುವ ಬೈಗುಳಗಳು ಇತ್ಯಾದಿ ವಿಚಾರಗಳನ್ನು ಕುರಿತಂತೆ ಅಧ್ಯಯನ ಮಾಡಿ ಭಾಷೆಯಲ್ಲಿನ ಹೆಣ್ಣಿನ ಪ್ರತಿನಿಧೀಕರಣವನ್ನು ಗುರುತಿಸುತ್ತಾರೆ.

"ಸಾಮಾಜಿಕ ಸಂವಹನ - ಲಿಂಗತಾರತಮ್ಯ, ಭಿನ್ನತೆ" ಈ ವಿಷಯವನ್ನು ಕುರಿತಂತೆ ಡಾ. ಡಿ. ಪಾಂಡುರಂಗ ಬಾಬು ಅವರು ಅಧ್ಯಯನ ಮಾಡಿ ಮಹತ್ವದ ವಿಚಾರಗಳನ್ನು ಚರ್ಚಿಸಿದ್ದಾರೆ.

ಇಲ್ಲಿ ಮುಖ್ಯವಾಗಿ ಭಾಷಿಕ ಆಕರದಿಂದ ಸಾಮಾಜಿಕ ಸಂವಹನ, ವ್ಯಕ್ತಿನಾಮಗಳು, ಅದರಲ್ಲಿ ಗಂಡು ಮಕ್ಕಳ ಹೆಸರುಗಳು, ಹೆಣ್ಣು ಮಕ್ಕಳ ಹೆಸರುಗಳು, ವೃತ್ತಿ ವಾಚಕಗಳು, ಮಹಿಳೆಯರನ್ನು ಸಂಬೋಧಿಸುವ ವಿಧಾನ, ಪುರುಷರನ್ನು ಸಂಬೋಧಿಸುವ ಕ್ರಮ, ಗಂಡನನ್ನು ಉದ್ದೇಶಿಸಿ ಮಾತಾಡುವಾಗ ಸ್ತ್ರೀಯರು ಬಳಸುವಂತ ಉಲ್ಲೇಖಗಳು, ಪುರುಷ ಮಹಿಳೆಯನ್ನು ಕುರಿತು ಬಳಸುವ ಉಲ್ಲೇಖಗಳು ಆರ್ಥಿಕವಾಗಿ ಇರುವಂತಹ ವರ್ಗ ಆಧಾರಿತವಾದ ಸಂಬೋಧನ ವಿಧಾನ ಅದರಲ್ಲೂ ಮಹಿಳೆ ಮತ್ತು ಪುರುಷರನ್ನು ಉದ್ದೇಶಿತ ಉಲ್ಲೇಖಗಳನ್ನು ಕುರಿತು ಚರ್ಚಿಸಿದ್ದಾರೆ. ಜೊತೆಗೆ ಸಂಬೋಧನೆಗೆ ಬಳಕೆಯಾಗುವ ಸಂಬಂಧವಾಚಕಗಳು ಇದಕ್ಕೆ ಪರ್ಯಾಯವಾಗಿ ಮಹಿಳೆಯರಿಗೆ ಯಾವುದೇ ವಿಧದ ಸಂಬೋಧನೆ ಇಲ್ಲದಿರುವಂತಹ ರೂಪಗಳನ್ನು ಗುರುತಿಸಿದ್ದಾರೆ. ಪುರುಷ ಬೈಗಳು, ಸ್ತ್ರೀಯರ ಬೈಗಳು ಜೊತೆಗೆ ಮಹಿಳೆಯನ್ನು ಉದ್ದೇಶಿಸಿ ಇರುವಂತಹ ಭಾಷಿಕ ನಿಷೇಧಗಳು ನಿರ್ಬಂಧಗಳು ಇತ್ಯಾದಿ ವಿಚಾರಗಳಿಗೆ ಸಂಬಂಧಿಸಿದಂತೆ ಅಧ್ಯಯನಕ್ಕೆ ಒಳಪಡಿಸಿ ಮಂಡಿಸಿದ್ದಾರೆ.

"ಭಾಷಾ ಬಳಕೆಯಲ್ಲಿ ವ್ಯತ್ಯಾಸ" ಎಂಬ ವಿಷಯವಾಗಿ ಡಾ. ಪಿ. ಮಹಾದೇವಯ್ಯ ಅವರು ಚರ್ಚಿಸಿದ್ದಾರೆ. ಇವರು ಇಲ್ಲಿ ಮುಖ್ಯವಾಗಿ ಭಾಷಾ ಬಳಕೆಯ ವ್ಯತ್ಯಾಸವನ್ನು ಎರಡು ನೆಲೆಗಳಲ್ಲಿ ಗುರುತಿಸಿ ಚರ್ಚಿಸುತ್ತಾರೆ. ಅವುಗಳೆಂದರೆ, ೧. ಹೆಣ್ಣೇ ಭಾಷೆಯನ್ನು ಬಳಕೆ ಮಾಡುವಾಗ ಕಾಣಿಸಿಕೊಳ್ಳುತ್ತಿರುವ ಭಾಷಿಕ ವ್ಯತ್ಯಾಸ. ೨. ಹೆಣ್ಣನ್ನು ಕುರಿತು ಭಾಷಾ ಬಳಕೆಯಲ್ಲಿನ ಲಿಂಗತಾರತಮ್ಯ ಈ ಎರಡು ನೆಲೆಗಳನ್ನು ಇಟ್ಟುಕೊಂಡು ಹಲವು ವಿಚಾರಗಳನ್ನು ಅಧ್ಯಯನ ಮಾಡಿದ್ದಾರೆ. ಅದರಲ್ಲಿ ಲಿಂಗಸೂಚಕ ಭಾಷೆ. ವಚನ ಸೂಚಕ ಭಾಷೆ, ಗುಣ ಪದ ಬಳಕೆಯಲ್ಲಿ ಲಿಂಗತಾರತಮ್ಯ, ವಾಕ್ಯ ಪ್ರಯೋಗದಲ್ಲಿ ಮಹಿಳೆಯ ಪ್ರತಿನಿಧೀಕರಣ ಲೋಪ, ಸಾಂಸ್ಕೃತಿಕ ಪದಕೋಶ ಬಳಕೆಯಲ್ಲಿ ಲಿಂಗತಾರತಮ್ಯ, ಹೆಣ್ಣನ್ನು ಕುರಿತ ಭಾಷಾ ಬಳಕೆಯ ಶೈಲಿ, ನಗೆಹನಿಗಳಲ್ಲಿ ಹೆಣ್ಣಿನ ಪ್ರತಿನಿಧೀಕರಣ, ಲೈಂಗಿಕ ಸೂಚಕ ನಗೆಹನಿಗಳು, ಮಹಿಳೆ ಸೂಚಕ ಗಾದೆಗಳು, ಹೆಣ್ಣಿನ ಸಂಭಾಷಣೆ ಮತ್ತು ಮಾತುಕತೆಗಳಲ್ಲಿ ಭಾಷಾ ಬಳಕೆ, ಹೆಣ್ಣಿನ ಮಾತಿನ ಲಕ್ಷಣವಾಗಿ ಮೌನ, ಹೆಣ್ಣಿನ ಸಹಜ ಮಾತುಗಾರಿಕೆಯಾಗಿ ಹರಟೆ, ಬದಲಾವಣೆಯ ಹಾದಿಯಲ್ಲಿ ಮಹಿಳಾ ಸೂಚಕ ಭಾಷೆ ಎಂಬ ಹಲವು ವಿಚಾರಗಳನ್ನು ಕುರಿತು ಚರ್ಚಿಸಿ ಮಹಿಳೆಯರ ಭಾಷೆಯನ್ನು ವಿವರಿಸಿದ್ದಾರೆ.

ಅಶೋಕ ಕುಮಾರರಂಜೇರೆ ಅವರು "ಸ್ತ್ರೀವಾದಿ ಭಾಷಾ ಯೋಜನೆ : ಒಂದು ಟಿಪ್ಪಣಿ" ಎಂಬ ವಿಚಾರವಾಗಿ ಚರ್ಚಿಸಿ ಲೇಖನವನ್ನು ಮಂಡಿಸಿದ್ದಾರೆ. ಇದರಲ್ಲಿ ಭಾಷೆ ಬಳಕೆ ಕ್ರಮ ಮತ್ತು ಭಾಷಾ ಯೋಜನೆಗಳನ್ನು ಮುಖಾಮುಖಿ ಮಾಡಿದ್ದಾರೆ. ಇಲ್ಲಿ ಇವರು ಮುಖ್ಯವಾಗಿ ೩ ವಿಭಾಗ ಕ್ರಮದಲ್ಲಿ ಚರ್ಚೆಯನ್ನು ಆರಂಭಿಸುತ್ತಾರೆ. ೧. ಆಡಳಿತದಲ್ಲಿ ಸ್ತ್ರೀವಾದಿ ಭಾಷಾ ಯೋಜನೆ ಎಂಬ ವಿಷಯಗಳನ್ನು ಮುಂದಿಟ್ಟುಕೊಂಡು ಅಧ್ಯಯನ ಮಾಡಿದ್ದಾರೆ. ಮುಖ್ಯವಾಗಿ ಆಡಳಿತ ಶಿಕ್ಷಣ

ಸೃಜನಶೀಲ ಬರವಣಿಗೆಗೆ ಈ ವಲಯಗಳಲ್ಲಿ ಇರುವ ಭಾಷೆ ಜೊತೆಗೆ ಬದಲಾಗಬೇಕಾದ ಮಾದರಿಯನ್ನು ಕುರಿತಂತೆ ಅಧ್ಯಯನ ಮಾಡುತ್ತಾರೆ.

"ಹೆಣ್ಣಿನ ಭಾಷಾ ಕಲಿಕೆ, ಬಳಕೆ, ಅಭಿವ್ಯಕ್ತಿ : ಕೌಟುಂಬಿಕ ವಲಯದಲ್ಲಿ" ಎಂಬ ವಿಷಯವಾಗಿ ಡಾ. ಸಾಂಬಮೂರ್ತಿ ಅವರು ಚರ್ಚಿಸಿದ್ದಾರೆ. ಮಹಿಳೆಯರಲ್ಲಿ ಭಾಷಾ ಬಳಕೆಯಲ್ಲಿ ಇರುವಂತಹ ಹಿಂಜರಿಕೆಗೆ ಮತ್ತು ಮಹಿಳೆಯ ಭಾಷಾ ವಲಯಗಳನ್ನು ಕೌಟುಂಬಿಕ ನೆಲೆಯಲ್ಲಿ ಗುರುತಿಸಿದ್ದಾರೆ. ಮಹಿಳೆಯರ ಭಾಷೆಯ ಲಕ್ಷಣಗಳನ್ನು ಅವರು ಚರ್ಚಿಸಿದ್ದಾರೆ.

"ಭಾಷೆ ಮತ್ತು ಸಂಸ್ಕೃತಿಯ ಅಂತಃಸಂಬಂಧಗಳು(ಕೋಲಾ ಉಪಭಾಷೆಯನ್ನು ಅನುಲಕ್ಷಿಸಿ) ಇದೊಂದು ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧವಾಗಿದ್ದು, ಈ ಸಂಶೋಧನೆಯನ್ನು ಡಾ.ಸುಬ್ಬಣ್ಣ ರೈ ಅವರ ಮಾರ್ಗದರ್ಶನದಲ್ಲಿ ಭಾರತೀದೇವಿ ಪಿ. ಅವರು ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗದಲ್ಲಿ ಅಧ್ಯಯನ ಮಾಡಿದ್ದಾರೆ. ಈ ಮಹಾಪ್ರಬಂಧವು ಒಟ್ಟು ಎಂಟು ಅಧ್ಯಾಯಗಳನ್ನು ಒಳಗೊಂಡಿದೆ. ಕೋಟ ಭಾಷಿಕ ಪರಿಸರದ ವಿನ್ಯಾಸ ಅದರಲ್ಲಿ ಭೌಗೋಳಿಕ, ಇತಿಹಾಸ, ಜನಜೀವನ ಮತ್ತು ಆರ್ಥಿಕತೆಗಳನ್ನು ಕುರಿತಂತೆ ಸ್ಥೂಲವಾಗಿ ಅಧ್ಯಯನ ಮಾಡಿದ್ದಾರೆ. ಸಂಸ್ಕೃತಿ ಕುರಿತು ವಿವಿಧ ನೆಲೆಯ ನಿರ್ವಚನಗಳನ್ನು ಕುರಿತು ಚರ್ಚಿಸಿದ್ದಾರೆ. ಈ ಭಾಗದಲ್ಲಿ ಶ್ರೇಣೀಕೃತ ನೆಲೆಯ ಗ್ರಹಿಕೆ, ಅನನ್ಯ ನೆಲೆಯ ಗ್ರಹಿಕೆ, ಸಾರ್ವತ್ರಿಕ ನೆಲೆಯ ಗ್ರಹಿಕೆ ಕುರಿತಂತೆ ಸೂಕ್ಷ್ಮವಾಗಿ ವಿವರಿಸಿದ್ದಾರೆ. ಇದೇ ಭಾಗದಲ್ಲಿ ಇವರು ತಾತ್ವಿಕ ಚರ್ಚೆಯನ್ನು ಮಾಡಿದ್ದಾರೆ. ಇದುವರೆಗೆ ನಡೆದ ಅಧ್ಯಯನಗಳಲ್ಲಿ ಭಾಷೆ ಮತ್ತು ಸಂಸ್ಕೃತಿಯ ಸಂಬಂಧವನ್ನು ಕಂಡರಿಸಿದ ಬಗೆ, ಜನಾಂಗ, ಜಾತಿ, ವರ್ಗ ಮತ್ತು ಸಮುದಾಯಗಳ ಪರಿಕಲ್ಪನೆ, ಪ್ರಸ್ತುತ ಅಧ್ಯಯನದ ತಾತ್ವಿಕ ನೆಲೆಗಟ್ಟು ಈ ವಿಚಾರಗಳ ಕುರಿತಂತೆ ತಾತ್ವಿಕ ಚರ್ಚೆ ಮಾಡಲಾಗಿದೆ. ಅಧ್ಯಾಯ ಮೂರರಲ್ಲಿ ಭೌತಿಕ ಸಂಸ್ಕೃತಿ ಮತ್ತು ಭಾಷೆ ಕುರಿತಂತೆ ಹಲವಾರೂ ಆಯಾಮಗಳಲ್ಲಿ ಅಧ್ಯಯನ ನಡೆಸಿದ್ದಾರೆ. ಅದರಲ್ಲಿ ಮುಖ್ಯವಾಗಿ ಸಂಸ್ಕೃತಿ ಅಧ್ಯಯನದಲ್ಲಿ ಭೌತಿಕ ಸಂಸ್ಕೃತಿಯ ಪಾತ್ರ ಭೌತಿಕ ಸಂಸ್ಕೃತಿ ಮತ್ತು ಭಾಷೆ, ಕೋಟ ಭಾಷಿಕ ಪರಿಸರದ ಭೌತಿಕ ಸಂಸ್ಕೃತಿ ಮತ್ತು ಭಾಷೆ ಅವರ ಉಡುಗೆ-ತೊಡುಗೆ ಗೃಹೋಪಯೋಗಿ ಪರಿಕರಗಳು ಮತ್ತು ಸಲಕರಣೆಗಳು, ಅಳೆಯುವ ಸಾಧನಗಳು, ಮನೆ ಮತ್ತು ಕಟ್ಟಡಕ್ಕೆ ಸಂಬಂಧಿಸಿದ ವಸ್ತುಗಳು, ವೃತ್ತಿ ಸಂಬಂಧಿ ಸಲಕರಣೆಗಳು ಅವರ ಕೃಷಿ ಚಟುವಟಿಕೆ, ಮೀನುಗಾರಿಕೆ ಇತ್ಯಾದಿ ಅಂಶಗಳನ್ನು ಸಂಕ್ಷಿಪ್ತವಾಗಿ ವಿವರಿಸಿದ್ದಾರೆ.

ಅಧ್ಯಾಯ ನಾಲ್ಕರಲ್ಲಿ ಭಾಷೆ ಮತ್ತು ಲೋಕಗ್ರಹಿಕೆ, ಭಾಷೆ ಮತ್ತು ಚಿಂತನೆ ಲೋಕಗ್ರಹಿಕೆ ಮತ್ತು ಲೋಕದೃಷ್ಟಿ ಕೋಟ ಭಾಷಿಕ ಸಮುದಾಯದ ಲೋಕಗ್ರಹಿಕೆ ಸುತ್ತಲಿನ ಜಗತ್ತು, ಕಾಲ, ವಿಂಗಡಣೆಗೆ ಸಾಮುದಾಯಿಕ ನೆಲೆಯಲ್ಲಿ ತಾನು ಮತ್ತು ಅನ್ಯದ ನಿರ್ವಚನ ಜೊತೆಗೆ ಕೋಟ

ಒಳನುಡಿ ಮತ್ತು ಅಲ್ಲಿನ ಜನರ ಲೋಕಗ್ರಹಿಕೆಗೂ ಇರುವ ಸಂಬಂಧದ ನೆಲೆಗಳನ್ನು ಗುರುತಿಸಿ ಅವುಗಳಿಗೆ ಸಂಬಂಧಿಸಿದಂತೆ ಅಧ್ಯಯನಕ್ಕೆ ಒಳಪಡಿಸಿದ್ದಾರೆ.

ಭಾಷೆ ಮತ್ತು ಸಂದರ್ಭ ಎಂಬುದು ಐದನೇ ಅಧ್ಯಾಯವಾಗಿದೆ. ಇದರಲ್ಲಿ ಮುಖ್ಯವಾಗಿ ದಿನನಿತ್ಯದ ಸಂದರ್ಭಗಳು, ಸಾಂಪ್ರದಾಯಿಕ ಸಂದರ್ಭ, ಸಾಂಪ್ರದಾಯಿಕ ಸಂದರ್ಭವನ್ನು ನಿಯಂತ್ರಿಸುವ ಸಂಗತಿಗಳು, ವೃತ್ತಿ ಮತ್ತು ಜಾತಿ, ಲಿಂಗ, ವಯಸ್ಸು ಹೀಗೆ ಹಲವು ವಿಷಯಗಳ ಸಂದರ್ಭಕ್ಕೆ ಅನುಸಾರವಾಗಿ ಭಾಷಿಕವಾಗಿ ಅಧ್ಯಯನ ಮಾಡಿದ್ದಾರೆ. ಮುಖ್ಯವಾಗಿ ಇದು ಅಧ್ಯಾಯ ಆರರಲ್ಲಿ ಭಾಷಿ ಅಸ್ಮಿತೆ ಮತ್ತು ಯಾಜಮಾನ್ಯ ಎಂಬ ವಿಷಯದ ಅಡಿಯಲ್ಲಿ ಹಲವು ವಿಚಾರಗಳನ್ನು ಚರ್ಚಿಸಿದ್ದಾರೆ. ಇಲ್ಲಿ ಮುಖ್ಯವಾಗಿ ಭಾಷೆ ಮತ್ತು ಲಿಂಗ ಈ ವಿಷಯ ಕುರಿತಂತೆ ಮಹತ್ವದ ವಿಚಾರಗಳನ್ನು ಚರ್ಚಿಸಿದ್ದಾರೆ. ಅಂದರೆ ಇಲ್ಲಿ ಬೈಗುಳಗಳನ್ನು ಚರ್ಚಿಸಿದ್ದಾರೆ. ಭಾಷೆ ಮತ್ತು ಲಿಂಗ ಈ ವಿಷಯವಾಗಿ ಬಹುಮುಖ್ಯವಾಗಿ ಚರ್ಚಿಸಿ ಕೋಟ ಭಾಷಿಕ ಪರಿಸರದಲ್ಲಿ ಮಹಿಳೆಯರಿಗೆ ಭಾಷೆ ಒಳಗಡೆ ಇರುವಂತಹ ಹಲವು ನಿಷೇಧ, ನಿರ್ಬಂಧಗಳನ್ನು ಕುರಿತಂತೆ ಚರ್ಚಿಸಿದ್ದಾರೆ. ಅವುಗಳೆಂದರೆ ಕೈತೋರ್ಸಿ ಮಾತಾಡುದ್, ನೆಲನೋಡಿ ಮಾತಾಡುದ್, ಮುಖ ಕಂಡ್‌ಕಂಡ್ ಮಾತಾಡುದ್, ಕೈಬಾಯಿ ಹಾರ್ಸಿ ಮಾತಾಡುವುದು. ರೆಪ್ಪೆ ಹಾರಿಸಿ ಮಾತಾಡುದ್, ಮುಟ್ಟಿ ಮುಂತಾದ ನಿಷೋದೋಕ್ತಿ ಮತ್ತು ಸೌಮ್ಯೋಕ್ತಿ ಮಾತುಗಳು ಹೀಗೆ ಹಲವು ವಿಚಾರಗಳನ್ನು ಕುರಿತಂತೆ ಅಧ್ಯಯನ ಮಾಡಿದ್ದಾರೆ.

ಅಧ್ಯಾಯ ಏಳರಲ್ಲಿ ಮುಂಚಲನೆಗಳಿಗೆ ಸಂಬಂಧಿಸಿದಂತೆ ಅಧ್ಯಯನ ಮಾಡಿದ್ದಾರೆ. ಹೀಗೆ ಭಾಷೆ ಮತ್ತು ಸಂಸ್ಕೃತಿಯ ಅಂತಃಸಂಬಂಧಗಳು ಕೋಟ ಉಪಭಾಷೆಯನ್ನು ಅನುಲಕ್ಷಿಸಿ ಈ ಮಹಾಪ್ರಬಂಧದ ಹಲವು ಆಯಾಮಗಳಲ್ಲಿ ಮಹತ್ವದ ವಿಚಾರಗಳನ್ನು ಮಂಡಿಸುವಂತಹ ಮಹತ್ವದ ವಿಷಯಗಳು ಅಧ್ಯಾಯಗಳಲ್ಲಿ ಅಡಕವಾಗಿವೆ.

"ಹೆಣ್ಣಿನ ಭಾಷೆ ಮತ್ತು ಸಾಮಾಜಿಕತೆ" ಎಂಬ ಎಂ.ಫಿಲ್. ಸಂಪ್ರಬಂಧವನ್ನು ಚಂದ್ರಕಲಾ ಜಿ. ಇವರು ಕನ್ನಡ ವಿಶ್ವವಿದ್ಯಾಲಯದ ಕಾವ್ಯಮಂಡಲಕ್ಕೆ ಸಾದರ ಪಡಿಸಿದ್ದಾರೆ. ಈ ಸಂಪ್ರಬಂಧದಲ್ಲಿ ಐದು ಅಧ್ಯಾಯಗಳಿದ್ದು, ಮುಖ್ಯವಾಗಿ "ಇಲ್ಲಿ ಭಾಷೆ ಮತ್ತು ಲಿಂಗಭೇದ, ಜ್ಞಾನಕ್ಕಾವಲಿಂಗ, ಸಾಹಿತ್ಯ ಕೃತಿಗಳಲ್ಲಿನ ಹೆಣ್ಣಿನ ಭಾಷಿಕ ನೆಲೆ, ಮಾಹಿತಿ ಸಂಗ್ರಹಣೆ ಮತ್ತು ವಿಶ್ಲೇಷಣೆ" ಎಂಬ ವಿಷಯದಡಿಯಲ್ಲಿ ರಚನೆಯಾಗಿದೆ. ಈ ಸಂಪ್ರಬಂಧದಲ್ಲಿ ಹೆಣ್ಣಿನ ಭಾಷೆಯನ್ನು ಕುರಿತಂತಹ ಹಲವಾರು ಉದ್ದೇಶಗಳನ್ನು ಮುಂದಿಟ್ಟುಕೊಂಡು ಅಧ್ಯಯನ ಮಾಡಲಾಗಿದೆ. ಒಟ್ಟಾರೆಯಾಗಿ ಕೆಲವು ಅಭಿಪ್ರಾಯಗಳನ್ನು ಸಂಪ್ರಬಂಧದ ಕೊನೆಯಲ್ಲಿ ಮಂಡಿಸುತ್ತಾರೆ. ಮಹಿಳೆಯರ ಭಾಷೆಯನ್ನು ಬಳಕೆ ಮತ್ತು ಕೆಲವು ಸೃಜನಾತ್ಮಕ ಬರವಣಿಗೆಯ ಮೂಲಕ ಕಂಡುಕೊಳ್ಳಲು ಪ್ರಯತ್ನಿಸಿದ್ದಾರೆ. ಒಟ್ಟಾರೆ ಆರಂಭದ ಹಂತದಲ್ಲಿ ಹಲವಾರು ಮಹತ್ವದ ಉದ್ದೇಶಗಳಿಂದಾಗಿ ಅಧ್ಯಯನ ಮಹತ್ವದ್ದಾಗಿದೆ.

"ಭಾಷೆ ಮತ್ತು ಸಾಮಾಜಿಕ ಸಂದರ್ಭ" ಎಂಬ ಕೃತಿಯನ್ನು ಕೃಷ್ಣಪರಮೇಶ್ವರ ಭಟ್ಟ ಅವರು ರಚಿಸಿದ್ದಾರೆ. ಈ ಕೃತಿ ಮುಖ್ಯವಾಗಿ ಸಾಮಾಜಿಕ ಭಾಷಾ ವಿಜ್ಞಾನದ ಗುರಿಯಾದ ಭಾಷೆಗೂ ಅದನ್ನು ಬಳಸುವ ಸಮಾಜಕ್ಕೂ ಇರುವ ಅನ್ಯೋನ್ಯ ಸಂಬಂಧವನ್ನು ಗುರುತಿಸುತ್ತದೆ. ಈ ಸಂಬಂಧವನ್ನು ಆದಷ್ಟೂ ವಿವರವಾಗಿ ಹಾಗೂ ಅಚ್ಚುಕಟ್ಟಾಗಿ ವಿವರಿಸುವುದರ ಜೊತೆಗೆ ಸಂಬಂಧಗಳಿಗೆ ಕಾರಣ ಮೀಮಾಂಸೆ ಮಾಡುವುದನ್ನು ಅಥವಾ ವ್ಯಾಖ್ಯಾನ ನೀಡುವ ಉದ್ದೇಶವನ್ನು ಹೊಂದಿದೆ ಎಂದು ಲೇಖಕರು ವಿವರಿಸುತ್ತಾರೆ. ಸಮಾಜ - ಭಾಷಿಕ ಅಧ್ಯಯನವು ಮುಖ್ಯವಾಗಿ ಎರಡು ಹಂತಗಳಲ್ಲಿ ನಡೆಯುತ್ತದೆ. ಒಂದು ಭಾಷೆಯ ಬಳಕೆಯಲ್ಲಿ - ಉಚ್ಚಾರಣೆ, ಶಬ್ದರಚನೆ, ಭಾಷಾ ಪ್ರಭೇದಗಳ ಬಳಕೆ ಮುಂತಾಗಿ ಎಲ್ಲಾ ವಿಷಯಗಳಲ್ಲಿ ಕಂಡುಬರುವ ಭಿನ್ನತೆಗಳನ್ನು ವಿವರವಾಗಿ ಗುರುತಿಸುವುದು ಎರಡು, ಭಾಷಾ ಭಿನ್ನತೆಗೆ ಅನುಗುಣವಾಗಿ ಯಾವ ಯಾವ ಸಾಮಾಜಿಕ ಸಂಗತಿಗಳಲ್ಲಿ ವ್ಯತ್ಯಾಸವಾಗಿದೆ ಎಂಬುದನ್ನು ಗುರುತಿಸಿ ಅವುಗಳ ನಡುವೆ ಇರಬಹುದಾದ ಕಾರ್ಯ-ಕಾರಣ ಸಂಬಂಧವನ್ನು ಸ್ಪಷ್ಟಪಡಿಸಲು ಪ್ರಯತ್ನಿಸುವುದು ಈ ಕೃತಿಯ ಗುರಿಯಾಗಿದೆ ಎನ್ನುತ್ತಾರೆ.

ಈ ನಿಟ್ಟಿನಲ್ಲಿ ಈ ಕೃತಿಯಲ್ಲಿ ಚರ್ಚೆಗೆ ಒಳಗಾಗಿರುವಂತಹ ವಿಷಯಗಳು ಮಹತ್ವವಾದವುಗಳು ಆಗಿವೆ. ಮುಖ್ಯವಾಗಿ ಕೃತಿಯಲ್ಲಿ ನಮ್ಮ ಮಾತು; ಮಾತೆಂಬ ಕನ್ನಡಿ, ಭಾಷೆಯಲ್ಲಿ ವಯಸ್ಸು, ಭಾಷೆ ಹಾಗೂ ಸಾಮಾಜಿಕ ವ್ಯತ್ಯಾಸ, ಭಾಷೆಯ ಆಯ್ಕೆ, ಭಾಷಾ ಭಿನ್ನತೆ ಹಾಗೂ ವ್ಯತ್ಯಾಸ : ಒಳಸುಳಿಗಳು ಎಂಬ ವಿಷಯಗಳನ್ನು ಚರ್ಚಿಸಿ ಸಮಾಜಕ್ಕೂ ಭಾಷೆಗೂ ಇರುವಂತಹ ಸಂಬಂಧಗಳನ್ನು ಅಧ್ಯಯನ ಮಾಡಿದ್ದಾರೆ. ಪ್ರಸ್ತುತ ಅಧ್ಯಯನ ವಿಷಯಕ್ಕೆ ಸಂಬಂಧಿಸಿದಂತೆ ಈ ರೀತಿಯಲ್ಲಿ ಚರ್ಚೆಗೆ ಒಳಗಾದ ಭಾಷೆಯಲ್ಲಿ ವಯಸ್ಸು ಎಂಬ ಭಾಗದಲ್ಲಿ ಸಮಾಜ ಮತ್ತು ಲಿಂಗ ಜೊತೆಗೆ ಭಾಷೆಯನ್ನು ಚರ್ಚಿಸಿದ್ದಾರೆ.

ಲಿಂಗಭೇದವು ಭಾಷೆಗಳಲ್ಲಿ ಹೆಚ್ಚು ವ್ಯಾಪಕವಾಗಿ ಕಾಣಿಸಿಕೊಳ್ಳುವ ಒಂದು ಅಂಶ. ಈ ವಿಚಾರವನ್ನು ಕುರಿತು ಲೇಖನದಲ್ಲಿ ಹಲವಾರು ಮಹತ್ವದ ವ್ಯಾಖ್ಯಾನಗಳನ್ನು ಇಟ್ಟುಕೊಂಡು ಸಮಾಜದಲ್ಲಿನ ಲಿಂಗ ಭಿನ್ನತೆಯ ನೆಲೆಗಳನ್ನು ಗುರುತಿಸುವ ಪ್ರಯತ್ನಗಳನ್ನು ಮಾಡಿದ್ದಾರೆ. ಈ ಎಲ್ಲ ಅಂಶಗಳು ಕನ್ನಡ ಸಂದರ್ಭದಲ್ಲಿ ಲಿಂಗ ತಾರತಮ್ಯಗಳನ್ನು ಅಧ್ಯಯನ ಮಾಡಲು ಮಹತ್ವದ ಮಾಹಿತಿಗಳನ್ನು ಇವು ಒದಗಿಸುತ್ತವೆ.

ಡಾ. ಪಿ. ಮಹಾದೇವಯ್ಯ ಅವರು "ಕನ್ನಡ ಬಳಕೆ ಸಾಮಾಜಿಕ ವಿನ್ಯಾಸ" ಎಂಬ ತಮ್ಮ ಕೃತಿಯಲ್ಲಿ ಪ್ರಸ್ತುತ ಅಧ್ಯಯನಕ್ಕೆ ಮಹತ್ವವಾದ ಲೇಖನವನ್ನು ರಚಿಸಿದ್ದಾರೆ. "ಹೆಣ್ಣು ಮತ್ತು ಗಂಡು ಭಾಷೆಯಲ್ಲಿನ ವ್ಯತ್ಯಾಸ" ಎಂಬ ಅವರ ಲೇಖನ ಮಹಿಳೆಯರ ಭಾಷೆಯನ್ನು ಕುರಿತಾದ

ಮಹತ್ವದ ವಿಚಾರಗಳು ಅಧ್ಯಯನಕ್ಕೆ ಒಳಗಾಗಿವೆ. ಈ ಲೇಖನದಲ್ಲಿ ಸಾಮಾಜಿಕ ಭಾಷಾಶಾಸ್ತ್ರದಲ್ಲಿ ಹೆಣ್ಣು ಮತ್ತು ಗಂಡಿನ ಭಾಷೆಯ ರಾಚನಿಕ ಅಧ್ಯಯನ ಮಹತ್ತರವಾದದ್ದು. ಈ ನಿಟ್ಟಿನಲ್ಲಿ ಇಲ್ಲಿ ಲೇಖಕರು ಹೆಣ್ಣು, ತಾನು ವಾಸಿಸುವ ಸಾಮಾಜಿಕ ಸಂದರ್ಭದಲ್ಲಿ ವ್ಯವಹಾರ ಮಾಡಬೇಕಾದರೆ ಭಾಷೆಯನ್ನು ಬಳಸಬೇಕಾಗುತ್ತದೆ. ಅಂತಹ ಸಂದರ್ಭದಲ್ಲಿ ಹೆಣ್ಣು ಮತ್ತು ಗಂಡಿನ ಭಾಷೆಯ ರಚನೆಗಳಲ್ಲಿ ಕಾಣಿಸಿಕೊಳ್ಳುವ ವೈವಿಧ್ಯತೆಯನ್ನು ಪರಿಚಯಿಸಿ ಅವುಗಳನ್ನು ಅಧ್ಯಯನಕ್ಕೆ ಒಳಪಡಿಸಿದ್ದಾರೆ. ಇದರ ಮೂಲಕ ಭಾಷೆ ಒಳಗಡೆ ರಾಚನಿಕವಾಗಿರುವಂತಹ ಹಲವು ಲಿಂಗತಾರತಮ್ಯಗಳನ್ನು ಗುರುತಿಸಿ ಅವುಗಳಿಗೆ ಇರುವಂತಹ ಕಾರಣಗಳನ್ನು ಅಧ್ಯಯನ ಮಾಡಿದ್ದಾರೆ. ಈ ಎಲ್ಲ ಅಂಶಗಳಿಂದಾಗಿ ಈ ಲೇಖನ ಭಾಷೆಯಲ್ಲಿನ ಲಿಂಗ ಭಿನ್ನತೆಯನ್ನು ಗುರುತಿಸುವ ಹಂತದಲ್ಲಿ ಮಹತ್ವವನ್ನು ಪಡೆದಿದೆ. ಮುಂದುವರೆದು ಕೃತಿಯಲ್ಲಿ ದಲಿತರ ಭಾಷೆಯನ್ನು ಕುರಿತು ಅಧ್ಯಯನ ಮಾಡಲಾಗಿದೆ. ಇಲ್ಲಿಯೂ ದಲಿತ ಮಹಿಳೆಯರ ಭಾಷಿಕಾಂಶಗಳನ್ನು ಕುರಿತು ಅಧ್ಯಯನಕ್ಕೆ ಒಳಪಡಿಸಿದ್ದಾರೆ. ಈ ಎಲ್ಲ ಅಂಶಗಳಿಂದ ಈ ಕೃತಿ ಪ್ರಸ್ತುತ ಅಧ್ಯಯನದ ಮುಂದಿನ ದಾರಿಯನ್ನು ಸುಗಮಗೊಳಿಸುತ್ತದೆ.

ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಮಹತ್ವದ ಅಧ್ಯಯನ ಕನ್ನಡ ಸಂದರ್ಭದಲ್ಲಿ ಇಲ್ಲಿಯವರೆಗೂ ನಡೆದಿಲ್ಲ. ಆದರೆ ಬಿಡಿ ಬಿಡಿ ವಿಷಯಗಳು ಕೆಲವೆಡೆಗಳಲ್ಲಿ ಚರ್ಚಿತವಾಗಿವೆ. ಅದರಲ್ಲಿ ಡಾ. ಅನ್ನಪೂರ್ಣ ಗುಡದೂರು ಅವರು ರಚಿಸಿರುವ ಕೃತಿ "ನಗೆ ಹನಿಗಳಲ್ಲಿ ಹೆಣ್ಣಿನ ಪ್ರತಿನಿಧೀಕರಣ" ಎಂಬ ಮಂಟಪ ಮಾಲೆ ಮಹತ್ವದ ವಿಷಯಗಳನ್ನು ಒಳಗೊಂಡಿರುವ ಕೃತಿ. ಇದರಲ್ಲೂ ಮುಖ್ಯವಾಗಿ ಹೆಣ್ಣಿನ ಭಾಷಿಕ ಲಕ್ಷಣಗಳ ಬಗೆಗೆ ವಿವಿಧ ವಿದ್ವಾಂಸರುಗಳ ಅಭಿಪ್ರಾಯ; ಹೆಣ್ಣಿನ ಮಾತು, ಮೌನ ಮತ್ತು ಹರಟೆ; ಸಾಹಿತ್ಯ ಸಮೀಕ್ಷೆ, ನಗೆ ಹನಿಗಳಲ್ಲಿ ಹೆಣ್ಣಿನ ಪ್ರತಿನಿಧೀಕರಣ ನೇತ್ಯಾತ್ಮಕ ಕಥನವಾಗಿ "ಹೆಂಡತಿ" ಪಾತ್ರ, ಸೌಂದರ್ಯದ ಸ್ಥಿರ ಮಾದರಿ, ವೇಷಭೂಷಣ ಅಲಂಕಾರಗಳ ಬಗೆಗೆ, ಆಸೆ ಆಮಿಷಗಳ ಕಾರಣ ಹೆಣ್ಣು, ವಾಚಾಳಿ ಚೌಕಟ್ಟಿನಲ್ಲಿ ಕಲ್ಪಿಸುವ ಬಗೆ, ವಿವಾಹ ಬಾಹೀರ ಸಂಬಂಧ ಹೆಣ್ಣು, ಲೈಂಗಿಕ ನೆಲೆಯ ನಗೆಹನಿಗಳು, ಕನ್ನಡ ಭಾಷೆ : ಲಿಂಗತಾರತಮ್ಯದ ನೆಲೆಗಳು, ಲಿಂಗ ಮತ್ತು ಭಾಷಾ ಬಳಕೆಯಲ್ಲಿ ಬದಲಾವಣೆ, ವಾಕ್ಯರಚನೆ, ಪದಕೋಶ, ಶೈಲಿ ನೆಲೆಗಳು ಎಂಬ ಹಲವಾರು ವಿಷಯಗಳನ್ನು ಇಟ್ಟುಕೊಂಡು ಮಹಿಳೆಯರನ್ನು ಕುರಿತಂತೆ ಸಾಮಾಜಿಕರ ಭಾಷಿಕ ನಿರ್ವಚನೆಗಳನ್ನು ಅಧ್ಯಯನ ಮಾಡಿದ್ದಾರೆ. ಈ ಅಧ್ಯಾಯ ಪ್ರಸ್ತುತ ಅಧ್ಯಯನಕ್ಕೆ ಹಲವು ನೆಲೆಗಳನ್ನು ಗುರುತಿಸಿ ಮಹತ್ವದ ಮಾರ್ಗಗಳನ್ನು ಸೂಚಿಸುತ್ತದೆ. ಇಲ್ಲಿ ನಡೆದ ಪ್ರಯತ್ನ ಕೆಲವು ಸಣ್ಣ ಪ್ರಮಾಣದ್ದು. ಇದನ್ನು ದೊಡ್ಡ ಪ್ರಮಾಣದಲ್ಲಿ ಅಧ್ಯಯನಕ್ಕೆ ಒಳಪಡಿಸುವ ಅಗತ್ಯವನ್ನು ಕೃತಿ ವ್ಯಕ್ತಪಡಿಸುತ್ತದೆ.

"ಮಹಿಳಾ ಪುರವಣಿಗಳ ಭಾಷಿಕ ಅಧ್ಯಯನ (ಕನ್ನಡ ದಿನಪತ್ರಿಕೆಗಳನ್ನು ಅನುಲಕ್ಷಿಸಿ)" ಎಂ.ಫಿಲ್. ಸಂಪ್ರಬಂಧ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿರುವಂಥದ್ದು. ಈ ಪ್ರಬಂಧದಲ್ಲಿ ಮುಖ್ಯವಾಗಿ ಮಹಿಳಾ ಪುರವಣಿಗಳ ಭಾಷಾ ವೈವಿಧ್ಯತೆ ಮತ್ತು ಮಹತ್ವ, ಮಹಿಳಾ ಪುರವಣಿಗಳಲ್ಲಿ ಪದಗಳ ಪ್ರಯೋಗ ಹಾಗೂ ಬಳಕೆ, ಮಹಿಳಾ ಪುರವಣೆಗಳಲ್ಲಿನ ಪದಕೋಶ ಪಲ್ಲಟ ಇತ್ಯಾದಿ ವಿಷಯಗಳನ್ನು ಅಧ್ಯಯನಕ್ಕೆ ಒಳಪಡಿಸಿದ್ದಾರೆ.

ಕನ್ನಡ ಭಾಷಾಧ್ಯಯನ ವಿಭಾಗದ ನಮ್ಮ ಕನ್ನಡದ ೬೭ನೆಯ ಸಂಚಿಕೆಯು ಮಹಿಳೆಯರ ಭಾಷೆಯನ್ನು ಕುರಿತಂತೆ ಮೀಸಲಾಗಿರುವಂತಹ ಪತ್ರಿಕೆಯಾಗಿದೆ. ಈ ಪತ್ರಿಕೆಯಲ್ಲಿ ಡಾ. ಡಿ. ಪಾಂಡುರಂಗ ಬಾಬು ಅವರು ಲಿಂಗತಾರತಮ್ಯದ ಸ್ತ್ರೀವಾದಿ  ಗ್ರಹಿಕೆ ಪತ್ರಿಕೆಯಲ್ಲಿ ಭಾಷಿಕ ಆಕರಗಳ ಬಳಕೆಯ ಸವಾಲುಗಳು ಕುರಿತಂತೆ ಮುಖಾಮುಖಿ ಮಾಡಿದ್ದಾರೆ.

ಪತ್ರಿಕೆಯಲ್ಲಿ ಅಶೋಕಕುಮಾರ ರಂಜೇರೆ ಅವರು "ಕನ್ನಡದ ಲಿಂಗಸಂಬಂಧಿ ಆಯಾಮಗಳು : ಔಪಚಾರಿಕ ಭಾಷಾ ಬಳಕೆಯ ಸಂದರ್ಭದಲ್ಲಿ ಗ್ರಹಿಕೆ ಅಭಿವ್ಯಕ್ತಿಗಳು" ಹೇಗೆ ಪರಿಣಾಮ ಬೀರುತ್ತದೆ ಎಂಬಂತಹ ವಿಚಾರಗಳನ್ನು ಚರ್ಚಿಸಿದ್ದಾರೆ. ಡಾ. ಡಿ. ಮಹಾದೇವಯ್ಯ ಅವರು "ಮಾತುಕತೆಯಲ್ಲಿ ಹೆಣ್ಣು" ಎಂಬ ಲೇಖನದಲ್ಲಿ ಸಮಾಜದಲ್ಲಿ ಮಹಿಳೆಯರ ಮಾತಿನ ಬಗೆಗೆ ಇರುವಂತಹ ಅಭಿಪ್ರಾಯಗಳನ್ನು ಕೆಲವು ನಿರ್ವಚನಗಳ ಮುಖಾಂತರ ವಿವರಿಸುತ್ತಾರೆ. ಜೊತೆಗೆ ಪತ್ರಿಕೆಯಲ್ಲಿ ಬಂದಿರುವ ಹೇಳಿಕೆಗಳು, ವರದಿಗಳನ್ನು ಆಧಾರವಾಗಿಟ್ಟುಕೊಂಡು ಈ ವಿಷಯವನ್ನು ಚರ್ಚಿಸಿದ್ದಾರೆ.

ಎಚ್.ಎಸ್. ರಾಘವೇಂದ್ರರಾವ್ ಅವರು "ಮಹಿಳೆ ಭಾಷೆ"ಯನ್ನು ಕುರಿತಂತೆ ಅಧ್ಯಯನ ಮಾಡಿದ್ದಾರೆ. ಅವರು ತಮ್ಮ "ಕಣ್ಣಹನಿಗಳೆ; ಮಹಿಳೆ : ಬದುಕು, ಭಾಷೆ ಮತ್ತು ಅಭಿವ್ಯಕ್ತಿ" ಎಂಬ ಕೃತಿಯಲ್ಲಿ ಈ ಬಗೆಯಲ್ಲಿ ಚರ್ಚೆಯನ್ನು ಆರಂಭಿಸುತ್ತಾರೆ. ಮುಖ್ಯವಾಗಿ ಈ ಕೃತಿಯಲ್ಲಿ ಅವರು ತಮ್ಮ ಮೊದಲ ಲೇಖನದಲ್ಲಿ "ಕನ್ನಡ ಸಾಹಿತ್ಯದಲ್ಲಿ ಎಚ್ಚೆತ್ತ ಮಹಿಳೆ" ಎಂಬ ವಿಷಯವನ್ನು ಇಟ್ಟುಕೊಂಡು ಮಹಿಳೆಯರ ಬರಹದ ಭಾಷೆಯಲ್ಲಿ ಆದಂತಹ ಹಲವಾರು ಬದಲಾವಣೆಗಳನ್ನು ಕುರಿತಂತೆ ಚರ್ಚಿಸುತ್ತಾರೆ. ನಂತರ ಅವರು "ಲೈಂಗಿಕತಾವಾದಿ ಭಾಷೆ ಮತ್ತು ಸಂಕಥನ ಪ್ರವೇಶ ಮತ್ತು ಭಾಷಿಕ ವಾಸ್ತವಗಳು" ಎಂಬಲ್ಲಿ ಅವರು ಭಾಷೆ ಒಳಗಡೆಯ ಹಲವು ನಿರ್ವಚನಗಳನ್ನು ಇಟ್ಟುಕೊಂಡು ಸರಿಪಡಿಸುವ ಸಾಧ್ಯತೆಗಳನ್ನು ಗುರುತಿಸುತ್ತಾರೆ. ಲಿಂಗಸೂಚಕ ಪದಗಳ ಸಮಾವೇಶಕ ಮತ್ತು ಅಸಮಾವೇಶಕ ಬಳಕೆಗಳನ್ನು ಕುರಿತಂತೆ ಚರ್ಚಿಸಿದ್ದಾರೆ. ಭಾಷಿಕ ಸಂಕಥನಗಳನ್ನು ಮತ್ತು ಅವುಗಳ ಸ್ವರೂಪಗಳನ್ನು ಅಧ್ಯಯನಕ್ಕೆ ಒಳಪಡಿಸಿದ್ದಾರೆ. ಮುಂದುವರೆದು ಅವರು ಸ್ತ್ರೀವಾದಿ ಚಿಂತನೆಯ ನೆಲೆಗಳನ್ನು ಮತ್ತು ಕಲಾತ್ಮಕ ಭಾಷಿಕ ಅಭಿವ್ಯಕ್ತಿಗಳ ಕುರಿತಂತೆ ಚರ್ಚಿಸುತ್ತಾರೆ.

ಮಹಿಳೆಯರನ್ನು ಸಮಾಜ ನೋಡುವ ಬಗೆಗಳನ್ನು ಸಮಾಜ ನಿರ್ಮಿಸಿರುವಂತಹ ಹಲವಾರು ನಿರೂಪಣೆ, ನಿರ್ವಚನಗಳು, ಸಂಕಥನಗಳ ಮುಖಾಂತರ ವಿವರಿಸಿರುವವರೂ ಹಲವರು. ಈ ನಿಟ್ಟಿನಲ್ಲಿ ನಡೆದಿರುವಂತಹ ಚರ್ಚೆಗಳಲ್ಲಿ ಡಾ. ಹಂದ್ರಾಳ ಗವಿಸಿದ್ದಪ್ಪ ಅವರು "ಬೈಗುಳಗಳಲ್ಲಿ ಮಹಿಳೆ" ಎಂಬ ಮಂಟಪ ಮಾಲೆ ಕೃತಿ ಮಹತ್ವದ್ದಾಗಿದೆ. ಇಲ್ಲಿ ಭಾಷಿಕ ರಚನೆ ಮತ್ತು ಬಳಕೆಯಲ್ಲಿ ಬೈಗುಳಗಳ ಸ್ವರೂಪ ಹೇಗಿದೆ ಎಂಬುದನ್ನು ಗುರುತಿಸಿ ಬೈಗುಳಗಳ ಸ್ವರೂಪದ ಬಗ್ಗೆ ಚರ್ಚೆ ಆರಂಭಿಸುತ್ತಾರೆ. ಅದರಲ್ಲಿ ಅವುಗಳ ಭಾಷಿಕ ಸ್ವರೂಪ ಯಾವ ಬಗೆಯದು ಎಂಬುದನ್ನು ಕಂಡುಕೊಳ್ಳುವ ಪ್ರಯತ್ನ ಮಾಡುತ್ತಾರೆ. ಬೈಗುಳಗಳಲ್ಲಿ ಲಿಂಗತಾರತಮ್ಯದ ನೆಲೆಗಳನ್ನು, ರಾಜಕೀಯಗಳನ್ನು ಕುರಿತ ವಿಚಾರಗಳನ್ನು ಅಧ್ಯಯನಕ್ಕೆ ಒಳಪಡಿಸುತ್ತಾರೆ. ಜೊತೆಗೆ ಹೆಂಗಸರ ಬೈಗುಳಗಳ ಸ್ವರೂಪ ಹೇಗಿರುತ್ತದೆ ಮತ್ತು ಅವುಗಳ ಹಿಂದಿನ ಮನೋಧರ್ಮಗಳ ಕುರಿತಾಗಿಯೂ ಕೃತಿಯಲ್ಲಿ ಚರ್ಚಿಸಿದ್ದಾರೆ. ಬೈಗುಳಗಳಲ್ಲಿ ಕಂಡು ಬರುವ ಶೀಲದ ವಿಚಾರ, ನೈತಿಕ-ಅನೈತಿಕದ ವಿಚಾರಗಳು ಲೈಂಗಿಕತೆಗೆ ಸಂಬಂಧಿಸಿದ ನಿರೂಪಣೆಗಳು ಅವುಗಳಲ್ಲಿ ಇರುವಂತಹ ಆದರ್ಶ ಹೀಗೆ ಹಲವು ವಿಚಾರಗಳನ್ನು ಮುಂದಿಟ್ಟುಕೊಂಡು ಚರ್ಚೆಯನ್ನು ಆರಂಭಿಸುತ್ತಾರೆ. ಇದೆಲ್ಲ ವಿಚಾರಗಳು ಮಹಿಳೆಯನ್ನು ಮತ್ತು ಆಕೆಯ ಅಸ್ತಿತ್ವದ ಕುರಿತಾಗಿ ಭಾಷೆಯೊಳಗಡೆ ಪಾರಂಪರಿಕವಾಗಿ ಬರುತ್ತಿರುವ ಅಭಿಪ್ರಾಯಗಳು ಇವಾಗಿವೆ. ಈ ಬಗೆಯ ಅಧ್ಯಯನದಿಂದ ಮಹಿಳೆಯರನ್ನು ಕುರಿತ ಸಮಾಜದ ಅಭಿಪ್ರಾಯವನ್ನು ತಿಳಿಯುವುದಕ್ಕೆ ಇರುವಂತಹ ನಿದರ್ಶನಗಳು ಆಗಿವೆ.

# ಅಧ್ಯಾಯ - ೨

## ಭಾಷೆ-ಮಹಿಳೆಯ ಕುರಿತು ವಿವಿಧ ನಿರ್ವಚನಗಳು

೨.೧. ನಂಬಿಕೆ

೨.೨. ಗ್ರಹಿಕೆ

೨.೩. ನಿರೂಪಣೆಗಳು

# ಅಧ್ಯಾಯ - ೨

## ಭಾಷೆ-ಮಹಿಳೆಯ ಕುರಿತು ವಿವಿಧ ನಿರ್ವಚನಗಳು

ಭಾಷೆಯು ಒಂದು ಸಾಮಾಜಿಕ ಸಂಸ್ಥೆಯಾಗಿದೆ ಅಥವಾ ಇದೊಂದು ಮಾಧ್ಯಮವಾಗಿದೆ. ಇದು ಇನ್ನಿತರ ಸಾಮಾಜಿಕ ಸಂಸ್ಥೆಗಳೊಂದಿಗೆ ನೀರಿನ ಗುಣದ ರೀತಿ ಹೊಂದಿಕೊಳ್ಳುತ್ತದೆ. ಹಾಗಾಗಿಯೇ ನಮ್ಮಲ್ಲಿ ವ್ಯಕ್ತಿ ಭಾಷೆ, ಜಾತಿ ಭಾಷೆ, ಪ್ರದೇಶ ಭಾಷೆಗಳ ಜೊತೆಗೆ ರಾಜಕಾರಣದ ಭಾಷೆ, ಶಿಕ್ಷಣದ ಭಾಷೆ, ಪತ್ರಿಕಾ ಭಾಷೆ, ಸಾಹಿತ್ಯ ಭಾಷೆ ಹೀಗೆ ಇದಕ್ಕೆ ಎಂಟ್ಟತ್ತು ಸಾಮಾಜಿಕ ರೂಪಗಳಿವೆ. ಭಾಷೆಯು ಸಮಾಜದಲ್ಲಿ ಕೇವಲ ಒಂದು ಮಾಧ್ಯಮವಾಗಿ ಅಥವಾ ಸಾಧನವಾಗಿ ಮಾತ್ರ ವರ್ತಿಸುವುದಿಲ್ಲ. ಅದು ಸಮಾಜದ ಭಿನ್ನ ಘಟಕಗಳ ಸರಿಸುಮಾರು ಪ್ರತಿಬಿಂಬವೇ ಆಗಿ ವರ್ತಿಸುತ್ತದೆ.

ಯಾವುದೇ ಭಾಷೆಯ ಸ್ಥಿತಿಗತಿಯು ಅದರ ಸಾಮಾಜಿಕ ಸ್ಥಿತಿಯೇ ಆಗಿರುತ್ತದೆ. ಯಾವುದೇ ಒಂದು ಸಮಾಜದಲ್ಲಿನ ಭಾಷಿಕ ಶ್ರೇಣಿಕರಣಕ್ಕೂ, ಆರ್ಥಿಕ ಶ್ರೇಣಿಕರಣಕ್ಕೂ ಮತ್ತು ಸಾಂಸ್ಕೃತಿಕ ಶ್ರೇಣಿಕರಣಕ್ಕೂ ಒಂದು ಅವಿನಾಭಾವ ಸಂಬಂಧ ಇರುತ್ತದೆ. ಹಾಗೆಯೇ ಯಾವುದೇ ಭಾಷಿಕ ಹೋರಾಟವು ಸಾಮಾಜಿಕ-ಸಾಂಸ್ಕೃತಿಕ ಹೋರಾಟವೇ ಆಗಿರುತ್ತದೆ. ರಾಜಕಾರಣ, ಆಡಳಿತ, ರೀತಿ-ನೀತಿ, ತತ್ವಜ್ಞಾನ, ಶಿಕ್ಷಣ, ಸಾಹಿತ್ಯ ಇತ್ಯಾದಿ ಸಮಾಜವೊಂದರ ಪ್ರಮುಖ ಅಂಗಗಳಲ್ಲಿನ ಬಿಕ್ಕಟ್ಟು, ವಿಕಾರ, ಸೌಂದರ್ಯ-ಸಮೃದ್ಧಿ ಎಲ್ಲವೂ ಭಾಷೆಯಲ್ಲಿ ಪ್ರತಿ ಬಿಂಬಿಸುತ್ತಿರುತ್ತದೆ. ಏಕೆಂದರೆ ಈ ಎಲ್ಲವನ್ನೂ ನಾವು ಭಾಷಿಕ ಶರೀರದ ಮೂಲಕವೇ ಪರಿಭಾವಿಸುವ ಇಲ್ಲವೆ ನಿರ್ವಚಿಸುವ ಕೆಲಸವನ್ನು ಮಾಡುತ್ತಿರುತ್ತೇವೆ.

ಮಹಿಳೆಯು ಸಾಮಾನ್ಯವಾಗಿ ಮಾತನಾಡುವ ಮಾತು ಅವಳದೆಯೇ? ಅಥವಾ ಅವಳನ್ನು ಆಕ್ರಮಿಸಿಕೊಂಡು ಆಳುತ್ತಿರುವ ಪುರುಷನ ಭಾಷೆಯ ಶುಕಭಾಷಿಣಿ ಅವಳಾಗಿದ್ದಾಳೆಯೇ? ಎನ್ನುವುದೂ ಅಧ್ಯಯನ ಮಾಡಬೇಕಾದ ,ಸಂಗತಿ. ಮನುಷ್ಯ ಎಷ್ಟೋ ಸಲ ಮಹಿಳೆಯ ಮಾತು ವ್ಯವಸ್ಥೆ ಕಲಿಸಿದ ಗಿಣಿಪಾಠವೂ ಆಗಿದೆ. ಪ್ರಶ್ನಿಸುವ ಮನೋಭಾವವಿಲ್ಲದೆ ಎಲ್ಲವನ್ನೂ ಒಪ್ಪಿಕೊಳ್ಳುವ ರೀತಿಯನ್ನು ನಾವು ಇಲ್ಲಿ ಗುರುತಿಸಬಹುದು. ಪ್ರಶ್ನಿಸುವ ಮನೋಭಾವ ಬೇಕು. ಜೊತೆಗೆ

ಚಿಂತನೆಯೂ ಬೇಕು. ಮಹಿಳಾಪರವೆನ್ನುವುದು ಬಂಡಾಯವೇ ಆಗಬೇಕಿಲ್ಲ. ಸ್ವತಂತ್ರ ಆವರಣದಲ್ಲಿ ತಾಳ್ಮೆ, ಸಹನೆ ಎಂದು ಕರೆಸಿಕೊಳ್ಳುವ ಗುಣಗಳು ಅಧೀನತೆಯ ಸಂದರ್ಭದಲ್ಲಿ ಅಸಹಾಯಕತೆಯನ್ನು ಸೂಚಿಸುತ್ತವೆ. ಸ್ವತಂತ್ರ ಪರಿಸರದಲ್ಲಿ ಪ್ರಶ್ನೆ ಮಾಡುವ ಚಿಕಿತ್ಸಕ ಮನೋಭಾವ ಅಧೀನತೆಯ ಬದುಕಿನಲ್ಲಿ ಬಂಡಾಯವಾಗಬಲ್ಲದು. ನಾವು ಬಳಸುವ ಎಲ್ಲ ಪದಗಳೂ ಮಹಿಳಾವಾದದ ಹಿನ್ನೆಲೆಯಲ್ಲಿ ವಿಭಿನ್ನ ಅರ್ಥಗಳನ್ನೂ, ಕೆಲವು ಸಲ ವಿರೋದಾರ್ಥಗಳನ್ನೂ ಸೂಚಿಸಬಹುದು. ಆದುದರಿಂದಲೇ ಸಂದರ್ಭ, ಪರಿಸರ, ವರ್ಗ ವ್ಯವಸ್ಥೆ, ಜಾತಿ ವ್ಯವಸ್ಥೆಗಳು ಮಹಿಳಾವಾದಿ ಚಿಂತನೆಯಲ್ಲಿ ನಿರ್ಣಾಯಕ ಪಾತ್ರವಹಿಸುತ್ತವೆ. ಕೆರೆಗೆ ಹಾರದ ಭಾಗೀರಥಿಯ ಸಹನೆ ಮತ್ತು ತ್ಯಾಗ ಮಹಿಳಾವಾದಿ ದೃಷ್ಟಿಯಲ್ಲಿ ಅಸಹಾಯಕತೆಯ ಆತ್ಯಂತಿಕ ಸ್ಥಿತಿಯಾಗಬಹುದು.

ಮುಕ್ತವಾಗಿ ಬರೆಯುವ ಮತ್ತು ಮಾತನಾಡುವ ಮಹಿಳೆಯರು ವ್ಯವಸ್ಥೆಯಲ್ಲಿ ಕಾಣಸಿಗುತ್ತಾರೆ. ಆದರೆ ಎಲ್ಲೋ ಅದರ ಅಸ್ವೀಕೃತಿ, ಹಿಂಜರಿಕೆ, ಅಸಡ್ಡೆ ಮತ್ತು ಕಡೆಗಣ್ಣಿನ ನೋಟ ಇದ್ದೇ ಇರುತ್ತದೆ. ಪರಸ್ಪರ ಅಭಿಪ್ರಾಯಗಳನ್ನು ಮನ್ನಿಸುವ ಅರೋಗ್ಯಕರವಾಗಿ ಸ್ವೀಕರಿಸುವ ಮನಸ್ಸು ಎಲ್ಲರಲ್ಲೂ ಬೆಳೆಯಬೇಕು. ಸಮಾಜ ಆರೋಗ್ಯಕರ ಮನಸ್ಸುಳ್ಳ, ಮುಕ್ತ ಅಭಿಪ್ರಾಯಗಳನ್ನು ಗೌರವಿಸುವ ವ್ಯಕ್ತಿಗಳ ಧೋರಣೆಯಲ್ಲಿದೆ.

ಜನಾಂಗ, ಜಾತಿ, ಲಿಂಗ, ವರ್ಗಗಳು ಭಾಷೆಯ ಸ್ವರೂಪವನ್ನು ನಿರ್ಧರಿಸುವ ಮುಖ್ಯ ಘಟಕಗಳೆಂದು ಭಾವಿಸಿದಾಗ ಮಹಿಳೆಯ ಭಾಷೆ ವಿಶಿಷ್ಟವಾಗಿ ನಿಲ್ಲುತ್ತದೆ. ಭಾಷೆ ಎನ್ನುವುದು ಮಹತ್ವದ್ದೆನಿಸಲಿಕ್ಕಿಲ್ಲ. ಇವರ ದೃಷ್ಟಿಯಲ್ಲಿ ದಲಿತ ಭಾಷೆ; ಮಹಿಳಾ ಭಾಷೆಗಳು ವಿಶೇಷವಾಗಿ ಬೇರ್ಪಡಿಸುವ ಈ ದೃಷ್ಟಿ ಆರೋಗ್ಯಕರವಾದುದಲ್ಲ. ಭಾಷೆಗೆ ಈ ಪ್ರಕಾರಗಳು ತೆರೆದ, ಕೊಟ್ಟಿರುವ, ಕೊಡಲಿರುವ ಹೊಸ ಅನುಭವಗಳನ್ನು, ವಿಶಿಷ್ಟ ಅನುಭವಗಳನ್ನು ಅಲ್ಲಗಳೆಯುವಂತಿಲ್ಲ. ಇವುಗಳನ್ನು ಹೊರತುಪಡಿಸುವ ಭಾಷೆ ಪವಿತ್ರ ಗಂಗಾಜಲ ಬಾಟಲಿಯಲ್ಲಿಡುವುದಕ್ಕೆ ಯೋಗ್ಯವೆ ಹೊರತು ಜೀವಜಲವಾಗಲಾರದು. ಭಾಷೆ ನಿರಂತರ ಚಲನಶೀಲವಾದ ನದಿಯಾಗಿದೆ. ಸಮಾಜದ ತರ್ಕದ ಕಾಳಜಿಗಳಿಂದ ವಿಮುಖವಾದ ಭಾಷೆಗೆ ಬೆಲೆಯಿಲ್ಲ. ಸಮಾಜಮುಖಿ, ಸಮಾಜಾನ್ವೇಷಿ ಭಾಷೆ ನಮಗೆ ಬೇಕು.

ಮಹಿಳೆಯಾಗಿ ಹುಟ್ಟಿದ ಮಾತ್ರಕ್ಕೆ ಆಕೆ ಬರೆದದ್ದೆಲ್ಲಾ ಮಹಿಳಾ ಸಾಹಿತ್ಯವಾಗಬೇಕಾಗಿಲ್ಲ. ಆಕೆಯು ಬಳಸಿದ ಭಾಷೆ, ಮಹಿಳೆಯ ಭಾಷೆಯಾಗಬೇಕಿಲ್ಲ. ಕಾವ್ಯದಲ್ಲಿ, ಪುರಾಣಗಳಲ್ಲಿ ರಮ್ಯ, ರಮಣೀಯ ಮನೋಹರವಾದ, ನಿಕೃಷ್ಟವಾದ, ದಯನೀಯವಾದ ರೀತಿಯಲ್ಲಿ ಬದುಕುತ್ತಿದ್ದಾಳೆ. ಶಕ್ತಿ ಪಂಥದ ಹಿನ್ನೆಲೆ, ನಮ್ಮ ದೇವಿಯರ ಕಲ್ಪನೆಗಳು ಹೇಗಿವೆ? ವಿದ್ಯೆಗೆ, ಶಕ್ತಿಗೆ, ಧನಕ್ಕೆ ಅಧಿದೇವತೆಗಳು ಸರಸ್ವತಿ, ಪಾರ್ವತಿ, ಲಕ್ಷ್ಮಿಯರೆಂಬ ಹೆಣ್ಣುಗಳೆ ವಾಸ್ತವವಾಗಿ ಈ ಎಲ್ಲದರ ಕೀಲಿ

ಕೈ ಇರುವುದೆ ಸಮಾಜ ಗಂಡನ ಕೈಯಲ್ಲಿ. ಮಾತಿಗೆ ಅಥವಾ ಶಬ್ದ ಬಂಡಾರದ ಬೀಗ ಮುದ್ರೆ ಹೊಂದಿರುವ ಮಹಿಳೆಗೆ ವಾಸ್ತವದಲ್ಲಿ ಭಾಷೆ ಇಲ್ಲ. ಕೇಳಿಸದ ಧ್ವನಿಯನ್ನು ಭಾಷೆಯನ್ನು ಆಲಿಸುವ, ಅದರ ಬಗ್ಗೆ ಕೇಳಿಸುವ ಸಾವಧಾನ. ಸಮಾಜದಿಂದ ಕಳೆದುಹೋದದ್ದು ಇದು ನಿರ್ಲಕ್ಷಿಸಲಾಗದ ಸಂಗತಿ.

ಸಂಸ್ಕೃತಿ ಕಟ್ಟಿಕೊಟ್ಟ ವ್ಯವಸ್ಥೆ ಬಿಂಬಿಸಿದ ರೀತಿಯಲ್ಲಿ ಚಾಲ್ತಿಯಲ್ಲಿರುವ ಮೌಲ್ಯಗಳು ರಚನೆಗೊಂಡಿವೆ. ಸಮಾಜ ನಿರ್ಮಿಸಿಕೊಟ್ಟ ನಿರ್ದೇಶನದೊಳಗಡೆ, ಹೆಣ್ಣಿಗೆಂದು ರೂಪಿಸಿಕೊಟ್ಟಿರುವ ನಂಬಿಕೆಯಂತೆ ನಡೆದುಕೊಳ್ಳಬೇಕು. ಸಮಾಜದ ನೀತಿ ನಿರ್ದೇಶನಗಳೆಲ್ಲವೂ ಮಹಿಳೆಯನ್ನು ಆದರ್ಶಮಯವಾದದ್ದನ್ನು ಪ್ರತಿಬಿಂಬಿಸಿವೆ. ಇವುಗಳನ್ನು ನಾವು ಭಾಷೆಯಲ್ಲಿ ಕಂಡುಕೊಳ್ಳಲು ಸಾಧ್ಯ. ಏಕೆಂದರೆ ಭಾಷೆ ಮತ್ತು ಸಮಾಜ ಒಂದರ ಪ್ರತಿಬಿಂಬ ಮತ್ತೊಂದು. ಮಹಿಳೆಯರ ಪ್ರತಿಮೆಗಳು ಪ್ರತೀಕಗಳು ಪುರುಷರ ಮಾನದಂಡಗಳ ಪ್ರಕಾರ ಮುಖ್ಯ ಅನಿಸಬಹುದು. 'ಮಹಿಳಾ ಸಾಹಿತ್ಯ–ಅಡುಗೆಮನೆ ಸಾಹಿತ್ಯ' ಎಂದು ಅವಜ್ಞೆಗೆ ಒಳಗಾಗುತ್ತಿರುವುದನ್ನು ನಾವು ಗಮನಿಸದೆ ಇರುವ ಹಾಗಿಲ್ಲವಲ್ಲ! ಶೈಲಿ ಮತ್ತು ಭಾಷೆಯ ಬಳಕೆ ಇಲ್ಲಿ ಗಮನಾರ್ಹವಾದುದು. ಮಹಿಳೆಯರ ಮಾತಿಗೆ ಸ್ವರೂಪ, ಧ್ವನಿ ಇವುಗಳೂ ಬಹುಪಾಲು ಆರೋಪಿತವೆ. ಗಂಡು ಧ್ವನಿಯ ಮಹಿಳೆಯರೂ, ಹೆಣ್ಣು ಧ್ವನಿಯ ಪುರುಷರೂ ಇರುವವರಾದರೂ ದೇಹದ ರಚನೆ ಮತ್ತು ಜೈವಿಕ ಗುಣಗಳಿಗೆ ಅನುಗುಣವಾಗಿ ಇವು ರೂಪಿತವಾಗಿವೆ. ಈ ಜೈವಿಕ ಭಿನ್ನತೆಯನ್ನು ತಾರತಮ್ಯದ ದೃಷ್ಟಿಯಿಂದ ಪರಂಪರೆ ಉದ್ದಕ್ಕೂ ಗ್ರಹಿಸಲಾಗಿದೆ.

ಮಹಿಳೆಯ ಬರಹದ ಮತ್ತು ಮಾತಿನ ಶೈಲಿ ಬಹಳ ಸಲ ಒಂದು ಚೌಕಟ್ಟಿನೊಳಗೆ ಬಂಧಿತವಾದ ಹಾಗೆ ಬಂದಿದೆ. ಗಮನಾರ್ಹವಾಗಿ ನಮ್ಮ ಅನಿಸಿಕೆಗಳನ್ನು ಪ್ರಸ್ತುತಗೊಳಿಸುವ ರೀತಿಯನ್ನು ನಾವು ಹುಡುಕುವ ಅಗತ್ಯವಿದೆ. ಲೈಂಗಿಕತೆಯ ಅಭಿವ್ಯಕ್ತಿಯನ್ನು ಮಹಿಳೆ ಹೇಗೆ ವ್ಯಕ್ತಪಡಿಸುತ್ತಾಳೆ. ಪೌರಾಣಿಕ ಕಾವ್ಯಗಳ ಪಾತ್ರಗಳ ಮುಖಾಂತರ ಅಭಿವ್ಯಕ್ತಿಸಿರುವುದು ಅದ್ಭುತವಾಗಿದೆ. ಇಂಥ ಮುಕ್ತತೆ ಇಂದಿನ ಬರಹಗಳಲ್ಲಿ ಮಾಯವಾಗಿದೆ. ಅಥವಾ ಇನ್ನೊಂದು ರೂಪದಲ್ಲಿ ಹಿಂದೆ ಹೇಳಿದ ಹಾಗೆ ಜನಪದ ಆಚರಣೆಯ ಹೆಸರಿನಲ್ಲಿ ಅವಾಹನೆಯ ನೆಪದಲ್ಲಿ ಅಭಿವ್ಯಕ್ತವಾದದ್ದಿದೆ.

ಭಾರತೀಯ ಸಮಾಜದ ಆದರ್ಶ ಹೆಣ್ಣಿನ ಪರಿಕಲ್ಪನೆಗಳು ಶೀಲ, ಪಾತಿವ್ರತ್ಯ, ವಿಧೇಯತೆ, ತ್ಯಾಗ, ಸಹನೆ, ಕಷ್ಟಸಹಿಷ್ಣುತೆ ಇವೆ ಮೊದಲಾದ ಗುಣಗಳನ್ನು ಹೆಣ್ಣಿನ ಪರಮೋಚ್ಚ ಆದರ್ಶಗಳೆಂದು ಭಾವಿಸಲಾಗಿದೆ. ಈ ಸಂಸ್ಕೃತಿಯಲ್ಲಿ ಇಂಥ ಗುಣಗಳಿಗಿರುವ ಆದ್ಯತೆ ಇತರ ಸಂಸ್ಕೃತಿಗಳಲ್ಲಿಲ್ಲ. ನಮ್ಮ ಸಂಸ್ಕೃತಿಯ ಹೆಣ್ಣಿನ ಸ್ವಭಾವ, ನಡವಳಿಕೆ, ನಿರ್ಬಂಧಗಳು ಇದೆ ನೆಲೆಯಿಂದ ಪ್ರೇರಿತವಾಗುತ್ತದೆ.

ಇವುಗಳನ್ನು ಮಹಿಳೆ ಶತಮಾನಗಳಿಂದ ಪರಿಪಾಲಿಸಿಕೊಂಡು ಬಂದಿದ್ದಾಳೆ. ಒಂದು ವೇಳೆ ಮೀರಿದರೆ ಸಮಾಜದಲ್ಲಿ ಅಂತಹ ಮಹಿಳೆಗೆ ಬದುಕುವ ಹಕ್ಕಿಲ್ಲ. ಅವಳನ್ನು ಬಹಿಷ್ಕರಿಸಲಾಗುತ್ತದೆ.

### ೨.೧. ನಂಬಿಕೆ

ಆಡುನುಡಿಗಳ ಅಧ್ಯಯನದಲ್ಲಿ ಭಾಷೆಯನ್ನು ಸಂದರ್ಭದಿಂದ (ಭಾಷಿಕ ಸಂದರ್ಭ) ಪ್ರತ್ಯೇಕಿಸಿ ನೋಡುವುದು ಸಾಧ್ಯವಾಗುವುದಿಲ್ಲ. ಒಂದು ಭಾಷೆಯನ್ನು ಆ ಭಾಷಿಕ ಸಮುದಾಯದ ಸಂಸ್ಕೃತಿಯ ಸಂದರ್ಭದಲ್ಲೇ ಅರ್ಥಮಾಡಿಕೊಳ್ಳಬೇಕಾಗುತ್ತದೆ. (ಲಿಂಗತಾರತಮ್ಯತೆಯಿಂದ) ಈ ಸ್ಥಿತ್ಯಂತರದಲ್ಲಿ ಸಾಮಾಜಿಕವಾಗಿ ಹಲವು ಬಗೆಯ ನೀತಿ–ನಿರ್ಬಂಧಗಳು ರೂಪಿಸಿಕೊಂಡಿವೆ. ಸಮಾಜದ ಹಲವು ನಿಯಮಗಳು, ನಂಬಿಕೆ, ನಿಷೇಧ, ಆಚರಣಾ ಸಂಗತಿಗಳು ಇತ್ಯಾದಿ ಅಂಶಗಳಲ್ಲಿ ಅಡಗಿಕೊಂಡಿವೆ. ಇವುಗಳು ಪೀಳಿಗೆಯಿಂದ ಪೀಳಿಗೆಗೆ ನಂಬಿಕೆಯ ರೂಪದಲ್ಲಿ ಮುಂದುವರೆಯುತ್ತವೆ. ಈ ನಂಬಿಕೆಗಳು ಅಥವಾ ಈ ನಿಯಮಗಳನ್ನು ನಾವು ಸಮಾಜದ ಭಾಗವಾಗಿರುವ ಭಾಷೆಯಲ್ಲಿ ಕಾಣಬಹುದು.

ಭಾಷೆಯೊಳಗೆ ಎಲ್ಲ ಅರ್ಥಗಳೂ ನಿಹಿತವಾಗಿರುವುದಿಲ್ಲ ಮತ್ತು ಭಾಷೆ ಅದನ್ನಾಡುವ ಭಾಷಿಕ ಸಮುದಾಯದ ಎಲ್ಲರಲ್ಲಿ ತಿಳುವಳಿಕೆಯ ರೂಪದಲ್ಲಿ ಇದ್ದರೂ, ಬಳಕೆಯ ಸಂದರ್ಭದಲ್ಲಿ ಅದು ಸದಾ ಒಂದೇ ರೂಪದಲ್ಲಿರುವುದಿಲ್ಲ. ಮಾತನಾಡುತ್ತಿರುವವರು ಯಾರು ಸಮಾಜದಲ್ಲಿ ಅವರ ಸ್ಥಾನವೇನು ಎಂಬುದರ ಜೊತೆಗೆ, ದೈನಂದಿನ ಚಟುವಟಿಕೆಗಳಲ್ಲಿ ಸಂದರ್ಭವೇ ಸಂಭಾಷಣೆಯಲ್ಲಿ ಭಾಗವಹಿಸುವವರ ಪಾತ್ರ, ಸ್ಥಾನವನ್ನು ನಿರ್ಧರಿಸುತ್ತದೆ. ಹೀಗಾಗಿ ಭಾಷೆಯನ್ನು ದೇಶ, ಕಾಲ ಸಂದರ್ಭಗಳಿಂದ ಬೇರ್ಪಡಿಸಿ ನೋಡುವುದು ಸಾಧ್ಯವಾಗುವುದಿಲ್ಲ.

ಸಮಾಜದ ಸದಸ್ಯರಾಗಿ ಮಹಿಳೆ ಪುರುಷರು ನಿರ್ವಹಿಸುವ, ಅನುಭವಿಸುವ ಕಾರ್ಯಗಳೆಲ್ಲವೂ, ಸಾಮಾಜಿಕ ನಿಯಮಗಳೆಲ್ಲವೂ ಧರ್ಮದ ತಳಹದಿಯಲ್ಲಿಯೇ ರೂಪುಗೊಂಡಿರುವಂತಹವು. ಅವು ಅಲಿಖಿತವಾಗಿವೆ. ವ್ಯಕ್ತಿಯಾಗಿ ಎಲ್ಲರೂ ಸ್ವತಂತ್ರರೆ. ಆದರೆ ಸಮಾಜದ ಸದಸ್ಯರಾಗಿ ಅವರು ಸ್ವತಂತ್ರವಾಗಿರಲಾರರು. ಮನುಷ್ಯರೂ ವ್ಯಕ್ತಿಗತವಾಗಿ ವರ್ತಿಸದಂತೆ ಸಮಾಜ ಅವರನ್ನು ನಿಯಂತ್ರಿಸುತ್ತಿರುತ್ತದೆ. ಹೀಗಾಗಿ ಸಮಾಜದಲ್ಲಿ ವ್ಯಕ್ತಿಗಿಂತ ಸದಸತ್ವವೆ ಪ್ರಮುಖ ಕ್ರಿಯೆಯಾಗಿ ನಿಲ್ಲುತ್ತದೆ. ಸಾಮಾಜಿಕ ಅಲಿಖಿತ ನಿಯಮಗಳು ಆ ಕಾರಣದಿಂದ ಪುರುಷರಿಗಿಂತ ಮಹಿಳಾ ಸಮುದಾಯದ ಮೇಲೆ ಹೆಚ್ಚಿನ ಒತ್ತಡಗಳನ್ನು ಹೇರುತ್ತಿವೆ.

ಹೆಣ್ಣು ತುಟಿ ಮೀರಿ ಮಾತನಾಡಬಾರದೆಂಬ ಅಂಕೆ–ಸಂಖ್ಯೆಯೊಳಗಿನ ಚೌಕಟ್ಟಿನೊಳಗೆ ಇರಬೇಕು. ಈ ಮೇರೆ ಮೀರಬಾರದೆಂಬ ಅಲಿಖಿತ ಸಾಮಾಜಿಕ ನಿಯಮ ಆಕೆಯನ್ನು ನಿಯಂತ್ರಿಸುತ್ತದೆ.

"ಹೆಣ್ಣು ಮಕ್ಕಳಿಗೆ ಅಭಿವ್ಯಕ್ತಿ ಅಷ್ಟು ಸಲೀಸಾಗಿರುವುದಿಲ್ಲ. ನಾವು ಅನುಭವಿಸಿ ನೋಡುವ ಅನೇಕ ಸಂಗತಿಗಳ ಬಗ್ಗೆ ಕ್ರಿಯೆಗಳ ಬಗ್ಗೆ ಮನಸ್ಸಲ್ಲಿ ಏನೆಲ್ಲಾ ಅಂದುಕೊಳ್ಳುತ್ತೇವೆ. ಆದರೆ ಅದನ್ನೆಲ್ಲಾ ಮಾತಿನಲ್ಲಿ ಬರಹದಲ್ಲಿ ಹೇಳಲು ಸಾಧ್ಯವಾಗದೆ ಒದ್ದಾಡುತ್ತೇವೆ.[೧]

ಸಮಾಜದಲ್ಲಿ ಹೆಣ್ಣಿನ ಬಗ್ಗೆ ಸುಕೋಮಲ ಸುಮಧುರ ಮೃದುಭಾಷಿಣೀ, ಮೃದು ಧ್ವನಿಯ, ಕೋಗಿಲೆಯ ಕಂಠವನ್ನು ಉಳ್ಳವಳು ಎನ್ನುವಂತಹ ನಂಬಿಕೆಗಳಿವೆ. ಅಭಿವ್ಯಕ್ತಿಯಲ್ಲಿ ಎಲ್ಲಿ ಗಡುಸು ಕಂಡಿತೊ, ಅಲ್ಲಿ ಸಭ್ಯತೆ ಮೀರಿದವಳು ಎಂದು ಭಾವಿಸಲಾಗುತ್ತದೆ. ಜನ ಏನೆಂದುಕೊಂಡಾರು ಎಂಬ ಭಯ ಆತಂಕ ಪಡುತ್ತಾರೆ. ಏಕೆಂದರೆ ಆಕೆ ನಿರ್ಭೀತಿಯಿಂದ ಮಾತನಾಡಿದರೆ ಸಮಾಜ ಅವಳನ್ನು ಕಾಣುವ ದೃಷ್ಟಿಕೋನ ಗುಮಾನಿಯಿಂದಲೋ, ತಿರಸ್ಕಾರದಿಂದಲೋ ನೋಡುತ್ತದೆ. ಗಂಡುಬೀರಿ ಎಂದು ಕರೆಯುತ್ತಾರೆ. ಈ ಬಗ್ಗೆ ಸಮಾಜದ ಮನೋಭಾವ ಅಥವಾ ನಂಬಿಕೆಗಳು ಮಹಿಳೆಯರ ಅಭಿವ್ಯಕ್ತಿಗೆ ತಡೆಯೊಡ್ಡುತ್ತವೆ. ಅಂದರೆ ಇಂದಿಗೂ ಈ ಪುರುಷ ಪ್ರಧಾನ ಸಮಾಜ ಹೆಣ್ಣಿನಿಂದ ಮೃದುವಾದ, ಸಿಹಿಯಾದ, ಯಾರ ಮನಸ್ಸಿಗೂ ಬೇಸರವಾಗದಂತ, ಆಘಾತ ನೀಡದಂತ ಹಿತ-ಮಿತ ಮಧುರ ನುಡಿಗಳಷ್ಟನ್ನೆ ಬಯಸಯತ್ತದೆ. ಮಹಿಳೆ ಮುಚ್ಚು ಮರೆಯಿಂದಲೆ ಬದುಕಬೇಕು. ಮಹಿಳೆ ಆದಷ್ಟು ಮುಚ್ಚಿದ ವ್ಯವಸ್ಥೆ ಒಳಗಡೆ ಇರಬೇಕು ಹಾಗೆ ಬದುಕಬೇಕು. ನಿರ್ಭಿತಿಯಿಂದ ಬದುಕವುದಿರಲಿ ನಿರ್ಭೀತಿಯಿಂದ ಮಾತನಾಡುವುದು ಕೂಡ ಈ ಸಮಾಜಕ್ಕೆ ಒಪ್ಪಿತವಾಗುವುದಿಲ್ಲ.

ಗಂಡಿಗೊಂದು ಶೀಲನ್ಯಾಯ, ಹೆಣ್ಣಿಗೊಂದು ಶೀಲದ ನೀತಿಯನ್ನು ರೂಪಿಸಲಾಗಿದೆ. ಈ ಸಮಾಜದಲ್ಲಿ ಮಹಿಳೆಯರಿಗೆ ನಿರ್ದಿಷ್ಟ ಪದಗಳನ್ನು ಬಳಸುವಂತೆ ಹೇಳಿದೆ. ಸಾಮಾನ್ಯವಾಗಿ ಮಹಿಳಾವಾದಿಗಳ ಅಭಿಪ್ರಾಯದಂತೆ ಸಾರ್ವಜನಿಕವಾಗಿ ಆಡುವ ಭಾಷೆಯನ್ನು ಗಂಡಸರೇ ರೂಪಿಸಿರುವುದರಿಂದ ಅದನ್ನು ಯಥಾವತ್ ಬಳಸಲು ಹೆಣ್ಣಿಗೆ ಕಷ್ಟವಾಗುತ್ತದೆ. "ಸಮುದಾಯದ ಸಾಮಾಜಿಕ ರಚನೆಗಳು, ಭಾಷೆಯ ಒಳಗೆ-ಮೇಲೆ ಇದ್ದೇ ಇರುತ್ತವೆ"[೨] "ಹೀಗಾಗಿ ಮಹಿಳೆಯರು ಗಂಡುರೂಪಿತ ಭಾಷೆಯನ್ನು ಬಳಸುವಾಗ ಭಾಷೆಯೊಂದಿಗೆ ಗುದ್ದಾಟ ನಡೆಸಬೇಕಾಗುತ್ತದೆ. ಜೊತೆಗೆ ಸಾರ್ವಜನಿಕವಾಗಿ ಭಾಷೆಯನ್ನು ಬಳಸಲು ಹೆಣ್ಣಿಗೆ ಅವಕಾಶವೆ ಸಿಗಲಿಲ್ಲ."[೩]

ಈ ಪುರುಷ ಕೇಂದ್ರಿತ ಆಲೋಚನಾ ಕ್ರಮಗಳನ್ನೇ ತಮ್ಮ ಆಲೋಚನೆ ಚಿಂತನೆಗಳೆಂದು ಹೆಣ್ಣುಮಕ್ಕಳು ಭಾವಿಸಿದ್ದಾರೆ. ಸಮಾಜ ಕಟ್ಟಿಕೊಟ್ಟಿರುವ ನಿರೂಪಣೆಗಳೆ ಬಹುಪಾಲು ಸತ್ಯ. ಇದನ್ನು ಮಹಿಳೆಯರು ತಮ್ಮ ಬಹುಪಾಲು ಬದುಕಿನಲ್ಲಿ ಒಪ್ಪಿಕೊಂಡಿದ್ದಾರೆ. ಆದರೆ ಈ ಆಲೋಚನಾ ಕ್ರಮಗಳಾಚೆ ಹೆಣ್ಣು ತನ್ನ ಅಸ್ಮಿತೆಯನ್ನು ಹುಡುಕಿಕೊಂಡು ಅಭಿವ್ಯಕ್ತಿಸಲು ಹೊರಟಾಗ ಹಲವಾರು ಅಪವಾದಗಳಿಗೆ ಗುರಿಯಾಗುತ್ತಾಳೆ. ಗಂಡುಬೀರಿ, ಬಜಾರಿ ಎಂತಲೂ ಪದಗಳನ್ನು ಬಳಸುವುದಿಲ್ಲವೆ? 'ಇಂದಿರಾ ಗಾಂಧಿಯವರ ಸಚಿವ ಸಂಪುಟದಲ್ಲಿ ಅವರೊಬ್ಬರೆ ಗಂಡಸರು' ಎನ್ನುವ ಮಾತು

ಎಷ್ಟು ಸಲ ಕೇಳಿಲ್ಲ. ಕನ್ನಡ ಟಿ.ವಿ ಚಾನೆಲ್‌ಗಳ ಅಪರಾಧಿ ಸುದ್ಧಿ ಆಧಾರಿತ ಕಾರ್ಯಕ್ರಮ ನಿರೂಪಕಿಯರ ಭಾಷೆ ಕೇಳಿ ಜನ ವಿಸ್ಮಯಗೊಳ್ಳುತ್ತಾರೆ. ಅಪರಾಧಿ ಸುದ್ಧಿ ನಿರೂಪಕಿಯನ್ನು ಸಂದರ್ಶಿಸುವಾಗ ಕೇಳುವ ಪ್ರಶ್ನೆಗಳು ಗಮನಿಸಿದರೆ ಇನ್ನೂ ಸ್ಪಷ್ಟವಾಗುತ್ತೆ ಪ್ರಶ್ನೆ–೨ ಹೆಣ್ಮಕ್ಕಳೂ ಅಂದ್ರೆ ಅಡುಗೆ ಕಾರ್ಯಕ್ರಮಕ್ಕೊ ಆರೋಗ್ಯದ ಚರ್ಚೆಗೊ ಸೀಮಿತ ಅಂತಾರೆ... ನೀವು ಕ್ರೈಮ್ ಸುದ್ದಿಗಳನ್ನೇ ಹೇಳುತ್ತೀರಲ್ಲ.

ಪ್ರಶ್ನೆ–೩ ಅಷೊಂದು ಖಡಕ್ಕಾಗಿ ಅಪರಾಧಿಗಳ ಬಗ್ಗೆ ಮಾತಾಡುವ ಭಾಗ್ಯಶ್ರೀ ರಿಯಲ್ ಲೈಫಿನಲ್ಲಿ ಹೇಗಿರ್ತಾರೇ? '(ಶ....! ಯಾರಿಗೂ ಹೇಳ್ಬೇಡಿ....' ಉದಯವಾಣಿಯ ಅವಳು ಪುರವಾಣಿ 'ಹೇಳಿ ಕೇಳಿ ಇಂಟ್ರವ್ಯೂ ಸೀರಿಯಲ್' ಉಷಾ ಜಿ.ಎಸ್)

ಸಾಮಾಜಿಕವಾಗಿ ಮುಖ್ಯವೆನಿಸುವ ಮಾನ್ಯವೆನಿಸುವ ಎಲ್ಲಾ ಸಂದರ್ಭಗಳಲ್ಲೂ ಗಂಡಸರೆ ಪ್ರಧಾನ ಪಾತ್ರದಾರಿಗಳು. ಆಚರಣೆಗಳು, ಕಾನೂನು, ರಾಜಕೀಯ ವ್ಯಾಖ್ಯಾನ, ಶಿಕ್ಷಣ, ಕ್ರೀಡೆ, ಕಾವ್ಯ ಸಾಹಿತ್ಯಗಳಂತಹ ವಲಯಗಳಲ್ಲಿ ಗಂಡಸರೇ ಇದ್ದಾರೆ. ಅವರಷ್ಟೇ ಮಾತನಾಡುತ್ತಿದ್ದಾರೆ, ವ್ಯವಸ್ಥೆಯೂ ಗಂಡಸರದೇ ಹಾಗಾಗಿ ಅವರ ಮಾತುಕತೆಗಳು ಅಧಿಕೃತವಾಗುತ್ತವೆ. ಈ ವಲಯಗಳಲ್ಲಿನ ಎಲ್ಲಾ ಗಂಡು ಭಾಷಾ ಚಟುವಟಿಕೆಗಳು ಗಂಭೀರವೆನಿಸುತ್ತವೆ.

ಯಜಮಾನ ನೆಲೆಗೆ ಅಧೀನ ನೆಲೆಯಲ್ಲಿ ಇವರ ಮೇಲೆ ಅಧಿಕಾರಗಳನ್ನು ಸಾಧಿಸುತ್ತಾರೆ. ಅಧೀನ ನೆಲೆಯಲ್ಲಿ ಇರುವವರು ಈ ಮನೋಭಾವವನ್ನು ಮೀರಲು ತನ್ನದೆ ಪ್ರಯತ್ನಗಳನ್ನು ನಡೆಸುತ್ತಲೆ ಇರುತ್ತದೆ. 'ಗಂಡು ಹೆಣ್ಣುಗಳ ಯಜಮಾನ ಅಧೀನ ಸಂಬಂಧಗಳು ಅವರ ಭಾಷಾ ಚಟುವಟಿಕೆಗಳಿಗೂ ವಿಸ್ತರಿಸಿಬಿಡುತ್ತವೆ."

ಸಮಾಜದಲ್ಲಿ ಮಹಿಳೆ ಮತ್ತು ಪುರುಷ ಇಬ್ಬರಿಗೂ ಸಾಂಪ್ರದಾಯಿಕ ಲಿಂಗತ್ವದ ಪಾತ್ರದ ಅಪರಿಮರ್ಥಿತ ನಂಬಿಕೆಗಳು ಸೂಕ್ಷ್ಮವಾಗಿವೆ. ಲಿಂಗಾಧಾರಿತ ಪಾತ್ರಗಳ ಬಗ್ಗೆ ರೂಢಿಯಲ್ಲಿರುವ ನಂಬಿಕೆಗಳು ಕೆಳಗಿನಂತೆ ಪಟ್ಟಿ ಮಾಡಬಹುದು.

*ಮಹಿಳೆಯರ ಬಗ್ಗೆ ಹೆಚ್ಚಾಗಿ ಇರುವ ನಂಬಿಕೆಗಳು*

- *ಆಕ್ರಮಣ ಶೀಲತೆ ಇಲ್ಲದವಳು*
- *ಹೆಚ್ಚಾಗಿ ಅವಲಂಬಿತಳು*
- *ಭಾವುಕತೆಯನ್ನು ಮುಚ್ಚಿಡಲಾರದವರು.*
- *ವ್ಯಕ್ತಿ ಮನೋಗತವುಳ್ಳವರು*
- *ಸುಲಭವಾಗಿ ಪ್ರಭಾವಕ್ಕೊಳಗಾಗುವವರು.*

- ಅಧೀನಕ್ಕೊಳಗಾಗುವವರು.
- ಗಣಿತ, ವಿಜ್ಞಾನವನ್ನು ಇಷ್ಟಪಡದವರು
- ಇಂದು ಸಣ್ಣ ಸಮಸ್ಯೆಗೂ ಉದ್ವೇಗಕ್ಕೊಳಗಾಗುವವರು
- ಹೆಚ್ಚಾಗಿ ನಿಷ್ಕ್ರಿಯರು
- ಸಹಕಾರ ಮನೋಭಾವದವರು
- ತರ್ಕಬದ್ಧವಾಗಿ ಮಾತನಾಡದವರು
- ಗೃಹಕೇಂದ್ರಿತರು
- ಸುತ್ತುಬಳಸಿ ಅಧೀನಕ್ಕೊಳಪಡಿಸಿಕೊಳ್ಳುವರು
- ಮನೋವೇದನೆಗೆ ಸುಲಭವಾಗಿ ತುತ್ತಾಗುವವರು
- ಸಾಹಸ ಪ್ರವೃತ್ತಿ ಇಲ್ಲದವರು
- ನಿರ್ಧಾರ ಮಾಡುವಲ್ಲಿ ಕಷ್ಟ ಪಡುವವರು
- ಅಪರೂಪವಾಗಿ ನಾಯಕತ್ವ ವಹಿಸುವವರು
- ಆತ್ಮಾಭಿಮಾನ ಕಡಿಮೆ ಇರುವವರು
- ಸಾಮಾನ್ಯವಾಗಿ ಅಳುವವರು
- ಆಕ್ರಮಣ ಮನೋಭಾವನೆಯಲ್ಲಿ ವ್ಯಥೆಪಡುವವರು
- ಮಹತ್ವಾಕಾಂಕ್ಷೆ ಇಲ್ಲದವರು
- ಆಲೋಚನೆಗಳ ಭಾವನೆಗಳನ್ನು ಸುಲಭವಾಗಿ ಬೇರ್ಪಡಿಸಲಾಗದವರು
- ತಮ್ಮ ರೂಪದ ಬಗ್ಗೆ ಜಂಬವುಳ್ಳವರು
- ಲೈಂಗಿಕತೆ ಬಗ್ಗೆ ಮುಕ್ತವಾಗಿ ಮಾತನಾಡದವರು
- ಕಠಿಣ ಭಾಷೆಯನ್ನು ಬಳಸದವರು
- ಬಹುವಾಚಾಳಿಗರು
- ಸಮಯಕ್ಕೆ ತಕ್ಕಂತೆ ನಡೆಯುವವರು
- ಸೌಮ್ಯತೆಯುಳ್ಳವರು
- ಇತರರ ಭಾವನೆಗಳನ್ನು ತಿಳಿಯುವವರು
- ಧರ್ಮ ಪ್ರವೃತ್ತಿಯುಳ್ಳವರು
- ಕೆಲಸವನ್ನು ಅಚ್ಚುಕಟ್ಟಾಗಿ ಮಾಡುವುದು
- ಮಹತ್ವಾಕಾಂಕ್ಷೆ ಇಲ್ಲದವರು
- ಸುಭದ್ರತೆಯ ಅಗತ್ಯತೆ ಹೆಚ್ಚಾಗಿ ಇರುವವರು

- ವಾತ್ಸಲ್ಯವನ್ನು ಸುಲಭವಾಗಿ ತೋರುವವರು
- ಕಲೆ ಮತ್ತು ಸಾಹಿತ್ಯವನ್ನು ಸಂತೋಷದಿಂದ ಅನುಭವಿಸುವವರು

**ಗಂಡಿನ ಬಗ್ಗೆ ಹೆಚ್ಚಾಗಿ ಇರುವ ನಂಬಿಕೆಗಳು**

- ಆಕ್ರಮಣಕಾರಿ ಪ್ರವೃತ್ತಿಯುಳ್ಳವನು
- ಬಹು ಸ್ವಾವಲಂಬಿಗರು
- ಭಾವುಕತೆ ಇಲ್ಲದವನು (ಕೋಪವನ್ನು ಬಿಟ್ಟು)
- ಯಾವಾಗಲೂ ಭಾವುಕತೆಯನ್ನು ಮುಚ್ಚಿಡುವವರು(ಕೋಪವನ್ನು ಬಿಟ್ಟು)
- ವಾಸ್ತವಿಕತೆ ಮನೋಭಾವವುಳ್ಳವರು
- ಸುಲಭವಾಗಿ ಪ್ರಭಾವಕ್ಕೊಳಗಾಗದವರು
- ಅಧೀನಕ್ಕೊಳಪಡಿಸುವವರು
- ಗಣಿತ, ವಿಜ್ಞಾನ ವಿಚಾರದಲ್ಲಿ ಪರಿಣಿತರು
- ಸ್ಪರ್ಧಾತ್ಮಕ ಮನೋಭಾವದವರು
- ತರ್ಕಬದ್ಧವಾಗಿ ವಾದಿಸುವವರು
- ಪ್ರಾಪಂಚಿಕವಾಗಿ ವ್ಯವಹರಿಸಬಲ್ಲವರು, ವ್ಯಾಪಾರ ವ್ಯವಹರಿಸಬಲ್ಲವರು
- ವ್ಯಾಪಾರ ವ್ಯವಹಾರದಲ್ಲಿ ನಿಪುಣರು
- ನೇರವಾಗಿ ಹೇಳುವವರು
- ಪ್ರಪಂಚದಲ್ಲಿ ಆಗುತ್ತಿರುವ ಘಟನೆಗಳನ್ನು ತಿಳಿದವರು
- ಯಾವುದೇ ವಿಚಾರವನ್ನು ವೈಯಕ್ತಿಕವಾಗಿ ಪರಿಗಣಿಸದವರು
- ಬಹು ಸಾಹಸ ಪ್ರವೃತ್ತಿಉಳ್ಳವರು
- ಸುಲಭವಾಗಿ ನಿರ್ಧಾರ ಮಾಡುವವರು
- ಯಾವಾಗಲೂ ನಾಯಕತ್ವ ವಹಿಸುವರು
- ಬಹು ಆತ್ಮಾಭಿಮಾನಿಗಳು
- ಅಳದೆ ಇರುವವರು
- ಆಕ್ರಮಣ ಮನೋಭಾವನೆಯಲ್ಲಿ ನೆಮ್ಮದಿ ಪಡುವವರು
- ಬಹು ಮಹತ್ವಾಕಾಂಕ್ಷಿಗಳು
- ಆಲೋಚನೆಗಳಿಂದ ಭಾವನೆಗಳನ್ನು ಸುಲಭವಾಗಿ ಬೇರ್ಪಡಿಸಿದವರು
- ತಮ್ಮ ರೂಪದ ಬಗ್ಗೆ ಆಸಕ್ತಿ ಇಲ್ಲದವರು
- ಲೈಂಗಿಕತೆ ಬಗ್ಗೆ ಮುಕ್ತವಾಗಿ ಮಾತನಾಡಬಲ್ಲರು

- *ಕಠಿಣ ಭಾಷೆ ಬಳಸುವವರು*
- *ವಾಚಾಳಿಗರಲ್ಲ*
- *ನಿರ್ದಾಕ್ಷಿಣ್ಯವಾಗಿ ಪ್ರತಿಕ್ರಿಯಿಸಬಲ್ಲರು*
- *ಒರಟರು*
- *ಇತರರ ಭಾವನೆಗಳ ಬಗ್ಗೆ ತಿಳಿಯದವರು*
- *ಧರ್ಮಪ್ರವೃತ್ತಿ ಇಲ್ಲದವರು*
- *ಕೆಲಸದಲ್ಲಿ ಅಚ್ಚುಕಟ್ಟಿಲ್ಲದವರು*
- *ಬಹು ಮಹತ್ವಾಕಾಂಕ್ಷಿಗಳು*
- *ಸುಭದ್ರತೆಯ ಅಗತ್ಯ ಸ್ವಲ್ಪಬೇಕಾದವರು*
- *ವಾತ್ಸಲ್ಯವನ್ನು ಸುಲಭವಾಗಿ ತೋರದವರು*
- *ಕಲೆ ಅಥವಾ ಸಾಹಿತ್ಯವನ್ನು ಮೆಚ್ಚದವರು*

ಈ ಬಗೆಯ ನಂಬಿಕೆಗಳು ಸಮಾಜದಲ್ಲಿ ಪ್ರಚಲಿತದಲ್ಲಿವೆ. ಈ ನಂಬಿಕೆಗಳು ಒಂದು ಬಗೆಯಲ್ಲಿ ಸಾಮಾಜಿಕ ಮನೋಧರ್ಮಗಳು. ಭಾಷೆಯ ಒಳಗಡೆ ಇವು ಅಡಕವಾಗಿವೆ. ಇವುಗಳನ್ನು ಗುರುತಿಸುತ್ತ ಹೋದಾಗ ಗೋಚರಿಸುತ್ತವೆ. ಹೆಣ್ಣು ಗಂಡು ನಡುವಿನ ಸಮಾಜದಲ್ಲಿಯ ನಂಬಿಕೆಗಳು ಸಾಮಾಜಿಕ ಸಂರಚನೆಗಳಲ್ಲಿ ಗಮನಿಸಬಹುದು.

ಜನಪದರು ನಿರ್ಮಿಸಿಕೊಂಡಿರುವಂತಹ ಗಾದೆಗಳು, ಒಡಪು, ಒಗಟು, ಜನಪದ ಕಥೆಗಳು ಹೀಗೆ ಹಲವು ನಿರ್ವಚನಗಳಲ್ಲಿ ಈ ಬಗೆಯ ನಂಬಿಕೆಗಳು ಕಂಡುಬಂದಿವೆ. ಈ ನಿರ್ವಚನಗಳು ಪ್ರತಿಹಂತದಲ್ಲಿ ಹೆಣ್ಣು ಗಂಡು ಇಬ್ಬರನ್ನು ನಿರ್ದೇಶಿಸುತ್ತಿರುತ್ತವೆ.

ಸಮಾಜ ಮಹಿಳೆಯನ್ನು ನೋಡುವ ದೃಷ್ಟಿಕೋನಗಳನ್ನು ಅಥವಾ ಮಹಿಳೆಗಾಗಿ ನೀಡಿರುವ ಆದರ್ಶ ಕಲ್ಪನೆ, ನಿರ್ಬಂಧಗಳನ್ನು ಸಮಾಜ ರೂಪಿಸಿರುವ ಕೆಲವು ನಿರೂಪಣೆಗಳಲ್ಲಿ ಕಂಡುಬರುತ್ತದೆ. ಗಾದೆಮಾತು, ಒಗಟುಗಳು ಹೆಣ್ಣಿನ ಬಗ್ಗೆ ಒಳ್ಳೆಯ ಮಾತನ್ನೆ ಹೇಳಲಿ ಕೆಟ್ಟ ಮಾತನ್ನೆ ಹೇಳಲಿ ಅವು ಅಂತಿಮವಾಗಿ ಧ್ವನಿಸುವ ಅರ್ಥಮಾತ್ರ ಒಂದೆ. ಸಮಾಜ ಹೆಣ್ಣಿನ ವಿಷಯದಲ್ಲಿ ನಿರೂಪಿಸಿರುವ ಕಟ್ಟುಪಾಡು, ಮೌಲ್ಯ ಆದರ್ಶಗಳ ಪರಿಕಲ್ಪನೆಯಲ್ಲೇ ಹೆಣ್ಣಿನ ವ್ಯಕ್ತಿತ್ವ ರೂಪುಗೊಂಡಿರುತ್ತದೆ.

ಗಾದೆಗಳಲ್ಲಿ ಗಮನಿಸಬೇಕಾದ ಒಂದು ಮುಖ್ಯ ಅಂಶವೆಂದರೆ ಸಮಾಜ ರೂಪಿಸಿರುವ ಇತರ ಪ್ರಕಾರದ ನಿರೂಪಣೆ ಕಥೆ ಮತ್ತು ಗೀತೆಗಳಲ್ಲಿರುವುದಕ್ಕಿಂತ ಹೆಚ್ಚಿನ ಸಾಂಸ್ಕೃತಿಕ ಮುಕ್ತತೆ ಇಲ್ಲಿದೆ. ಕಥೆ ಮತ್ತು ಗೀತೆಗಳಲ್ಲಿ ಯಾವ ಅಂಶವನ್ನು ಸಾಂಸ್ಕೃತಿಕ ಕಾರಣಕ್ಕಾಗಿ ಹೇಳಲಿಕ್ಕೆ ಹಿಂಜರಿಯಲಾಗುತ್ತದೋ ಅಂತಹ ಹಿಂಜರಿಕೆ ಇಲ್ಲಿ ಅಷ್ಟಾಗಿರುವುದಿಲ್ಲ. ಏಕೆಂದರೆ ಗೀತೆಗಳೂ

ಮತ್ತು ಅದರಲ್ಲಿಯೇ ವಿಶೇಷವಾಗಿ ಕಥೆಗಳು ಇನ್ನೊಬ್ಬರು ಕೇಳಲೆಂದೇ ನಿರೂಪಿತವಾಗಿರುವವು. ಅಂದರೆ ಇನ್ನೊಬ್ಬರು ಕೇಳುತ್ತಾರೆ, ಕೇಳಬೇಕು ಎಂಬ ಕಾರಣದಿಂದ ಕೆಲವು ವಿವರಗಳನ್ನು ಬೇಕೆಂತಲೆ ಬಿಟ್ಟುಬಿಡುವ ಬೇಕೆಂತಲೆ ಸೇರಿಸುವ ಅಥವಾ ತಿರಿಚುವ ಪ್ರಕ್ರಿಯೆ ಇಲ್ಲಿ ನಡೆಯುತ್ತದೆ. ಆದರೆ ಗಾದೆಗಳಲ್ಲಿ ಇಂತಹ ನಿಯಂತ್ರಣವಿಲ್ಲ. ಏಕೆಂದರೆ ಗಾದೆಗಳು ಭಾಷೆ ಅಥವಾ ಸಂಭಾಷಣೆಯಲ್ಲಿ ಸಹಜವಾಗಿ ಸೇರಿಬರುವ ಭಾಷಾ ರೂಪಗಳೆ ಹೊರತು ಭಾಷೆಯಿಂದ ಭಿನ್ನವಾದ ಸಾಹಿತ್ಯಿಕ ರೂಪಗಳಲ್ಲಿ ಗಾದೆಗಳಲ್ಲಿ ಸಾಹಿತ್ಯಿಕ ಅಂಶವಿರಬಹುದಾದರೂ ಸಾಹಿತ್ಯವೇ ಅದರ ಉದ್ದೇಶವಲ್ಲ. ಯಾರಾದರೊಬ್ಬರು ಕುಳಿತುಕೊಂಡು ಈಗ ಒಂದಿಷ್ಟು ಕಥೆ ಹೇಳುತ್ತೇನೆ ಹಾಗೂ ಈಗ ಒಂದಿಷ್ಟು ಗಾದೆ ಹೇಳುತ್ತೇನೆ ಎಂದು ಹೇಳಲು ಬರುವುದಿಲ್ಲ. ಹೀಗಾಗಿ ಗಾದೆಗಳಲ್ಲಿ ಒಂದು ರೀತಿಯ ಹಸಿತನ ರೋಚಕಗಳು ಇವೆ. ಸಂಸ್ಕರಣ ಹಿತವಾದ ಕಾರಣದಿಂದಲೇ ಒಂದು ಸಂಸ್ಕೃತಿಯ ಬಗ್ಗೆ ಗಾದೆಗಳು ಚೆಲ್ಲುವ ಬೆಳಕು ಹೆಚ್ಚು ನೈಜವೆನಿಸಲೂಬಹುದು. ಈ ಹಿನ್ನೆಲೆಯಲ್ಲಿ ಗಾದೆಗಳಲ್ಲಿ ಹೆಣ್ಣು ಹೇಗೆ ಪ್ರತಿಬಿಂಬಿಸಿದ್ದಾಳೆ ಎಂದು ನೋಡಬೇಕು. ಕೆಲವು ಗಾದೆಗಳು ಸಂಸ್ಕೃತಿ ನಿರ್ಮಿತ ಮೌಲ್ಯಗಳನ್ನು ನೇರವಾಗಿ ಇಲ್ಲವೇ ಪರೋಕ್ಷವಾಗಿ ಪುಷ್ಟೀಕರಿಸುವ ಕೆಲಸ ಮಾಡಿದರೆ ಇನ್ನು ಕೆಲವು ಗಾದೆಗಳೂ ಈ ನಿಯಂತ್ರಣದಿಂದ ಮುಕ್ತವಾಗಿವೆ. ಹೀಗಾಗಿ ಬಹುತೇಕ ಗಾದೆಗಳೂ ಹೆಣ್ಣಿನ ಬಗ್ಗೆ ಪುರುಷ ಪ್ರಧಾನ ಸಮಾಜದ ದೃಷ್ಟಿಕೋನವನ್ನೆ ಪ್ರತಿಪಾದಿಸುತ್ತವೆ.

ಉದಾ: "ಅಂಕೇಲಿಲ್ಲದ ಹೆಣ್ಣು ಕೆಡ್ತು

ಮಜ್ಜಿಗೇಲಿಲ್ಲದ ಬೆಣ್ಣೆ ಕೆಡ್ತು"

"ಅಣ್ಣೇ ಹಚ್ಚಿದ ಹೊಲ ಹಾಳು

ಹೆಣ್ಣು ಹಚ್ಚಿದ ಮನೆಹಾಳು"

"ಹೆಣ್ಣಿಗೆ ಹಿಡಿತ

ಹಿಟ್ಟಿಗೆ ಜಡಿತ"

"ಮಾತ್ಗಿತ್ತಿ ಮಗಳಲ್ಲ ತಾಟ್ಗಿತ್ತಿ ಸೊಸೆಯಲ್ಲ"

ಹೆಣ್ಣಿನ ಬಗ್ಗೆ ಈ ಸಮಾಜದಲ್ಲಿ ಸದಾ ಒಂದು ಹೀನಾಯವಾದ ದೃಷ್ಟಿ ಇದೆ. ಕಟ್ಟುಪಾಡುಗಳ ಮಿತಿಯಿಂದ–ಹೆಣ್ಣು ಸ್ವಲ್ಪ ಆಚೀಚೆ ಸರಿದಾಡಿದರೂ ಅವಳ ನಡವಳಿಕೆಯನ್ನು ವ್ಯಂಗ್ಯದ ಈಟಿ ತಿವಿಯುತ್ತದೆ.

ಉದಾ : " ಒಡ್ಡೊಗೂ ಬಡ್ಡಿ ಹಾಲಿಗೆ ಹೆಪ್ಪಾಕುಳೆ

ಮೀಸ್ಲು ತಿಂದೋಳು ಸೂಸ್ಲು ಬಿಟ್ಟಾಳೆ"

"ವಾಲೆ ಇದ್ದೋಳು ವಾಲೆ ಇಕ್ಕೊಂಡ್ರೆ

ವಾಲೆ ಇಲ್ಲೋಳೂ ಕಿವಿಕಿತ್ಕಂಡ್ಳು"

ಕೆಲವು ಗಾದೆಗಳು ಕೌಟುಂಬಿಕ, ಸಾಮಾಜಿಕ, ಸಾಂಸ್ಕೃತಿಕ ಕಟ್ಟುಪಾಡುಗಳ ಮಿತಿಯಲ್ಲಿ ಬದುಕಬೇಕಾಗಿರುವ ಹೆಣ್ಣಿನ ದೀನಾವಸ್ಥೆಗೆ ಕನ್ನಡಿ ಹಿಡಿಯುತ್ತವೆ.

"ಒಳ್ಳೇದು ಉಣಲಿಲ್ಲಾ ಬೆಳ್ಳಂದು ಹೊಂದಲಿಲ್ಲಾ"

"ಅಟ್ಟಲಾರ್ದೋಳೀಗೆ ವಾಲೆ ಇಕ್ಕೊಂಡ್ರೆ

ವಾಲೆ ಇಲ್ದೋಳ ಕಿವಿ ಕಿತ್ಕಂಡ್ಳು"

"ಸೂಸೆ ಸತ್ರೆ ಸೋಬಾನ

ಮಗ ಸತ್ರೆ ಮನೆಯಾಳು"

"ಬಾಳುವಾಗ ಬದುಕುವಾಗೆಲ್ಲ ಸೂಳೆ ಮನೇಲಿ

ಸಾಯುವಾಗ ನನ್ನ ಗಂಡ ಕರಸ್ಕಂಡ"

ಒಗಟುಗಳಲ್ಲಿ ಯಾವುದೇ ವಿಷಯದ ಅಸಂಗತ ಕಲ್ಪನೆಗಳೆ ಮುಖ್ಯವಾದ್ದರಿಂದ ಅವುಗಳನ್ನು ವಾಚ್ಯಾರ್ಥದಲ್ಲಿ ಗ್ರಹಿಸಿ ಅರ್ಥೈಸುವುದು ಸರಿಯಾಗುವುದಿಲ್ಲ. ಆದಾಗ್ಯೂ ಇಂತಹ ಅಸಂಗತ ಕಲ್ಪನೆಗಳಲ್ಲಿಯೂ ಸಾಂಸ್ಕೃತಿಕ ಪ್ರಭಾವಗಳು ಇದ್ದೇ ಇರುತ್ತವೆ. ಈ ದೃಷ್ಟಿಯಿಂದ ಹೆಣ್ಣಿನ ಬಗ್ಗೆ ಪರಂಪರಾಗತವಾಗಿ ಬಂದಿರುವ ಗ್ರಹಿಕೆಗಳು ಪ್ರಭಾವ ಬೀರಿರುವುದನ್ನು ಒಗಟುಗಳಲ್ಲಿಯೂ ಗುರುತಿಸಬಹುದು. ಮುಖ್ಯವಾಗಿ ಹೆಣ್ಣಿನ ಸೌಂದರ್ಯ ಹಾಗೂ ಶೀಲಗಳಿಗೆ ಸಂಬಂಧಿಸಿದ ವಿವರಗಳೇ ಒಗಟುಗಳ ಕಲ್ಪನೆಗೆ ವಸ್ತು ಇದಕ್ಕೆ ಉದಾಹರಣೆಯಾಗಿ

"ನಡು ಸಣ್ಣಾನಾಗರ ಬಣ್ಣಾ

ಹಿಡಿಯಾಕ ಹೋದ್ರ ಕಡಿಯಾಕ ಬರ್ತಾಳ"(ಕಡಜೀರಗಿ ಹುಳ)

"ಚೋಟುದ್ದ ಹುಡುಗಿಗೆ ಮಾರುದ್ದ ಜಡೆ "(ಸೂಜಿ ದಾರ)

"ಬಣ್ಣದ ಸೀರಿ ಉಟಕೊಂಡು ಮಣ್ಣಾಗ ಕುಂತುಳ" (ಗಜ್ಜರಿ)

ಈ ಒಗಟುಗಳನ್ನು ನೋಡಬಹುದು.

ಹೆಣ್ಣಿನ ಶೀಲದ ಪ್ರಶ್ನೆ ತುಂಬ ನಾಜೂಕಿನದು. ಅದು ಸ್ವಲ್ಪ ಏರುಪೇರಾದರೂ ಆಕೆ ಹಾಸ್ಯದ ವಸ್ತುವಾಗುತ್ತಾಳೆ. ಈ ಅಂಶವನ್ನು ಸಮಾಜ ಬಳಸುವ ನಿರೂಪಣೆಗಳು (ಒಗಟುಗಳು)

ಸಿಗುತ್ತವೆ. ಒಂದು ಗುಂಪಿನ ಒಗಟುಗಳು ಹೆಣ್ಣಿನ ಶೀಲ ಕುರಿತಾದ ಅಸಂಗತ ಕಲ್ಪನೆಗಳ ಮೂಲಕ ಕುತೂಹಲ ಕೆರಳಿಸಿದರೆ ಇನ್ನೊಂದು ಗುಂಪಿನಲ್ಲಿ ಹಾಸ್ಯದ ವ್ಯಂಜನೆಗಾಗಿ ಹೆಣ್ಣನ್ನು ಅಶ್ಲೀಲತೆಯ ಪ್ರತೀಕವಾಗಿ ಬಳಸಿಕೊಳ್ಳಲಾಗಿದೆ. ಮೊದಲನೆಯ ಗುಂಪಿಗೆ ಉದಾ:

"ಕರಿಸೀರಿ ಗರತಿ

ಗಿಡದ ಮ್ಯಾಲಿರತಿ

ಕರೆದರ ಬರತಿ"(ನೇರಳೆ ಹಣ್ಣು)

"ಒಂದೆ ಮಾತಾಗಿ ಹನ್ನೆರಡು ನೆರಿಗಾಗಿ

ಗಂಡಿಲ್ದೆ ಅವಳೂ ಬಸುರಾಗಿ

ಬಸುರಾದಂಥ ಪದನವ ನೀ ಬಲ್ಲಂತ ಜಾಣ ವಡಚಿಹೇಳೂ" (ತಾಳೆಗರಿ)

"ಗಿಡ್ಡಿ ಗುದ್ದಿದರೆ ಮನಿ ತುಂಬಾಮಕ್ಕಳು"(ಬೆಳ್ಳುಳ್ಳಿ)

"ತಳ್ಳೂರು ಗೌಡನ ಹೆಣ್ತಿ

ತೊಡೆಲಿ ಬಸುರಾಗಾಳೆ"(ಅಡಕೆ ಹೊಂಬಾಳೆ)

"ಸೋಗಿನ ಹೆಣ್ಣಿಗೆ ಒಂದು  ಕಣ್ಣು" (ಸೂಜಿ)

**ಎರಡನೆಯ ಗುಂಪಿಗೆ ಉದಾಹರಣೆ**

"ಒಬ್ಬನ್ನ ಕಟ್ಟಿದ್ದೆ ಒಬ್ಬನ್ನ ಬಿಟ್ಟಿದ್ದೆ

ಒಬ್ಬನ್ನ ಕರಕೊಂಡು ಒಳಗ್ಹೋದೆ ಮಲ್ಲಿಗೆ"(ಹಸು, ಕರು, ಹಾಲು)

"ಅರ್ಧ ಹೊಕ್ಕಾಗ ಅಳತಾಳ

ಪೂರಾ ಹೋಕ್ಕಾಗ ನಗತಾಳ (ಬಳೆಗಾರ ಬಳೆತೊಡಿಸುವ ಕ್ರಿಯೆ)

"ತೆಗ್ಗಿನಾಗ ಕುಂತು ಎದ್ದೆದ್ದು ನೋಡ್ತಾನ (ಬಲೆ ಉರಿ)

ಒಟ್ಟಿನಲ್ಲಿ ಅಶ್ಲೀಲತೆಯನ್ನುವುದು ಅಭಿವ್ಯಕ್ತಿಗೆ ಮಾಧ್ಯಮವಾದ ಭಾಷೆಯಲ್ಲಿಲ್ಲವೆಂಬುದು ತೀರ ಮಹತ್ವದ ಸಂಗತಿಯಾಗಿದೆ. ಉದಾ: ೧. ಅಪ್ಪ ಹಾಕ್ತಾನ, ಅವ್ವ ಹೊಯ್ಕೋತಾಳ್(ಕಚ್ಚೆ, ನಿರಿಗೆ) ೨. ಕುಬಸಾಕಳಿ, ಒಳಗ ನಡಿ(ಬಾಳೇಹಣ್ಣು)

ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಹೆಣ್ಣು ತನ್ನ ಮಕ್ಕಳ ಜನನದ ನಂತರ ಹೆಚ್ಚು ಕಾಲ ಮನೆಯಲ್ಲೇ ಇರಬೇಕಾದುದು ನಿಯಮವಾಗಿ ಮಾರ್ಪಟ್ಟಿತ್ತು. ಯಜಮಾನ ವ್ಯವಸ್ಥೆಯ ಅನೇಕ

ವಿಧಿ ನಿಷೇಧಗಳು ಆಕೆಯ ಅಭಿವ್ಯಕ್ತಿಯನ್ನು ನಿಯಂತ್ರಿಸತೊಡಗಿದವು. ಅವಳ ಶೀಲ ರಕ್ಷಣೆ, ಹೊರ ಬದುಕಿನಲ್ಲಿ ಅಭದ್ರತೆಯ ಅಭಿಪ್ರಾಯಗಳಿಂದ ರಕ್ಷಿಸಲು ಮನೆಯೊಳಗೆ ಉಳಿಸುವ ಹುನ್ನಾರವು ನಡೆಯಿತು. ಕ್ರಮೇಣ ಈ ಸಾಮಾಜಿಕ ನಿರ್ಬಂಧಕ್ಕೊಳಪಟ್ಟು ಹೆಣ್ಣು ನೆಪದಲ್ಲೆ ಉಳಿದುಹೋದಳು. ಪಾತಿವ್ರತ್ಯ, ಮಾತೃತ್ವ ಮುಂತಾದ ವೈಭವೀಕರಣದಿಂದಾಗಿ ತನ್ನ ವೈಯುಕ್ತಿಕತೆಯನ್ನು ಕಡೆಗಣಿಸಿ ಬಹುಪಾಲ ಮೌನವಾಗಿಯೇ ಉಳಿದಿದ್ದಾಳೆ. ವಿವಾಹವನ್ನು ಪವಿತ್ರ ಬಂಧ ಎಂದು ಪರಿಗಣಿಸುವ ಸಮಾಜವು ಹೆಣ್ಣು ಮತ್ತು ಗಂಡುಗಳ ಲೈಂಗಿಕ ಬದುಕಿಗೆ ಒಂದು ಚೌಕಟ್ಟನ್ನು ಒದಗಿಸುತ್ತದೆ. ಸಮಾಜ ಪುರುಷ ಪ್ರಧಾನ ವ್ಯವಸ್ಥೆ ಸಂಸ್ಕೃತಿಯಲ್ಲಿ ಹೆಣ್ಣಿಗೆ ವಿವಾಹವು ಲೈಂಗಿಕ ಬದುಕಿಗೆ ಹಾಕುವ ಒಂದು ಬಂಧನ. ಹಾಗೂ ಪುರಷನು ಅವಳ ಮೇಲೆ ತನ್ನ ಹಕ್ಕನ್ನು ಸ್ಥಾಪಿಸುವ ಒಂದು ತಂತ್ರವೆ ಆಗಿದೆ. ಏಕಪತೀವ್ರತವು ಹೆಣ್ಣಿಗೆ ಕಡ್ಡಾಯವಾದ ಸಾಮಾಜಿಕ ನಿಯಮ. ಈ ಬಗೆಯ ನಿಯಮಗಳನ್ನು ಸಾಮಾಜಿಕ ನಿರೂಪಣೆಗಳಲ್ಲಿ ಕಂಡುಬರುತ್ತದೆ.

ಉದಾ: 'ಗರತಿಗೆ ಹಾದರಸಲ್ಲ, ಹಾದರಗಿತ್ತಿಗೆ ವ್ರತಸಲ್ಲ' ಎಂದು ವಿಭಿನ್ನ ರಚನೆಗಳ ಮಧ್ಯೆ ಸಮಾಜವು ಗೆರೆ ಎಳೆಯುತ್ತದೆ. ಹೆಣ್ಣಿನ ಪಾತಿವ್ರತ್ಯಕ್ಕೆ ಹೆಚ್ಚಿನ ಒತ್ತು ನೀಡುವ ಸಮಾಜವು ಹಲವಾರು ನಿಷೇಧಗಳನ್ನು ಆಕೆಯ ಬದುಕಿನ ಮೇಲೆ ಹೇರಿದೆ.

ಸಮಾಜದ ಅನೇಕ ಬಗೆಯ ನಿರ್ದೇಶನ (ನಿಷೇಧಗಳು) ಒಳಪಟ್ಟು ಬದುಕಬೇಕಾದ ಹೆಣ್ಣಿನ ಮಾತಿನ ಮೇಲೂ ಹತೋಟಿಯನ್ನು ಸಾಧಿಸಲಾಗಿದೆ.

ಉದಾ: "ಹರಕು ಬಾಯಿಯಹೆಣ್ಣು ಹೆಣ್ಣಲ್ಲ

ಕೊಳಕು ಮಣ್ಣಿನ ಗದ್ದೆ ಗದ್ದೆಯಲ್ಲ"

ಎಂದು ಹೆಣ್ಣಿಗೆ ಮಾತು ಹೆಚ್ಚು ಎಂದು ನಿಷೇಧವನ್ನು ಹೇರಿ ಅವಳನ್ನು ಬಹುಪಾಲು ಮೂಕಳಾಗಿಸಿದೆ.

ಮಾತು ಮನೆ ಕೆಡಿಸಿತು, ತೂತು ಒಲೆಕೆಡಿಸಿತು"

ಎಂದು ಗಾದೆ ಬುದ್ಧಿಮಾತು ಹೇಳಿರುವುದು..

ಈ ಬಗೆಯ ಒತ್ತಡಗಳಿಂದ ಬೇಸತ್ತಿರೋ ಮಹಿಳೆ ಮೂಕನಿಗೆ ಮಾತುಬಂದಾಗ ಎಂಬಂತೆ ವರ್ತಿಸುವಂತಹ ಉದಾಹರಣೆ ಕಾಣಬಹುದು.

"ಮಾತ್ನಾಗ್ತಿ ನಿನ್ ಮನೆ ಬೇಯ್ತುದೆ ಅಂದ್ರೆ

ನಿಂತ್ ಬೇಯ್ಲಿ, ನಿಧಾನುಕ್ ಬೇಯ್ಲಿ

ಕುಂತ್ ಬೇಯ್ಲಿ,ಕುಪ್ರುಸ್ಕೊಂಡ್ ತಳುದಲ್

ಅಟ್ಕೊಂಡ್ ಉಣ್ತೇನಿ ಅಂದ್ಲಂತೆ" ಸಮಾಜದಲ್ಲಿ ಈ ರೀತಿಯ ಪರಿಸ್ಥಿತಿ ನಿರ್ಮಾಣಗೊಳ್ಳಬಹುದು.

'ನಗೋ ಹೆಂಗ್ಸನ್ನು ನೆಚ್ಚಬೇಡ' ಎಂಬಂತಹ ಗಾದೆಗಳೆಲ್ಲವೂ ಹೆಣ್ಣಿನ ಎಲ್ಲ ಚಟುವಟಿಕೆಗಳ ಮೇಲೆಯೂ ಗಂಡು ನಿಯಂತ್ರಣವನ್ನು ಸಾಧಿಸಿದ್ದಾರೆ. ಅಳು ಹೆಣ್ಣಿನ ಗುತ್ತಿಗೆಯೆಂದು ಭಾವಿಸುವ ಅಳೂವ ಬಗ್ಗೆ ಹೆಣ್ಣಿಗಾಗಲಿ ಗಂಡಿಗಾಗಲಿ ಕೀಳರಿಮೆಯಾಕಿರಬೇಕು. ಮನಬಿಚ್ಚಿ ಅಳುವುದು, ಮನಬಿಚ್ಚಿ ನಗುವುದು ಮಾನಸಿಕ ಹಾಗೂ ದೈಹಿಕ ಆರೋಗ್ಯಕ್ಕೆ ಅವಶ್ಯಕ. ಜೆಡೆ ಜೆಡೆ ಸೇರಲ್ಲ ಎಂಬ ನಿರ್ವಚನದಲ್ಲಿ ಹೆಂಗಸರೂ ಒಂದಾಗಿ ಇರೋದಿಲ್ಲ ಎಂಬ 'ನಂಬಿಕೆ' ಇದೆ. ಮತ್ತು ಹೆಂಗಸರೂ ಗುಂಪುಗುಂಪು ಸೇರಿ ಮಾತನಾಡುವುದಿಲ್ಲ ಎಂಬ ಗ್ರಹಿಕೆ ಇದರಿಂದ ಒಳಗೊಂಡಿದೆ. ಮಾತಿನ ಮಲ್ಲಿಯರು ಅಥವಾ ವಾಚಾಳಿಗಳು, ಹರಟೆ ಮಲ್ಲಿಯರೂ ಎನ್ನುವಂತಹ ನಿರ್ವಚನಗಳು ನಮ್ಮ ಸಮಾಜದೊಳಗೆ ಮಹಿಳೆ ಹೆಚ್ಚು ಮಾತಾಡುತ್ತಾಳೆ ಎಂಬ ನಂಬಿಕೆಯಿಂದ ಬಂದಿರುವಂತಹದು. ಇದರಿಂದ ಮಹಿಳೆಗೆ ಮಾತು ಜಾಸ್ತಿಯಾಗಿದೆ ಎಂಬ ಗ್ರಹಿಕೆಯಾಗಿದೆ. ಈ ಎರಡು ಬಗೆಯ ನಂಬಿಕೆ ಗ್ರಹಿಕೆ ನಿರ್ವಚನಗಳೇ ಸಮಾಜದೊಳಗೆ ಇರುವಂತಹದನ್ನು ಗಮನಿಸಬಹುದಾಗಿದೆ. ಹಾಗಿದ್ದರೆ, ಇವೆರಡರಲ್ಲಿ ಯಾವ ನಿರ್ವಚನ ಸಮಾಜವನ್ನು ಪ್ರತಿನಿಧಿಸುತ್ತಿದೆ? ಯಾವ ನಂಬಿಕೆ ಸರಿಯಾಗಿದೆ? ಯಾವ ಗ್ರಹಿಕೆ ಸರಿಯಾಗಿದೆ?

'ಮಾತು ಮನೆಕೆಡಿಸಿತು ತೂತು ಒಲೆಕೆಡಿಸಿತು' ಎಂಬ ನಿರ್ವಚನ ನಮ್ಮ ಕನ್ನಡದ ಸಂದರ್ಭದಲ್ಲಿ ಭಾಷೆಯನ್ನು ಕುರಿತ ಆಗಿರುವಂತ ನಂಬಿಕೆಯಿಂದ ಹುಟ್ಟಿದೆ. ಈ ವಿಚಾರ ಸಮಾಜದಲ್ಲಿ ಹೇಗೆ ಗ್ರಹಿತವಾಗಿದೆ ಎಂಬುದು ಬಹುಮುಖ್ಯವಾದ ಅಂಶವಾಗಿದೆ. ಎಂದರೆ ಮಾತು ಮನೆ ಕೆಡಿಸಿತು ಎಂಬುದು ಒಂದು ಅಂಶ, ತೂತು ಒಲೆ ಕೆಡಿಸಿತು ಎಂಬುದು ಇನ್ನೊಂದು ಅಂಶ ಎಂದಾಗ ಇದರೊಳಗೆ ನಾವು ಎರಡನೆ ಅಂಶವನ್ನು ಗಮನಿಸುವುದು ಅಗತ್ಯವಾಗಿದೆ. ಒಲೆ ಎಂದ ತಕ್ಷಣ ನಮಗೆ ಗ್ರಹಿತವಾಗುವಂತಹ ವಿಚಾರ ಹೆಂಗಸು ಎಂಬುದೆ. ಅಂದರೆ ಮಹಿಳೆಯರ ಮಾತನ್ನು ಉದ್ದೇಶಿಸಿ ಈ ನಿರ್ವಚನ ಮಾತಾಡುತ್ತೆ ಎಂದು ಗ್ರಹಿಸಲಾಗಿದೆ. ಮತ್ತು ಮಹಿಳೆಯರ ಮಾತಿನಿಂದಾಗಿ ಮನೆ ಕೆಡುತ್ತೆ ಎಂಬ ನಂಬಿಕೆ ಇರುವಂತಹದು ತಿಳಿದುಬರುತ್ತದೆ.

ಹೆಂಗಸರ ಮಾತೇನು ಕಟ್ಟಿಕೊಂಡಿಯ, ಅವರ ಮಾತನ್ನು ಕಟ್ಟಿಕೊಂಡುಹೋದರೆ ಅಷ್ಟೇ ಬಿಡು. ಗಂಡಸರೇನಾರು ಮಾತಾಡುವಾಗ ಮಹಿಳೆಯರು ಮಧ್ಯದಲ್ಲಿ ಮಾಡನಾಡಿದರೆ, ಹೆಂಗಸರದೇನು ನಡಬರಕ ನಿಮಗ ತಿಳಿಯಲ್ಲ ಸುಮ್ಮನಿರಿ. ಈ ರೀತಿಯ ಮಹಿಳೆಯರ ಬಾಯಿ ಮುಚ್ಚಿಸುತ್ತೆ ಸಮಾಜ.

## ೨.೨. ಗ್ರಹಿಕೆ



ಭಾಷೆ ಒಂದು ಮಾನಸಿಕ ಚಿಂತನಾ ಪ್ರಕ್ರಿಯೆ. ನಾವು ಭಾಷಿಕ ಸಂಜ್ಞೆ ಮತ್ತು ಮೂರ್ತ ಹಾಗೂ ಅಮೂರ್ತ ಸಂಗತಿಗಳೊಡನೆ ಸಂಬಂಧ ಸಾಧಿಸುತ್ತೇವೆ. ಪದ ಮತ್ತು ಮೂರ್ತ ಅಥವಾ ಅಮೂರ್ತ ಸಂಗತಿ ಮತ್ತು ಅರ್ಥ ಇವುಗಳ ನಡುವಣ ಸಂಬಂಧ ಸಾಮಾಜಿಕ ನೆಲೆಯಲ್ಲಿ ನಿರ್ಧರಿತವಾಗುವಂಥದ್ದು. ಭಾಷಾ ಸಮುದಾಯದಲ್ಲಿ ಮೂರ್ತ ಮತ್ತು ಅಮೂರ್ತ ಸಂಗತಿ ಮತ್ತು ಅವುಗಳ ಧ್ವನಿರೂಪ ಕುರಿತು ಒಂದು ಒಪ್ಪಂದವಿರುತ್ತದೆ. ಇದು ಅಲಿಖಿತ ಒಪ್ಪಂದ, ಜನರ ಜೀವನ ಕ್ರಮ, ಲೋಕ ಮತ್ತು ಭಾಷೆಯ ಬಗೆಗಿನ ಅವರ ಗ್ರಹಿಕೆ ಅವರು ತಮ್ಮ ಸುತ್ತಲಿನ ಜಗತ್ತನ್ನು ಗ್ರಹಿಸುವಲ್ಲಿ ವಿಂಗಡಿಸಿ ನೋಡುವಲ್ಲಿ ಪ್ರಧಾನ ಪಾತ್ರವಹಿಸುತ್ತದೆ.

"ವೂರ್ಫ್ ಹೇಳುವಂತೆ ನಮ್ಮ ಸುತ್ತಣ ಲೋಕವನ್ನು ನಾವು ನಮ್ಮ ಭಾಷೆಯು ಸೂಚಿಸುವ ಗೆರೆಗಳಿಗೆ ಅನುಗುಣವಾಗಿ ವಿಭಜಿಸಿ ಗ್ರಹಿಸುತ್ತೇವೆ. ಲೋಕದಲ್ಲಿ ಬಗೆಗಳೂ ಮಾದರಿಗಳೂ ಆಕಾರಗಳು ಅಂತರ್ಗತವಾಗಿರುವುದಿಲ್ಲ. ನೋಡುವವರಿಗೆ ತಂತಾನೇ ಗೋಚರಿಸುವಂತೆ ವಿಭಜಿತವಾಗಿರುವುದಿಲ್ಲ. ಕಲಿಡಿಯೋ ಸ್ಕೋಪನ್ನು ತಿರುಗಿಸಿದಂತೆಲ್ಲ ಒಳಗಿನ ಚಿತ್ರದ ಆಕಾರ ಪಲ್ಲಟಗೊಳ್ಳುವಂತೆ ಲೋಕಗ್ರಹಿಕೆಯ ಹಲವು ಸಾಧ್ಯತೆಗಳಿಗೆ ಭಾಷೆ ಅನುವು ಮಾಡಿಕೊಡುವಂತೆ ಕಾಣುತ್ತದೆ. ನಮ್ಮ ಮನಸ್ಸಿನಲ್ಲಿರುವ ಭಾಷಾ ವ್ಯವಸ್ಥೆಯ ಸೂಚನೆಗಳಿಗೆ ಅನುಗುಣವಾಗಿ ನಾವು ಲೋಕದ ಆಕಾರಗಳನ್ನು ಗ್ರಹಿಸುತ್ತೇವೆ. ಈ ನಿಯಮಗಳೆಲ್ಲವನ್ನು ನಮ್ಮ ಭಾಷಾ ಸಮುದಾಯ ಒಪ್ಪಿಕೊಂಡಿರುತ್ತದೆ."[೫]

ಧೈರ್ಯ–ಸಾಹಸ, ಆಕ್ರಮಣಶೀಲತೆ, ಬುದ್ಧಿವಂತಿಕೆ, ಮುಂದಾಳತ್ವ, ಒರಟುತನ, ಕ್ರಿಯಾಶೀಲತೆ ಇವುಗಳು ಗಂಡುಗುಣಗಳು ಎಂದು, ನಾಚಿಕೆ, ಸಂಕೋಚ, ಸಹನೆ, ತಾಳ್ಮೆ, ಪುಕ್ಕಲುತನ, ಹಿಂಬಾಲಕತ್ವಗಳು ಹೆಣ್ಣುಗುಣಗಳೆಂದು ವಿಭಾಗಿಸಲಾಗಿದೆ. ಅಂತಹ ಗುಣಗಳಿರುವ ಕಾರಣಕ್ಕೆ ಗಂಡಸರು ಶ್ರೇಷ್ಠರು ಮತ್ತು ಹೆಂಗಸರು ಕನಿಷ್ಠರೆಂದು ಗುರುತಿಸಲಾಗಿದೆ. ಹೆಣ್ಣಿನ ಕನಿಷ್ಠತೆಯ ಕಾರಣದಿಂದ ಗಂಡು ಬಲಿಷ್ಠರಾದವರಾಗಿದ್ದು, ಇವರು ಆಳುವವರೆಂದು ಮತ್ತು ಮಹಿಳೆಯರು ಆಳಿಸಿಕೊಳ್ಳುವವರೆಂದು ನಂಬಿಸುತ್ತಲೇ ಬರಲಾಗಿದೆ. ಇದುವೇ ಸ್ತ್ರೀ ಪುರುಷರ ನೆಲೆಗಳನ್ನು ಗುರುತಿಸುತ್ತಾ ಬರಲಾಗಿದೆ. ಆದರೆ ವಾಸ್ತವವಾಗಿ 'ಬಲ' ಎನ್ನುವ ಕಲ್ಪನೆಯೇ ಪೂರ್ವಗ್ರಹಿಕೆ ಹೊಂದಿದೆ. ಮನಃಶಾಸ್ತ್ರಜ್ಞರ ಪ್ರಕಾರ ನೂರಕ್ಕೆ ನೂರು ಗಂಡು–ಹೆಣ್ಣು ಗುಣಗಳನ್ನು ಹೊಂದಿರುವವರು ಯಾರೂ ಇಲ್ಲ.

ಮಹಿಳೆಯರನ್ನು ಹರಟೆಮಲ್ಲಿಯರೆಂದೇ ಕರೆಯುತ್ತಾರೆ. ಈ ನಿರ್ವಚನ ಹೇಗೆ ಗ್ರಹಿತವಾಗಿದೆ ಎಂದರೆ ಪುರುಷರು ತುಂಬ ಸಾಧುಗಳು ಯಾವಾಗಲು ಮಾತಾಡುವವರು ಮಹಿಳೆಯರೆ, ಮಹಿಳೆ ಮಾತಾಡುವುದರಲ್ಲಿ ಯಾವುದೆ ಅರ್ಥವಿಲ್ಲದಂತ ಅಪಮೌಲ್ಯದ ಮಾತುಗಳನ್ನೆ ಹೆಚ್ಚಾಗಿ ಮಾತಾಡುತ್ತಾರೆ

ಎಂಬ ಗ್ರಹಿಕೆ ಇದೆ. "ಇನ್ನು ಮಾತಿನ ದೇವತೆಯರಾದ ಮಹಿಳೆಯರತ್ತ ಬರೋಣ. ಸರಸ್ವತಿಗೆ ವಾಗ್ದೇವಿ ಎಂಬ ಮತ್ತೊಂದು ಹೆಸರಿದೆ. ವಾಕ್ ಎಂದರೆ ಮಾತು, ದೇವಿ ಎಂದರೆ ಒಡತಿ, ಅಧೀಪತಿ ಮಾತಿನ ಅಧಿದೇವತೆ ಹೆಣ್ಣೇ ಆಗಿರುವುದರಿಂದ ಇರಬೇಕು ಎಲ್ಲ ಮಾತೆಯರೂ ಮಹಾನ್ ಮಾತುಗಾರರೇ ಅವರಿರುವಲ್ಲೆಲ್ಲ ಮಾತು ಮಾತು ಮಾತು ಮಾತು ಮಾತೇ ಮಾತು" ಎಂದು ಲೇವಡಿ ಮಾಡುತ್ತ ನಗೆ ಚಟಾಕಿಯಲ್ಲಿ ಬರುವ ಸಂದರ್ಭವನ್ನು ವಿವರಿಸುತ್ತಾ ಹೀಗೆನ್ನುತ್ತಾರೆ ಅದಕ್ಕೆ ಅವರನ್ನು ಅನ್ವರ್ಥಕವಾಗಿ 'ಮಾತೆ' ಅಂತ ಕರೆಯುತ್ತಿರಬಹುದೆ ಅಂತ ಗಂಗಾವತಿ ಪ್ರಾಣೇಶ್ ಅನುಮಾನಿಸಿದ್ದಾರೆ"[೬].

ಹರಟೆಮಲ್ಲಿ ನಿರ್ವಚನವನ್ನು ಹಲವು ಬಗೆಯಲ್ಲಿ ಗ್ರಹಿಸಿಕೊಂಡು ಅದಕ್ಕೆ ವೈಜ್ಞಾನಿಕ ಕಾರಣವನ್ನು ಹುಡುಕಿದವರು ಉಂಟು "ಇದಕ್ಕೆ ವೈಜ್ಞಾನಿಕ ಕಾರಣವೂ ಇದೆ. ಗಂಡಸರ ಮೆದುಳಿನಲ್ಲಿ ಮಾತಿಗೆ ಸಂಬಂಧಪಟ್ಟ ಕ್ಷೇತ್ರ ಎಡಭಾಗದಲ್ಲೋ ಬಲಭಾಗದಲ್ಲೋ ಇದೆಯಂತೆ ಆದರೆ ಹೆಂಗಸರಿಗೆ ಮಾತ್ರ ದುರದೃಷ್ಟವಶಾತ್ ಅದು ಎರಡೂ ಕಡೆಗೂ ಇದೆಯೆಂದು ಎಲ್ಲೋ ಓದಿದ ನೆನಪು!"[೭].

ಇದೆ ರೀತಿಯ ವೈಜ್ಞಾನಿಕ ಸಂಶೋಧನೆ ಮತ್ತೊಂದು ನಡೆದಿದೆ ಡಾ. ಲುವಾನ್ ಬ್ರಜೆಂಡಿನ್ ಹೇಳುವ ಪ್ರಕಾರ ಗಂಡು ಮತ್ತು ಹೆಣ್ಣಿನ ಮೆದುಳಿನಲ್ಲೇ ಈ ಬೇಸಿಕ್ ವ್ಯತ್ಯಾಸ ಇದೆ. ಹೆಣ್ಮಕ್ಕಳ ಮೆದುಳಿನಲ್ಲಿ ಮತಿಗೆ ಸಂಬಂಧಿಸಿದ ಕೋಶಗಳು ಗಂಡಿಗಿಂತ ಹೆಚ್ಚು ಹಾಗಾಗಿ ಮಾತನಾಡುತ್ತಾ ಹೋದಂತೆ ಮೆದುಳಿನ ರಾಸಾಯನಿಕಗಳ ಸ್ರವಿಸುವಿಕೆ ವೇಗ ಹೆಚ್ಚುತ್ತಲೇ ಹೋಗುತ್ತದೆ ಎನ್ನುವುದು ಅವರ ಶೋಧ. ಈ ವ್ಯತ್ಯಾಸ ಭ್ರೂಣಾವಸ್ಥೆಯಲ್ಲೇ ಆಗುತ್ತದೆ. ಟೆಸ್ಟೋಸ್ಟಿರಾನ್ ಎಂಬ ಎಕ್ಸ್ ಹಾರ್ಮೋನ್ ಭ್ರೂಣ ಹಂತದಲ್ಲೇ ಸಂವಹನ ಭಾವನೆ ಮತ್ತು ನೆನಪಿಗೆ ಸಂಬಂಧಿಸಿದ ಭಾಗಗಳ ಮೇಲೆ ಪರಿಣಾಮವನ್ನು ಬೀರುತ್ತದೆ, ಇದರ ಪರಿಣಾಮವಾಗಿಯೇ ಪುರುಷರು ಮಾತಿನಲ್ಲಿ ಹಿಂದೆ ಬೀಳುತ್ತಾರೆ"[೮].

ಮಾತಿನಮಲ್ಲಿಯರು ನಿರ್ವಚನ ಮತ್ತೊಂದು ಬಗೆಯಲ್ಲಿ ಗ್ರಹಿತವಾಗಿದೆ. "ಒಂದು ಸಮೀಕ್ಷೆ ಪ್ರಕಾರ ಗಂಡಸರು ದಿನವೊಂದಕ್ಕೆ ಆಂಗಿಕ ಸಂಜ್ಞೆಗಳು ಸೇರಿದಂತೆ ಗರಿಷ್ಠ ಎಂದರೆ ನಾಲ್ಕು ಸಾವಿರ ಪದಗಳನ್ನು ಬಳಸುತ್ತಾರಂತೆ. ಹೆಂಗಸರು ಏಳು ಸಾವಿರ! ಅಂದರೆ ಆಲ್ಮೋಸ್ಟ ಗಂಡಸರ ದುಪ್ಪಟ್ಟು"[೯].

ಹರಟೆಮಲ್ಲಿಯರಾದ ಹೆಂಗಸರು ವಾಸ್ತವದಲ್ಲಿ ಮೌನಗೊಂಡಿದ್ದಾರೆ. ಈ ವಿರೋಧಾಭಾಸವನ್ನು ಗ್ರಹಿಸಲು ಭಾಷೆಯು ಹೆಂಗಸಿನ ಅಭಿವ್ಯಕ್ತಿ ಸಾಧಾರಣವಾಗಿದೆಯೋ ಅಥವಾ ಅದಕ್ಕೆ ತೊಡರುಗಳನ್ನು ಒಡ್ಡುತ್ತಿದೆ. ಅವಳ ಮೌನ ಎಂದರೆ ಅವಳು 'ಮೂಕಿ' ಎಂದಲ್ಲ ಅವಳಿರುವ ಸಾಮಾಜಿಕ ಸ್ಥಾನವು ಅವಳ ಬಾಯನ್ನು ಮುಚ್ಚಿಸಿದೆ. ಮಾತಾಡುತ್ತಲೇ ಇದ್ದರೂ ಮೌನಿಯಾಗಿದ್ದಾಳೆ 'ಬಾಯಿ ಮುಚ್ಚಿಸುವ'

ಹಲವು ವಿಧಾನಗಳು ಈ ವ್ಯವಸ್ಥೆಯಲ್ಲಿವೆ. ಎಲ್ಲಿ ಯಾರೆದುರು ಹೇಗೆ ಮಾತನಾಡಬೇಕು ಎಂದು ಸಮಾಜದಲ್ಲಿ ಸಿದ್ಧಮಾದರಿ ಇದೆ. ಬಯ್ಗುಳಗಳ ಬಳಕೆಯಲ್ಲಿ ಧ್ವನಿ ಏರಿಸುವುದು ಹೆಣ್ಣು ಗುಣವಲ್ಲ. ಇನ್ನಿತರ ಹಲವು ಬಗೆಗಳಲ್ಲಿ ನಿಷೇಧಗಳನ್ನು ಹೇರುವುದು ಇದು ಒಂದು ಮಾದರಿ. ೧೯೭೦ರಲ್ಲಿ ಸ್ವ್ಯಾಕರ ಎನ್ನುವ ಚಿಂತಕರು ಹೆಣ್ಣಿನ ಹರಟೆಯನ್ನು ಆಧರಿಸಿ ಅದನ್ನು ಸಹಜತೆಗೆ ವಿರುದ್ಧವಾದ ಮಾತುಗಾರಿಕೆ ಎಂದು ಹೇಳಿದ್ದಾರೆ. ಅಂದರೆ ಇಡೀ ಪುರುಷ ಪ್ರಧಾನ ವ್ಯವಸ್ಥೆಯಲ್ಲಿಯೇ ಹೆಣ್ಣಿನ ಮಾತನ್ನು ನೇತ್ಯಾತ್ಮಕ ನೆಲೆಯಲ್ಲಿ ಗ್ರಹಿಸಿ ಅದಕ್ಕೆ ಅಸಹಜ ಮಾತುಗಾರಿಕೆ ಎಂದು ನಿರ್ವಚಿಸಲಾಗಿದೆ.

*ಸಹಜ ಮಾತುಗಾರಿಕೆಯೆಂದರೆ*

*ಭಾಷೆಯಲ್ಲಿ ವ್ಯಾಕರಣವನ್ನು ಸರಿಯಾದ ರೀತಿಯಲ್ಲಿ ಬಳಸುವುದು*

*ಸಂದರ್ಭಕ್ಕೆ ತಕ್ಕಂತೆ ಮಾತುಗಳನ್ನು ಬಳಸುವುದು.*

ಅಸಹಜವೆಂದರೆ ಮೇಲಿನ ಎರಡು ಅಂಶಗಳಿಗೆ ಹೊರತಾಗಿದ್ದು ಹೃಸ್ವ ಪದಗಳು ಹ್ಞೂಂ ಗುಟುವಿಕೆ ಉದ್ಗಾರಗಳಿರುತ್ತವೆ. ವಾಕ್ಯಾತ್ಮಕರೂಪವಿರುವುದಿಲ್ಲ. ಆದರೆ 'ಹರಟೆ'ಗೆ ಸಂಬಂಧಿಸಿದಂತೆ ಸ್ತ್ರೀವಾದಿಗಳ ವಾದವು ತೀರಾ ಸೂಕ್ಷ್ಮವಾದುದ್ದಾಗಿದೆ. ಈ ಹರಟೆಯನ್ನು ಸಾಂಪ್ರದಾಯಿಕ ವ್ಯವಸ್ಥೆಯಲ್ಲಿ Vseless talking ಎಂದು ಹೇಳಿದರೆ ಇದನ್ನೆ ಸ್ತ್ರೀವಾದಿಗಳು "Very Positive Social Function ಎಂದು ಹೇಳುತ್ತಾರೆ.

ವಾಚಾಳಿ ಚೌಕಟ್ಟಿನಲ್ಲಿ ಮಹಿಳೆಯನ್ನು ಸಮಾಜ ಗ್ರಹಿಸಿದೆ. ನಯ-ನಾಜೂಕಿನಿಂದ ಸೂಕ್ಷ್ಮವಾಗಿ ಮೃದುವಾಗಿ ಎದುರಾಡದೆ ಕಡಿಮೆ ಮಾತನಾಡಬೇಕು ಎಂಬುದು ಪುರುಷ ಸಮಾಜ ನಿರೀಕ್ಷಿಸುವ ವ್ಯತಿರಿಕ್ತವಾಗಿ ಹೆಣ್ಣನ್ನು ಚಿತ್ರಿಸುವ ನಗೆಹನಿಗಳೂ ಇವೆ.

*•ರೋಗಿಯ ಹೆಂಡತಿ ಬಹಳ ವಾಚಳಿ ಡಾಕ್ಟರು, ರೋಗಿಯನ್ನು ಪರೀಕ್ಷೆ ಮಾಡಿ ಹೆಂಡತಿ ಕೈಯಲ್ಲಿ ಮಾತ್ರೆಗಳ ಪಾಕೇಟ್ ಒಂದನ್ನು ಕೊಟ್ಟರು ಅವಳು ಕೇಳಿದಳೂ "ಇದನ್ನು ಅವರಿಗೆ ಯಾವ ಯಾವಾಗ ಕೊಡಬೇಕು ಡಾಕ್ಟ್ರೆ" ಡಾಕ್ಟರ್ ಹೇಳಿದರು "ಅವರಿಗಲ್ಲಮ್ಮಾ ಈ ನಿದ್ರೆ ಮಾತ್ರೆಗಳು ನೀವು ಅದನ್ನು ತೆಗೆದುಕೊಂಡರೆ ನಿಮ್ಮ ಯಜಮಾನರಿಗೆ ವಿಶ್ರಾಂತಿ ಸಿಗುತ್ತೆ".*

*•ರೀ ಡಿಸ್ಕವರಿ ಚಾನೆಲ್‌ನಲ್ಲಿ ಹೇಳಿದ್ರು "ಮನುಷ್ಯ ದಿನವೊಂದಕ್ಕೆ ಸರಾಸರಿ ೨೬,೦೦೦ ಪದಗಳನ್ನು ಮಾತಾಡ್ತಾನಂತೆ. ನಿಜ ಕಣೇ ಆದರೆ ನೀನು ಸರಾಸರಿಗಿಂತ ಎರಡು ಪಟ್ಟು ಜಾಸ್ತಿನೇ ಮಾತಾಡ್ತೀಯಾ ನನಗೆ ನೀನೆ ವರಿ ಚಾನೆಲ್"ಎಂದ ಗಂಡ.*

ಹೆಚ್ಚು ಮಾತನಾಡುವ ಹೆಂಗಸರನ್ನು ವಾಚಾಳಿ 'ಬಾಯ್ಬಡಿಕಿ' ರೇಡಿಯೋ ಎಂಬ ನಿರ್ವಚನಗಳಿಂದ ಗುರುತಿಸಲಾಗುತ್ತದೆ. ಹೀಗೆ ಮಾತನಾಡುವ ಹೆಂಡತಿಯರು ಗಂಡಂದಿರ ತಲೆನೋವಿಗೆ

ಕಾರಣವಾಗುತ್ತಾರೆ. ಅವರ ಮಾತೆ ಇವರಿಗೆ ಹಿಂಸಾತ್ಮಕವಾಗಿ ಡಿಸ್ಕವರಿ ಚಾನೆಲ್ ನಂತಿರುತ್ತದೆ. ಎಂದು ಮಹಿಳೆಯರನ್ನು ಕುರಿತಂತೆ ಗ್ರಹಿಸಿಕೊಂಡಿದೆ. ಹೀಗಾಗಿಯೇ ಅವಳ ಸ್ವೇಚ್ಛಾಚಾರದ ಮಾತಿಗೆ ಕಡಿವಾಣ ಹಾಕಲಾಗುತ್ತದೆ. ಹೆಣ್ಣನ್ನು ಮೌನದೆಡೆಗೆ ತಳ್ಳುವ ಹಲವು ಬಗೆಯ ನಿರ್ವಚನಗಳು ಗ್ರಹಿತವಾಗಿವೆ.

ಈ ಸಮಾಜದಲ್ಲಿ ಮಹಿಳೆ ಅಧೀನ ಸ್ಥಾನದಲ್ಲಿದ್ದಾಳೆ. ಪುರುಷ ಸಂಸ್ಕೃತಿಯಲ್ಲಿ ಮಹಿಳೆಯು ಎರಡನೆ ದರ್ಜೆಯವಳಾಗಿದ್ದು ಅವಳ ಭಾಷೆಯು ಯಾರನ್ನೊ ತೃಪ್ತಿಪಡಿಸುವ, ಸಮಜಾಯಿಸಿ ಕೊಡುವ ಹಾಗಿರುತ್ತದೆ, ಹಾಗೂ ಎಲ್ಲಿಯೂ ಕೂಡ ಆಕೆ ಅಧಿಕಾರ ವಾಣಿಯಿಂದ ಮಾತನಾಡದಂತೆ ಸಮಾಜ ಎಚ್ಚರ ವಹಿಸಿದೆ.

ಸಮಾಜದಲ್ಲಿ ಹೆಣ್ಣಿನ ಮಾತಿಗೆ ಸೀಮಿತವಾದ ಅವಕಾಶವಿದೆ. ಕುಟುಂಬ ಬಿಟ್ಟು ಸಮಾಜವಿಲ್ಲದ ಕಾರಣ ಈ ಮಾತನ್ನು ಕುಟುಂಬಕ್ಕು ಅನ್ವಯಿಸಬಹುದು.

'ಹರಟೆ'ಯು ಒತ್ತಡ ಇಲ್ಲದಿರುವ ಸಮಾನ ವಯಸ್ಕರ ಅನೌಪಚಾರಿಕ ವಾತಾವರಣದಲ್ಲಿ ಪರಿಚಿತ ವಿಷಯದ ಮಹಿಳೆಯರ ಮುಕ್ತ ಸಂವಾದವೆನ್ನುವಂತೆ ನಡೆದಿರುತ್ತದೆ. ಇಲ್ಲಿ ಮಹಿಳೆಗೆ ಸಂಬಂಧಿಸಿದ ಹಾಗೂ ಕೌಟುಂಬಿಕ ವಿಷಯಗಳನ್ನು ಕುರಿತು ಚರ್ಚೆಗಳಾಗುತ್ತವೆ.

ತಮಗೆ ತೋಚಿದ ರೀತಿಯಲ್ಲಿ ಘಟನೆಯ ಒಳಿತು ಕೆಡಕುಗಳನ್ನು ಮಾತನಾಡಿ ತಮ್ಮ ಅರಿವಿನ ಪರಧಿಯನ್ನು ವಿಸ್ತರಿಸಿಕೊಳ್ಳುತ್ತಾರೆ. ಹೆಣ್ಣಿನ ಈ ಹರಟೆಯನ್ನು ಗಂಡಸರು ನೇತೃತ್ವವಾಗಿ 'Chater Box' ಎಂದೇ ಗುರುತಿಸಿದ್ದಾರೆ. ಅಲ್ಲದೇ ಕೆಲಸಕ್ಕೆ ಬಾರದ ಮಾತು ಎಂದು ಭಾವಿಸಿದ್ದಾರೆ. "ಮಾತಿನ ಮಲ್ಲಿ ಹರಟೆ ಪ್ರತಿನಿಧಿಕರಿಸುತ್ತವೆ"[೧೦]. ಯಾವುದೇ ಭಯವಿಲ್ಲದೆ ಹೆಂಗಸರು ತಮ್ಮ ಮನದ ನೋವು-ನಲಿವು, ಆಸೆ-ಆಕಾಂಕ್ಷೆಗಳನ್ನು ಹೇಳಿಕೊಳ್ಳುವ ಅಥವಾ ಹಂಚಿಕೊಳ್ಳುವ ವೇದಿಕೆಯಂತೆ ಹರಟೆ ಕಾರ್ಯ ನಿರ್ವಹಿಸುತ್ತದೆ.

ಮಹಿಳೆಯನ್ನು ಹೆಚ್ಚಿನ ಆಸೆ ಉಳ್ಳವಳು ಎಂದು ಸಮಾಜದ ಗ್ರಹಿಕೆಯಾಗಿದೆ. ಹಾಗಾಗಿಯೇ ಗಂಡಸರಿಗಿಂತಲೂ ಹೆಂಗಸರಿಗೆ ಆಸೆ ಆಮಿಷಗಳು ಜಾಸ್ತಿ. ಅವರು ಯಾವಾಗಲೂ ಯಾವುದಾದರು ವಸ್ತು ತಮ್ಮದಾಗಬೇಕು ಎಂದು ಹೆಣಗುತ್ತಿರುತ್ತಾರೆ ಎಂಬಂತೆ ಮಹಿಳೆಯನ್ನು ಗ್ರಹಿಸಿಕೊಂಡಿದೆ. ಈ ನಿಟ್ಟಿನಲ್ಲಿ ಸಮಕಾಲೀನ ಕೆಲವು ನಿರ್ವಚನಗಳಿಂದ ಕೆಳಗಿನಂತೆ ಅರ್ಥೈಸಬಹುದಾಗಿದೆ.

• *'ಕಾರು ನಡೆಸುವಾಗ ನಿನ್ನ ಹೆಂಡ್ತಿನ ಯಾಕೆ ಪಕ್ಕದಲ್ಲಿ ಕೂರಿಸಿಕೊಳ್ಳುವುದಿಲ್ಲ? ಮೋಹನ ಪಾಂಡವನ್ನು ಕೇಳಿದ. ಅವಳ ನಕಲೇಸ್ ನೋಡ್ರೀ.... ಇವಳ ಸೀರೆ ನೋಡಿ..... ಅಂತ ನಾನು ಕಾರು ಓಡಿಸ್ತಾ ಇರುವಾಗ ರಸ್ತೆ ಮುಂದೆ ತೋರಿಸುತ್ತಾಳೆ. ಅದರಿಂದ ಏನು ತೊಂದರೆ?*

"ನಾಲ್ಕು ಸಲ ಅಪಘಾತ ಮಾಡಿದ್ದೀನಿ ಸಾಲದಾ" ರಾಮಣ್ಣನಿಗೆ ವಯಸ್ಸು ೬೫ ಆಗಿ ಕೆಲಸದಿಂದ ನಿವೃತ್ತಿಯಾಯಿತು ಮಡದಿ ಇರಲಿಲ್ಲ. ಯಾವುದಾದರೂ ಹುಡುಗಿ ನನ್ನ ಮದುವೆ ಆಗೋಕೆ ಸಿಕ್ಕರೆ ನನ್ನ ವಯಸ್ಸು ೪೮ ಅಂತ ಹೇಳ್ತೀನಿ ಎಂದು ಗೆಳೆಯನಿಗೆ ಹೇಳಿದ. ಬೇಡ ೭೮ ಅನ್ನು ಬಹಳ ಹುಡುಗಿಯರು ಮುಂದೆ ಬರ್ತಾರೆ. ಅದು ಹ್ಯಾಗೆ. ಐವತ್ತು ಲಕ್ಷದ ಬಂಗಲೆ, ಕಾರು, ಷೇರು, ಇರೋ ವಯಸ್ಸಾದ ಗಂಡ ಅಂದರೆ ಯಾವ ಹುಡುಗಿಗಾದರೂ ಆಸೆ ಆಗಲ್ಲವೇ?

•"ಫ್ಯಾಮಿಲಿ ಪ್ಲಾನಿಂಗ್ ಮಾಡೋದಕ್ಕೆ ಹೋಗಿ ಮಕ್ಕಳ ನಡುವೆ ಅಂತರ ಇಟ್ಟಿದ್ದು ತಪ್ಪಾಗಿ ಹೋಯಿತು"

"ಏಕೆ?"

"ನನ್ನ ಮೊದಲನೆ ಮಗು ಅಪ್ಪಾ ಅನ್ನುತ್ತೆ. ಎರಡನೆ ಮಗು ತಾತ ಅನ್ನುತ್ತೆ"

ಅವರು ಛೆ! ಛೆ! ಹೆಂಗಸನ್ನು ಕ್ರಿಕೆಟ್ ಕಾಮೇಂಟರಿ ಹೇಳೋಕೆ ನಿಲ್ಲಿಸಿದ್ದು ತಪ್ಪಾಗಿಹೋಯ್ತು"

ಇವರು: ಯಾಕೆ ಏನಾಯ್ತು"

ಅವರು: "ಆಟದ ಬಗ್ಗೆ ಹೇಳೋದು ಬಿಟ್ಟು ಯಾರು ಯಾರು ಯಾವ ಯಾವ ಬಣ್ಣದ ಸೀರೆ ಉಟ್ಟುಕೊಂಡು ಬಂದಿದ್ದಾರೆ, ಯಾವ ಯಾವ ಒಡವೆ ಹಾಕ್ಕೊಂಡು ಬಂದಿದ್ದಾರೆ ಅಂತ ವರ್ಣಿಸ್ತಿದ್ದಾರೆ ಒಂದು ಗಂಟೆಯಿಂದ "

•ಹೆಂಡತಿ : " ನೀವು ನನಗೆ ಚಿನ್ನದ ಸರವನ್ನು ತರದಿದ್ರೆ ನನ್ನ ತವರಿಗೆ ಹೊರಟು ಹೋಗ್ತೀನಿ"

ಗಂಡ : ಬರುವಾಗ ನನಗೂ ಒಂದು ಉಂಗುರವನ್ನು ಮಾಡಿಸಿಕೊಂಡು ಬಾ.

ಮೇಲಿನ ಎಲ್ಲಾ ನಗೆಹನಿಗಳಲ್ಲಿಯೂ ಹೆಂಗಸರು ಚಿನ್ನ, ಒಡವೆ, ವಸ್ತ್ರ, ಆಭರಣ, ಹಣಕ್ಕಾಗಿ ಆಸೆಪಡುವವರು ಹಾಗೂ ಅವರ ಆಸೆಯಿಂದಾಗಿಯೇ ಅನಾಹುತಗಳು ಸಂಭವಿಸುತ್ತವೆ. ಅಲ್ಲದೇ ಅವರು ತಮ್ಮ ಆಸೆಯನ್ನು ಪೂರೈಸಿಕೊಳ್ಳಲು ಏನನ್ನು ಬೇಕಾದರೂ ಮಾಡಬಲ್ಲರು ಎಂಬಂತೆ ಗ್ರಹಿಸಲಾಗಿದೆ. ಮಹಿಳೆಯರಿಗೆ ಬುದ್ದಿಯಿಲ್ಲ ವಿವೇಕ ಇಲ್ಲದವಳು, ವ್ಯವಹಾರ ಜ್ಞಾನದ ಕೊರತೆ ಇರುವವಳು ಎಂಬ ಗ್ರಹಿಕೆಯು ಇದೆ. ಈ ನಿಟ್ಟಿನಲ್ಲಿ ಕೆಲವು ನಿರ್ವಚನಗಳು ರೂಢಿಯಲ್ಲಿವೆ. ಜನಪದರ ಗಾದೆ, ಒಗಟು, ಒಡಪುಗಳಲ್ಲಿ ಅವು ಕಂಡುಬರುತ್ತವೆ.

- "ಹೆಣ್ಣು ಮಕ್ಕಳ ಬುದ್ಧಿ ಮೊಣಕಾಲ ಕೆಳಗೆ"
- "ಎಲ್ಲರೂ ಆಡಿದರೆಂದು ನಮ್ಮ ಚಲ್ಲಮಲ್ಲಿಯೂ ಆಡಿದಳು"

- *"ಬೋಳಿ ತನ್ನ ತುರುಬು ನೆನೆಸಿಕೊಂಡು ಅತ್ತಳೂ"*
- *ಅರಿವುಗೇಡಿಗೆ ಆರತಿಕೊಟ್ಟರೆ ಆರು ತಿಂಗಳು ನೆಲಕ್ಕಿಡಲಿಲ್ಲ"*
- *ಹಿರಿತನ ಮಾಡ ಹಿರಿಸೋಸಿ ಅಂದರ ಹೊರಕೇರ್‍ಯಾಗ ತೆರೆಕೊಂಡು ಕುತಿತ್ತು."*
- *"ಹೆಣ್ಣಿನ ಮಾತು ಕೇಳುವುದೂ ಒಂದೇ ನರಿಯನ್ನು ನಂಬಿ ಕೊಳಕ್ಕೆ ಬೀಳುವುದು ಒಂದೇ. ಇತ್ಯಾದಿ ಗಾದೆ ಮಾತುಗಳು ಮಹಿಳೆಯರನ್ನು ಬುದ್ದಿ ಇಲ್ಲದವಳು ಎಂಬಂತೆ ಕಲ್ಪಿಸಲಾಗಿದೆ. ಸಮಾಜ ಮಹಿಳೆಯನ್ನು ಕುರಿತಂತೆ ಗ್ರಹಿಸಿಕೊಂಡಿರುವುದರ ಬಗ್ಗೆ ಮೇಲಿನ ಉದಾಹರಣೆಗಳು ರಚನೆಯಾಗಿವೆ.*

ಭಾಷೆಯನ್ನು ಬಳಸುವ ಮತ್ತು ಗ್ರಹಿಸುವ ವಿಧಾನಗಳಲ್ಲಿ ಹೆಣ್ಣು-ಗಂಡುಗಳ ನಡುವೆ ಇರುವ ವ್ಯತ್ಯಾಸವು ಸಂವಹನದ ಮೇಲೆ ಹಾಗೂ ಅಭಿವ್ಯಕ್ತಿಯ ಮೇಲೆ ಪರಿಣಾಮವನ್ನು ಬಿರುತ್ತವೆ. ಗಂಡಸು ನಿರ್ಮಿತವಾದ ಸಮಾಜಿಕ ವ್ಯವಸ್ಥೆಯಲ್ಲಿ ಮಹಿಳೆಯನ್ನು ಗಂಡಸಿಗೆ ಸಹಕಾರಿಯಾದ ವಸ್ತುವಾಗಿ, ಗಂಡಸಿನ ಲೈಂಗಿಕ ಆಸೆಯನ್ನು ಪೂರೈಸುವವಳಾಗಿ, ಪುರುಷನ ಮನೆ, ಮಕ್ಕಳನ್ನು ನೋಡಿಕೊಳ್ಳುವ ದಾಸಿಯಾಗಿ (ಸೇವಕಿಯಾಗಿ), ಪುರುಷನ ಅಗತ್ಯಗಳನ್ನು ಪೂರೈಸುವ ಸರಕಾಗಿ ಗ್ರಹಿತವಾಗಿದ್ದಾಳೆ. ಈ ಎಲ್ಲಾ ಸಂಗತಿಗಳು ಭಾಷೆಯಲ್ಲಿ ನಿರೂಪಿತಗೊಂಡಿವೆ. ಲಿಂಗತಾರತಮ್ಯತೆಯಿಂದ ಕೂಡಿರುವ ಭಾಷೆಯೊಳಗಡೆ ಹೆಣ್ಣು ಗಂಡನ್ನು ಗ್ರಹಿಸುವ ವಿಚಾರಗಳು ಭಿನ್ನವಾಗಿವೆ. ಅವು ಮಹಿಳೆ ಗ್ರಹಿಸಿಕೊಂಡು ಅರ್ಥೈಸಿರುವ ವಿಧಾನ ಮತ್ತು ಒಬ್ಬ ಪುರುಷನನ್ನು ಗ್ರಹಿಸಿಕೊಂಡಿರುವ ವಿಧಾನಗಳನ್ನು ವಿವರಿಸುತ್ತವೆ. ಕೆಲವು ಭಾಷಿಕ ಸಂದರ್ಭಗಳನ್ನು ಇಟ್ಟುಕೊಂಡು ಮಹಿಳೆ ಮತ್ತು ಪುರುಷನನ್ನು ಒಂದೆ ಸಂದರ್ಭದಲ್ಲಿ ಸಮಾಜ ಗ್ರಹಿಸುವ ಭಿನ್ನತೆಯನ್ನು ಮುಂದಿನಂತೆ ಗಮನಿಸಬಹುದಾಗಿದೆ.

**ಪುರಷನನ್ನ ಉದ್ದೇಶಿಸಿ**

**ಸಂದರ್ಭ:** ಅವನು ಸಹೋದ್ಯೋಗಿಗಳ ಜೊತೆ ಮಾತನಾಡುತ್ತಿದ್ದಾನೆ

**ಸಮಾಜದ ಗ್ರಹಿಕೆ:** ಅವನು ಇತ್ತೀಚಿನ ಒಪ್ಪಂದ ಕುರಿತು ಮಾತನಾಡುತ್ತಿರಬೇಕು.

**ಮಹಿಳೆಯನ್ನು ಉದ್ದೇಶಿಸಿ**

**ಸಂದರ್ಭ:** ಅವಳು ಸಹೋದ್ಯೋಗಿಗಳ ಜೊತೆ ಮಾತನಾಡುತ್ತಿದ್ದಾಳೆ.

**ಗ್ರಹಿಕೆ:** ಅವಳು ಹರಟೆ ಹೊಡೆಯುತ್ತಿರಬೇಕು.

**ಪುರಷನನ್ನ ಉದ್ದೇಶಿಸಿ**

**ಸಂದರ್ಭ:** ಅವನು ಸ್ಥಾನದಲ್ಲಿ ಇಲ್ಲ.

**ಗ್ರಹಿಕೆ:** ಮೀಟಿಂಗ್ನಲ್ಲಿ ಇರಬೇಕು.

**ಮಹಿಳೆಯನ್ನು ಉದ್ದೇಶಿಸಿ**

**ಸಂದರ್ಭ:** ಅವಳು ಸ್ಥಾನದಲ್ಲಿ ಇಲ್ಲ.

**ಗ್ರಹಿಕೆ:** ಶಾಪಿಂಗ್ ಹೋಗಿರಬೇಕು.

**ಪುರಷನನ್ನ ಉದ್ದೇಶಿಸಿ**

**ಸಂದರ್ಭ:** ಮೇಲಾಧಿಕಾರಿಯ ಜೊತೆ ಅವನು ಊಟಕ್ಕೆ ಹೋಗಿರಬೇಕು.

**ಗ್ರಹಿಕೆ:** ಅವನು ವೃತ್ತಿಯಲ್ಲಿ ಮೇಲೇರುತ್ತಾನೆ.

**ಮಹಿಳೆಯನ್ನು ಉದ್ದೇಶಿಸಿ**

**ಸಂದರ್ಭ:** ಅವಳು ಮೇಲಾಧಿಕಾರಿಯ ಜೊತೆ ಊಟಕ್ಕೆ ಹೋಗಿದ್ದಾಳೆ.

**ಗ್ರಹಿಕೆ :** ಏನಾದರೂ ಅಕ್ರಮ ಸಂಬಂಧವಿರಬೇಕು.

**ಪುರಷನನ್ನ ಉದ್ದೇಶಿಸಿ**

**ಸಂದರ್ಭ:** ಮೇಲಾಧಿಕಾರಿಯು ಅವನನ್ನು ಬೈಯ್ದಿದ್ದಾರೆ.

**ಗ್ರಹಿಕೆ :** ಅವನು ಸುಧಾರಿಸಿಕೊಳ್ಳುತ್ತಾನೆ.

**ಮಹಿಳೆಯನ್ನು ಉದ್ದೇಶಿಸಿ**

**ಸಂದರ್ಭ:** ಮೇಲಾಧಿಕಾರಿ ಅವಳನ್ನು ಬೈಯ್ದಿದ್ದಾರೆ.

**ಗ್ರಹಿಕೆ:** ಅವಳು ಬಹಳ ನೊಂದುಕೊಂಡಿದ್ದಾಳೆ.

**ಪುರಷನನ್ನು ಉದ್ದೇಶಿಸಿ**

**ಸಂದರ್ಭ:** ಅವನಿಗೆ ನ್ಯಾಯ ಸಮ್ಮತವಲ್ಲದ ರೀತಿಯಲ್ಲಿ ವ್ಯವಹರಿಸಬೇಕಾಗಿದೆ.

**ಗ್ರಹಿಕೆ :** ಅವನಿಗೆ ಕೋಪ ಬಂದಿದೆಯೇ?

**ಮಹಿಳೆಯನ್ನು ಉದ್ದೇಶಿಸಿ**

**ಸಂದರ್ಭ:** ಅವಳಿಗೆ ನ್ಯಾಯ ಸಮ್ಮತವಲ್ಲದ ರೀತಿಯಲ್ಲಿ ವ್ಯವಹರಿಸಬೇಕಾಗಿದೆ.

**ಗ್ರಹಿಕೆ :** ಅವಳು ಅಳುತ್ತಿದ್ದಾಳೆ?

**ಪುರಷನನ್ನ ಉದ್ದೇಶಿಸಿ**

**ಸಂದರ್ಭ:** ಅವನು ವ್ಯವಹಾರದ ಕೆಲಸಕ್ಕಾಗಿ ಪ್ರವಾಸ ಹೋಗುತ್ತಿದ್ದಾನೆ.

**ಗ್ರಹಿಕೆ:** ಅವನ ವೃತ್ತಿಗೆ ಅದು ಒಳ್ಳೆಯದು.

**ಮಹಿಳೆಯನ್ನು ಉದ್ದೇಶಿಸಿ**

**ಸಂದರ್ಭ:** ಅವಳು ವ್ಯವಹಾರದ ಕೆಲಸಕ್ಕಾಗಿ ಪ್ರವಾಸ ಹೋಗುತ್ತಿದ್ದಾಳೆ.

**ಗ್ರಹಿಕೆ:** ಅವಳ ಗಂಡನ ಅಭಿಪ್ರಾಯವೇನು?

ಈ ಬಗೆಯಲ್ಲಿ ಸಮಾಜದೊಳಗಡೆ ಲಿಂಗಾಧಾರಿತವಾಗಿ ಗ್ರಹಿಕೆಗಳಿವೆ. ಒಂದೇ ಸಂದರ್ಭದಲ್ಲಿ ಅವನು ಪುರುಷ ಎಂಬ ಕಾರಣಕ್ಕಾಗಿ ಒಂದು ಬಗೆಯಲ್ಲಿ ಗ್ರಹಿತವಾದರೆ ಅವಳು ಮಹಿಳೆ ಎನ್ನುವ ಕಾರಣಕ್ಕಾಗಿ ಮತ್ತೊಂದು ಬಗೆಯಲ್ಲಿ ಗ್ರಹಿತಳಾಗುತ್ತಾಳೆ.

**೨.೩. ನಿರೂಪಣೆಗಳು**

ಪುರಷ ಪ್ರಧಾನವಾದ ಸಮಾಜ ವ್ಯವಸ್ಥೆ ಮಹಿಳೆಯನ್ನು ಪುರುಷ ಅಧೀನ ನೆಲೆಯಲ್ಲಿಯೇ ನಿರೂಪಿಸಿದೆ. ಲಿಂಗ ತಾರತಮ್ಯತೆಯಿಂದಲೆ ನಿರ್ವಚಿಸಲಾಗಿದೆ. 'ಮಹಿಳೆ ಎನ್ನುವುದು ಅಕಾಡೆಮೆಷಿಯನ್‌ಗಳು ಹಾಗೂ ಶಿಕ್ಷಿತರು ಬಳಸುವ ಪದವಾಗಿದೆ. ದಿನನಿತ್ಯದ ವ್ಯವಹಾರಿಕ ಬದುಕಿನಲ್ಲಿ ಈ ಪದ ಚಾಲ್ತಿಯಲ್ಲಿಲ್ಲ. ವ್ಯವಹಾರಿಕ ಬದುಕಿನಲ್ಲಿ ಹೆಣ್ಣು, ಹೆಂಗಸು ಎನ್ನುವ ಪದಗಳನ್ನು ಬಳಸಲಾಗುತ್ತಿದೆ. ನೀನೂ ಒಂದು ಹೆಣ್ಣು? ಹೆಣ್ಣೆಂದರೆ ಹೀಗಿರಬೇಕು ಎಂದು ಬದುಕಿನ ಸಂದರ್ಭದಲ್ಲಿ ಆಗಾಗ ಹೇಳಲ್ಪಪಡುವ ಆಗಾಗ ಕೇಳಲ್ಪಡುವ ಈ ಮಾತುಗಳು ಹೆಣ್ಣಿನ ಬಗ್ಗೆ ಒಂದು ನಿರ್ದಿಷ್ಟ ಗ್ರಹಿಕೆಗಳನ್ನು ಕಟ್ಟಿಕೊಡುತ್ತಿರುತ್ತವೆ. ಹೆಣ್ಣೆಂದರೆ ಸಹನಶೀಲೆ, ನೀತಿವಂತಳು, ಶೃಂಗಾರಜೀವಿ ಸಂತಾನವನ್ನು ನೀಡುವವಳು ಮೊದಲಾದ ಸಂಗತಿಗಳೆಲ್ಲವೂ ಹೆಣ್ಣೆ. ಈ ರೀತಿ ಇರಬೇಕು ಎನ್ನುವ ನಿರೂಪಣೆಗಳಲ್ಲಿ ಸೇರಿಕೊಂಡಿರುತ್ತವೆ. ಈ ನಿರ್ವಚನ ಪಿತೃಪ್ರಧಾನ ಚೌಕಟ್ಟಿನಲ್ಲಿಯೇ ಮಹಿಳೆಯನ್ನು ನಿರೂಪಿಸುತ್ತವೆ.

ಗಂಡು ಮತ್ತು ಹೆಣ್ಣಿನ ನಡುವೆ ಇರುವ ಒಂದೆ ಒಂದು ನಿಜವಾದ ವ್ಯತ್ಯಾಸವೆಂದರೆ ಶಾರೀರಿಕ ವ್ಯತ್ಯಾಸವಾಗಿದ್ದು, ಜೈವಿಕವಾಗಿವೆ. ಉಳಿದೆಲ್ಲ ವ್ಯತ್ಯಾಸಗಳೂ ಸಮಾಜದಿಂದ ರಚಿತವಾದ ನಿರೂಪಣೆಗಳಾಗಿವೆ. ಇದು ಒಂದು ಭ್ರಮೆ, ಇವು ಸತ್ಯವಾದವುಗಳಲ್ಲ. ಈ ಪ್ರಕೃತಿಯಲ್ಲಿ ಎಲ್ಲವೂ ಗಂಡು ಮತ್ತು ಹೆಣ್ಣು ಎಂದು ಎರಡು ವಿಧದಲ್ಲಿ ಇರುವುದನ್ನು ಕಾಣತ್ತೇವೆ. ಈ ಸೃಷ್ಟಿಯ ಕ್ರಿಯೆ ನಿರಂತರವಾಗಿ ಮುಂದುವರಿಯಲು ಇವು ಅತೀ ಅವಶ್ಯಕವಾಗಿವೆ. ಇದೇ ರೀತಿ ಮಾನವರೂ ಕೂಡ ಗಂಡು ಹೆಣ್ಣು ಎಂಬ ಎರಡು ವಿಧದಲ್ಲಿ ಕಾಣುತ್ತಾರೆ. ಪ್ರತಿಯೊಬ್ಬ ವ್ಯಕ್ತಿಯೂ ಗಂಡು

ಅಥವಾ ಹೆಣ್ಣಾಗಿ ಜನ್ಮತಾಳುತ್ತಾರೆ. ತನ್ನ ಲಿಂಗವನ್ನು ಆಯ್ಕೆ ಮಾಡಿಕೊಳ್ಳಲು ಯಾರಿಗೂ ಸಾಧ್ಯವಿಲ್ಲ. ಒಂದು ರೀತಿಯಲ್ಲಿ ಹೆಣ್ಣು ಅಥವಾ ಗಂಡಾಗಿ ಹುಟ್ಟುವುದು ಆಕಸ್ಮಿಕ. ಮಾನವ ಜನಾಂಗ ಅನುಕೂಲವಾಗುವಂತೆ ಮಾನವ ಶರೀರವನ್ನು ರೂಪಿಸಲ್ಪಟ್ಟಿದೆ. ಮಹಿಳೆ ತಾಯಿಯಾಗುವಂತೆ ಮತ್ತು ಪುರುಷ ತಂದೆಯಾಗುವಂತೆ ನಿರ್ಮಿಸಲಾಗಿದೆ. ಹೆಣ್ಣು ತಾಯಿಯಾಗಲು ಮತ್ತು ಗಂಡು ತಂದೆಯಾಗಲು ಅವಶ್ಯಕ ಅಂಗಾಂಗಗಳು ವ್ಯತ್ಯಾಸವಾಗಿವೆ. ಈ ಶಾರೀರಿಕ ವ್ಯತ್ಯಾಸಗಳು ಮೇಲಿನ ಪ್ರಕ್ರಿಯೆಗೆ ಅನುಗುಣವಾಗಿರುವಂತೆ ಸಂಬಂಧ ಕಲ್ಪಿಸಲಾಗಿದೆ. ಇವು ನಿಜವಾದ ವ್ಯತ್ಯಾಸ. ಇವು ಜೈವಿಕವಾಗಿ ಇರುವ ಪ್ರಕೃತಿ ಸಹಜವಾದ ಭಿನ್ನತೆಗಳು.

ನಮ್ಮ ಸಮಾಜವನ್ನು ಗಮನಿಸಿದಾಗ ಸಮಾಜದಲ್ಲಿ ಒಂದು ವ್ಯವಸ್ಥೆಯು ಅಂತರ್ಗತವಾಗಿ ಕೆಲಸ ನಿರ್ವಹಿಸುತ್ತಿರುತ್ತದೆ. ಈ ಸಮಾಜದಲ್ಲಿ ಮನುಷ್ಯರು ಜೀವಿಸುತ್ತಿದ್ದಾರೆ. ಸಾಮಾಜಿಕ ನಂಬಿಕೆಗಳ ಮೇಲೆ ಬದುಕುತ್ತಿರುವವರಿದ್ದಾರೆ. ಸಾಮಾಜಿಕ ನಂಬಿಕೆಗಳು ಹೇಗಿವೆ ಎಂದು ನಾವು ಈಗಾಗಲೆ ನೋಡಿದ್ದೇವೆ. ಈ ನಂಬಿಕೆಗಳು ಅಸಮಾನತೆಯ ನೆಲೆಯಲ್ಲಿ ಕೂಡಿಕೊಂಡಿವೆ. ಸಮಾಜವೊಂದು ಅಸ್ತಿತ್ವದಲ್ಲಿರುವುದರಿಂದ ಆ ಮಾದರಿಯನ್ನು ಇನ್ನಷ್ಟು ಮತ್ತಷ್ಟು ವೈಭವೀಕರಿಸಿ ನಿರೂಪಿಸಿರುವ ಅನೇಕ ನಿರ್ವಚನಗಳಿವೆ.

ಕಾಮಸೂತ್ರದಲ್ಲಿ ಹೆಣ್ಣನ್ನು ಶರೀರತ್ವದ ಭಾಗವಾಗಿ ಕಾಮ ಪುರಷಾರ್ಥ ಸಾಧನೆಯನ್ನು ನಿರೂಪಿಸುತ್ತದೆ. ಇಲ್ಲಿ ಹೆಣ್ಣಿನ ಅಸ್ತಿತ್ವ ಮನುಸ್ಮೃತಿಯಲ್ಲಿ ಕಟ್ಟಿಕೊಡುವ ಶಾರೀರಿಕ ಅಸ್ತಿತ್ವಕ್ಕೆ ಸಮಾನವಾದುದು. ಹೆಣ್ಣನ್ನು ಶಾರೀರಿಕ ಅಸ್ತಿತ್ವಕ್ಕಿಳಿಸಿದ ಪರಿಣಾಮವಾಗಿ ಆಕೆ ನಾಲ್ಕು ಗೋಡೆಗಳೊಳಗಿನ ನಿರ್ಬಂಧಿತ ಜೀವನಕ್ಕೆ ಬಲಿಯಾಗಿದ್ದಾಳೆ. ಸಾಮಾಜಿಕ ನೆಲೆಯಿಂದ ನಿರ್ವಚನಗೊಂಡ ಅಥವಾ ಮಾಧ್ಯಮಗಳಿಗೆ ವಿಸ್ತರಿಸಿಕೊಂಡು ಹೋಲಿಸಿದರೆ ಮಹಿಳೆ ಇಲ್ಲಿಯೂ ಕೂಡ ವಾತ್ಸಾಯನನ ಕಾಮಸೂತ್ರದಲ್ಲಿ ನಿರ್ವಚಿಸಲ್ಪಟ್ಟ ಹೆಣ್ಣಿನ ದೇಹದ ಸ್ವರೂಪದಲ್ಲಿಯೇ ವಿಸ್ತರಣೆಗೊಳ್ಳುತ್ತಿದ್ದಾಳೆ. ಒಂದು ಕಡೆ ಸ್ತ್ರೀಯರ ಅಭಿವೃದ್ಧಿ, ಸಬಲೀಕರಣಗಳೆಂಬ ಸಿದ್ಧಾಂತಗಳು ಮಹಿಳೆಯರನ್ನು ಸಮಾಜದ ಪ್ರಧಾನಧಾರೆಗೆ ತರುವ ಪ್ರಯತ್ನ ನಡೆಸಿದರೆ ಇನ್ನೊಂದೆಡೆ ಮಹಿಳೆಯನ್ನು ದೇಹಕೇಂದ್ರಿತವಾಗಿ ನೋಡುವ ಮಾನದಂಡವನ್ನು ಸದ್ದಿಲ್ಲದೇ ಸಮಾಜದಲ್ಲಿ ಹರಡುತ್ತಲಿವೆ.

ಹೆಣ್ಣನ್ನು ಗರ್ಭಕೋಶ ಮತ್ತು ಲೈಂಗಿಕತೆಗೆ ಸೀಮಿತಗೊಳಿಸಿ ನೋಡುವುದನ್ನು ಸ್ತ್ರೀವಾದಿ ಚಿಂತನೆಗಳು ಪ್ರಬಲವಾಗಿ ವಿರೋದಿಸುತ್ತಾ ಬಂದಿದ್ದಾರೆ. ಸಮಾಜದಲ್ಲಿ ಅಸ್ತಿತ್ವವಿರುವ ಎಲ್ಲ ಭಾಷೆ ಮಾನದಂಡಗಳು ಪುರುಷನ ನೇರಕ್ಕೆ ರೂಪಿತವಾಗಿರುವುದರಿಂದ ಭಾಷೆ ಅಲ್ಲಿ ಮಹಿಳೆಯ ಒಳಗೊಳ್ಳುವಿಕೆ ಅಥವಾ ಭಾಗವಹಿಸುವಿಕೆ ಗೌಣವೇ ಆಗಿದೆ. ಸಮಾಜ ರೂಪಿಸುವ ಪುರುಷ ಪ್ರಧಾನ ವ್ಯವಸ್ಥೆಯು ಹೇಗೆ ಭಾಷೆಯೊಳಗಡೆ ಪಾತ್ರನಿರ್ವಹಿಸುತ್ತವೆ. ಈ ವಿಚಾರವನ್ನು ನೋಡುವಾಗ ಮೊದಲು

ಎದುರುಗೊಳ್ಳುವ ಪ್ರಶ್ನೆ ಮಹಿಳೆಯರನ್ನು ನಿರ್ವಚಿಸುವ ಪ್ರತಿನಿಧೀಕರಿಸುವ ಮಾನದಂಡ ಯಾವುದು ಎನ್ನುವುದನ್ನು ಅರ್ಥೈಸಿಕೊಳ್ಳುವ ಅಗತ್ಯವಿದೆ.

ಪ್ರಾಚೀನ ಕಾಲದ ಮಹಿಳಾ ಪ್ರತಿನಿಧೀಕರಣಕ್ಕೂ, ಆಧುನಿಕ ಕಾಲದ ಮಹಿಳಾ ಪ್ರತಿನಿಧೀಕರಣಕ್ಕೂ ವ್ಯತ್ಯಾಸವಿರುವುದನ್ನು ಕಾಣಬಹುದು. ಹೀಗೆ ಪ್ರತಿನಿಧಿಸುವ ಮಹಿಳೆಯರನ್ನು ಏಕಪ್ರಕಾರವಾದ ಮಾದರಿಯಲ್ಲಿ ನೋಡಿದರೆ ಅಲ್ಲಿ ಕೇವಲ ಏಕಪ್ರಕಾರದ ಫಲಿತಾಂಶ ದೊರೆಯಲಿಕ್ಕಿಲ್ಲ. ಹೇಗೆಂದರೆ ಪ್ರತಿನಿಧೀಕರಣ ಎಂಬ ಶಬ್ದವನ್ನು ಗಮನಿಸಿದಾಗ ಅದು ಭಿನ್ನತೆಯ ಸ್ವರೂಪದಲ್ಲಿ ಕಂಡುಬರುತ್ತದೆ. ಹೇಗೆಂದರೆ ಹತ್ತು ಮಹಿಳೆಯರಲ್ಲಿ ಒಬ್ಬ ಮಹಿಳೆಯನ್ನು ಪ್ರತಿನಿಧಿಯಾಗಿ ತೆಗೆದುಕೊಂಡಾಗ ಅಲ್ಲಿ ಪ್ರತಿನಿಧಿಸುವ ಮಹಿಳೆಯ ಬದುಕು, ಬವಣೆ, ಅನುಭವಗಳ ಕುರಿತು ಮಾತ್ರ ಬದುಕು, ಬವಣೆ, ಅನುಭವಗಳು ಕೈ ಬಿಟ್ಟಂತಾಗುತ್ತವೆ. ಹಾಗಾಗಿ ಒಬ್ಬ ಮಹಿಳೆಯಿರುವಂತೆ ಇನ್ನೊಬ್ಬ ಮಹಿಳೆ ಇರುವುದರಲ್ಲಿ ರೂಪ, ಗುಣ, ಗಾತ್ರ, ಎತ್ತರವಲ್ಲದೇ ಆರ್ಥಿಕ, ಸಾಮಾಜಿಕ, ಕೌಟುಂಬಿಕ ಪರಿಸ್ಥಿತಿಗಳು, ಶಿಕ್ಷಣ, ಸಂಸ್ಕೃತಿ, ಧರ್ಮ, ವೇಷಭೂಷಣಗಳು, ವಿವಾಹಿತ–ಅವಿವಾಹಿತೆ, ಉದ್ಯೋಗ, ಅನುಭವ ಇತ್ಯಾದಿ ಅಂಶಗಳಿಂದಲೂ ಒಬ್ಬರು ಮತ್ತೊಬ್ಬರಿಗಿಂತ ಭಿನ್ನವಾಗಿರುತ್ತಾರೆ. ಆದರೆ ಅವರೆಲ್ಲರ ಈ ಭಿನ್ನತೆಯಲ್ಲೂ ಒಂದು ಸಾಮ್ಯತೆಯು ಸಾಧ್ಯವಿದೆ. ಪ್ರತಿಯೊಬ್ಬ ಸ್ತ್ರೀಯೂ ಪುರುಷ ಪ್ರಧಾನ ಸಂಸ್ಕೃತಿಯಲ್ಲಿ ಜೀವಿಸುತ್ತಿದ್ದಾಳೆ ಹಾಗೂ ಪುರುಷರು ಸ್ತ್ರೀಯರನ್ನು ನೋಡುವ ದೃಷ್ಟಿಕೋನ ಇವೆಲ್ಲ ಒಂದೇ ಆಗಿದೆ. ವ್ಯವಸ್ಥೆಯಲ್ಲಿ ಅಸ್ತಿತ್ವವಿರುವ ಜ್ಞಾನ ಮೀಮಾಂಸೆಗಳೆಲ್ಲವೂ ಪುರುಷ ರಚಿತವಾಗಿರುವುದರಿಂದ ಅವನು ನಿರೂಪಿಸಿದ ಮಹಿಳೆಯ ಚಿತ್ರಣವೇ ದೊರೆಯುತ್ತದೆ.

ಮಹಿಳೆಯರು ಸಮಾಜದ ಬೇಕು ಬೇಡ ಅಗತ್ಯಗಳಿಗೆ ಅನುಗುಣವಾಗಿ ಚಿತ್ರಿತವಾಗಿರುವುದಾದರೆ ಹಾಗೆ ಸಮಾಜ ಅವರನ್ನು ನಿರೂಪಿಸಿಕೊಂಡಿದೆ. "ಭಾಷೆಯು ಮತ್ತೆ ಮತ್ತೆ ಬಳಕೆಯಾಗುವ ಮೂಲಕ ನಿರಂತರವಾಗಿ ಜನ ಸಂಪರ್ಕದಲ್ಲಿ ಇರುವ ಮೂಲಕ ಸಮಾಜದ ಮೇಲೆ ಪ್ರಭಾವ ಬೀರುತ್ತದೆ. ತನ್ನದೇ ಆದ ಬಳಕೆಯ ಚರಿತ್ರೆಯನ್ನು ಕಟ್ಟಿಕೊಳ್ಳುತ್ತದೆ. ಈ ಚರಿತ್ರೆಯಲ್ಲಿ ಕೇವಲ ಪದಗಳ ಕಥೆ ಮಾತ್ರ ಇರುವುದಿಲ್ಲ. ಆ ಪದಗಳನ್ನು ಬಳಸಿದ ಜನರ ಚಹರೆ ಮತ್ತು ಅಂತಸ್ತುಗಳು ಕೂಡಾ ಹೆಣೆದುಕೊಂಡಿರುತ್ತವೆ"[೧೧].

ಲಿಂಗತಾರತಮ್ಯವನ್ನು ನಿರ್ವಾತದಲ್ಲಿ ಸೃಷ್ಟಿಸಿಲ್ಲ. ಗಂಡು ಸಹಜ, ಹೆಣ್ಣು ವಿಕಲ್ಪ ಎಂಬ ವರ್ಗೀಕರಣವನ್ನು ಹುಟ್ಟುಹಾಕಿದೆವು. ಹೀಗೆ ಮಾಡಲು ಆಧಾರಗಳೇನೂ ಇರಲಿಲ್ಲ. ಇದೊಂದು ಊಹೆಯ ರಚನೆ. ಒಂದು ಬಗೆಯಲ್ಲಿ ಕಣಕಟ್ಟುವಿನ ಮಾದರಿ. "ಸಾಮಾಜಿಕವಾಗಿ ಹೆಣ್ಣುತನದ ಪಾತ್ರಗಳನ್ನು, ನಿಯೋಗಗಳನ್ನು, ಸ್ವರೂಪವನ್ನು ,ಅದರ ಕರ್ತವ್ಯಗಳನ್ನು ನಾವು ರಚಿಸಿಕೊಂಡಿದ್ದೇವೆ, ಪೋಷಿಸುತ್ತಿದ್ದೇವೆ ಮತ್ತು ಬೆಳೆಸುತ್ತಿದ್ದೇವೆ. ಅದನ್ನು ಪೋಷಿಸಲು ಬೆಳೆಸಲು ಮೇಲಿಂದ ಮೇಲೆ

ಬೇಕಾದ ಪ್ರಯತ್ನಗಳನ್ನು ಸಾಮಾಜಿಕವಾಗಿ ಮಾಡಲಾಗುತ್ತಿದೆ."[೧೨] ತನಗೆ ಬೇಕಾದಂತೆ ಸಂರಚಿಸಿಕೊಂಡ ಪುರುಷಪ್ರಧಾನ ವ್ಯವಸ್ಥೆ[೧೩] (She is not born but she is made) ಹಾಗಾಗಿಯೇ ತನ್ನ ಅನುಕೂಲತೆಗೆ ತಕ್ಕಂತೆ ಮಹಿಳೆಯನ್ನು ಸಮಾಜದಲ್ಲಿ ನಡೆಸಿಕೊಳ್ಳಲಾಗುತ್ತದೆ.

- *ಹೆಣ್ಣಿನ ಮನಸ್ಸು ಚಂಚಲ*
- *ಚಂಚಲತೆಯೆ ನಿನ್ನ ಹೆಸರೇ ಹೆಣ್ಣು*

ಎಂಬ ನಿರೂಪಣೆಯಿಂದ ಮಹಿಳೆಯ ಮನಸ್ಸು ಧೃಡವಾದುದಲ್ಲ ಎಂಬುದನ್ನು ನಿರೂಪಿಸುತ್ತದೆ. ಸಮಾಜ ಬಯಸುವ ಹಾಗೆ ಮಹಿಳೆಯ ದೇಹ ರಚನೆ, ಬಣ್ಣ, ಆಕಾರ, ದಪ್ಪ, ಎತ್ತರ ಹೇಗಿರಬೇಕು ಎಂಬುದಾಗಿ ಪೂರ್ವ ನಿರೂಪಿತವಾದ ಅಂಶಗಳು ಪುರುಷಪ್ರಧಾನ ಸಮಾಜಕ್ಕೆ ಎಲ್ಲವು ಅನುಕೂಲಸ್ಥ ರೀತಿಯಲ್ಲಿ ಇರಬೇಕು. ಪಿತೃಪ್ರಾಧಾನ್ಯತೆಯ ಸಾಂಸ್ಕೃತಿಕ ಅಂಶಗಳು ಭಾಷೆಯಲ್ಲಿ ಹೀಗೆ ಧ್ವನಿ ಪಡೆಯುತ್ತವೆ. ರಾಜಕಾರಣಿಗಳು ಅನೇಕ ಸನ್ನಿವೇಶಗಳಲ್ಲಿ ನೀಡಿರುವ ಹೇಳಿಕೆಗಳು ದ್ಯೋತಕ ಮಹಿಳೆ ವಿರುದ್ಧದ ಪೂರ್ವಗ್ರಹಗಳನ್ನು ಬಿಂಬಿಸುವಂತಹ ಭಾಷಾ ಪ್ರಯೋಗಗಳು ದೋಷಯುಕ್ತ ಎಂದು ಗುರುತಿಸುವ ಪ್ರಜ್ಞೆ ಸಮಾಜದಲ್ಲಿ ಮೂಡಿದೆ. ಆದರೇನು? ರಾಷ್ಟ್ರದ ನೀತಿಗಳನ್ನು ರೂಪಿಸುವ ಪ್ರಕ್ರಿಯೆಯಲ್ಲಿ ಪಾಲುದಾರರಾದ ರಾಜಕಾರಣಿಗಳ 'ಉಕ್ತಿ'ಗಳಲ್ಲಿ ಬಿಂಬಿತವಾಗುವ ನಿರೂಪಿಸಿಕೊಳುತ್ತಿರುವುದು ಹೊಸಬಗೆ ಎನ್ನಬಹುದು. ಕೇಂದ್ರ ಕಲ್ಲಿದ್ದಲು ಸಚಿವ ಶಿವಪ್ರಕಾಶ್ ಜೈಸ್ವಲ್ ಮಹಿಳಾ ಕಾಲೇಜಿನ ಕವಿ ಸಮ್ಮೇಳನದಲ್ಲಿ ಆಡಿದ ಮಾತು ಭಾರತ ಟಿ-೨೦ ಕ್ರಿಕೆಟ್‌ನಲ್ಲಿ ಪಾಕಿಸ್ತಾನದ ವಿರುದ್ದ ಜಯ ಸಾಧಿಸಿತ್ತು. 'ಹೊಸ ಗೆಲುವಿನ ಸಂತೋಷ ಹೊಸ ವಿವಾಹದಂತೆ, ಕಾಲಕ್ರಮೇಣ ಹಳೆಯ ಗೆಲುವು ಹಾಗೂ ವಯಸ್ಸಾದ ಪತ್ನಿಯಲ್ಲಿ ಮೊದಲ ಮೋಹಕ ಶಕ್ತಿ ಮರೆಯಾಗುತ್ತದೆ' ಎಂದಿದ್ದರು.

- *ಕೆಲವೇ ದಿನಗಳ ಹಿಂದೆ ಹರಿಯಾಣದ ಓಂಪ್ರಕಾಶ ಚೌತಾಲ ಅವರು ಅಪ್ರಾಪ್ತ ವಯಸ್ಸಿನ ಹೆಣ್ಣು ಮಕ್ಕಳ ವಿವಾಹ ಅತ್ಯಾಚಾರಕ್ಕೆ ಮದ್ದು ಎನ್ನುವ ಉದಾರ ಉಪದೇಶ ಮಾಡಿದ್ದರು.*
- *ಅದೇ ರಾಜ್ಯ ಕಾಂಗ್ರೆಸ್ ಶಾಸಕ ಧರಂವೀರ್ ಅವರು 'ಬಹುತೇಕ ಅತ್ಯಾಚಾರ ಘಟನೆಗಳು ಪರಸ್ಪರ ಒಪ್ಪಿಗೆಯಿಂದಾಗುವ ಪ್ರಕ್ರಿಯೆ ಎಂದಿದ್ದಾರೆ.*
- *ಕಾಂಗ್ರೆಸ್ ಪಕ್ಷದ ಪ್ರಧಾನ ಕಾರ್ಯದರ್ಶೀ ದಿಗ್ವಿಜಯ ಸಿಂಗ್ ಅವರು ಕಳೆದ ಕೆಲದಿನಗಳ ಹಿಂದೆ 'ಮಧ್ಯ ಪ್ರದೇಶದ ಮಂದ್ಸೌರ್‌ನ ಕಾಂಗ್ರೆಸ್ ಸದಸ್ಯೆ ಮೀನಾಕ್ಷಿ ನಟರಾಜನ್ ಅವರನ್ನು ಶ್ಲಾಘಿಸುತ್ತಾ ನಮ್ಮ ಎಂ.ಪಿ ಮೀನಾಕ್ಷಿ ನಾಟರಾಜನ್ ಗಾಂಧೀವಾದಿ, ಸರಳ ಹಾಗೂ*

*ಪ್ರಾಮಾಣಿಕ ವ್ಯಕ್ತಿ. ಕ್ಷೇತ್ರದಲ್ಲಿ ಚೆನ್ನಾಗಿ ತಿರುಗಾಡುತ್ತಾರೆ. ನಾನು ರಾಜಕಾರಣದಲ್ಲಿ ಅನುಭವಿ ಅಕ್ಕಸಾಲಿಯಾಗಿ ಯಾರು ಏನು ಎಂದು ಅಳೆಯಬಲ್ಲೆ. ಮೀನಾಕ್ಷಿ 'ಸೌ ಪ್ರತಿಶತ್ ಟಂಚ್ ಮಾಲ್ ಹೈ' ಎಂದಾಗ ಸಭೆಯಲ್ಲಿ ನಗೆಯ ಬುಗ್ಗೆ ಎದ್ದಿತು. ಭೋಜ್ ಪುರಿ ಭಾಷೆಯ 'ಟಂಚ್ ಮಾಲ್' ನುಡಿಗಟ್ಟನ್ನು ಅನುವಾದ ಮಾಡಿದಲ್ಲಿ ಸ್ಥೂಲವಾಗಿ ಅದು ಹೊರಡಿಸುವ ಅರ್ಥ '೧೦೦% ಸೆಕ್ಸಿ ಮಹಿಳೆ' 'ಆಡುಮಾತಿನಲ್ಲಿ ಬಳಕೆಯಲ್ಲಿರುವ ಈ ಪದದ ಅರ್ಥವನ್ನು ಸಂದರ್ಭದಲ್ಲಿಟ್ಟು ಗ್ರಹಿಸಬೇಕಷ್ಟೇ ಅದರಲ್ಲಿ ತಪ್ಪೇನೂ ಇಲ್ಲ. ಎಂದು ಮೀನಾಕ್ಷಿ ಅವರು ಸಮರ್ಥಿಸಿಕೊಳ್ಳುವ ಮೂಲಕ ಅಧಿಕಾರ ಹಾಗೂ ಲಿಂಗ ರಾಜಕಾರಣದ ಶ್ರೇಣಿಕೃತ ವ್ಯವಸ್ಥೆಯೊಳಗಿನ ತಮ್ಮ ಅಸಹಾಯಕತೆಯನ್ನು ಪ್ರದರ್ಶಿಸಿದ್ದಾರೆ. ಇದು ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಹೆಣ್ಣಿನ ಕುರಿತಾದ ಮನೋಭಾವ ಪ್ರತಿಬಿಂಬಿಸುತ್ತದೆ.*

ಸಮಾಜ ಮಹಿಳೆಯನ್ನು ಒಂದು ಕಡೆಯಲ್ಲಿ ವೈಭವೀಕೃತವಾಗಿ ನಿರೂಪಿಸುತ್ತದೆ. ತಾಯಿ, ಮಾತೆ, ಭೂಮಿತಾಯಿ, ಅಧಿದೇವತೆ, ಸಹನಾಮಯಿ, ಕರುಣಾಮಯಿ ಇತ್ಯಾದಿಯಾಗಿ ಮತ್ತೊಂದು ಕಡೆಯಲ್ಲಿ ಮಹಿಳೆಯ ಲೈಂಗಿಕ ವಸ್ತುವಿನಂತೆ ಪಾತ್ರಗಳಲ್ಲಿದೆ. ವ್ಯಕ್ತಿಯಾಗಿ ಪರಿಗಣಿಸುವುದೆ ಇಲ್ಲ. ಸೌಂದರ್ಯ 'ಶೃಂಗಾರ'ಗಳಾಚೆಗೆ ಹೆಣ್ಣಿನ ವ್ಯಕ್ತಿತ್ವವನ್ನು ಪರಿಭಾವಿಸುವ ಮನಸ್ಸುಗಳು ಎಲ್ಲಿ? ಎಂಬ ಪ್ರಶ್ನೆ ಕಾಡುತ್ತೆ.

ದಿಗ್ವಿಜಯ ಸಿಂಗ್ ಅವರು ಟ್ವೀಟ್ ಮಾಡಿದ್ದ ಮಾತುಗಳು 'ಅರವಿಂದ ಕೇಜ್ರಿವಾಲ್ ಅವರು ರಾಖಿ ಸಾವಂತ್‌ಳಂತೆ, ಇಬ್ಬರು ಬಯಲುಗೊಳಿಸಲು ಯತ್ನಿಸುತ್ತಾರೆ. ಆದರೆ ಏನೂ ಪ್ರಯೋಜನವಿಲ್ಲ. ಪುರುಷ ಪ್ರಾಧಾನ್ಯವನ್ನು ಮಹಿಳೆಯ ಕೀಳರಿಮೆಯನ್ನು ಪೋಷಿಸುವಂತಹ ಭಾಷೆ ಇದು. ಈ ಬಗೆಯ ನಿರೂಪಣೆಯನ್ನು "ಸೆಕ್ಸಿಸ್ಟ್ ಭಾಷೆ" ಎನ್ನುವುದು ಬದುಕಿನ ಹಲವು ವಲಯಗಳಲ್ಲಿ ಪುರುಷ ಪ್ರಾಧಾನ್ಯದ ದೋಷಪೂರ್ಣ ಗ್ರಹಿಕೆಗಳನ್ನು 'ಸೆಕ್ಸಿಸ್ಟ್' ಭಾಷಾ ಪ್ರಯೋಗಗಳು ಪ್ರತಿನಿಧಿಸುತ್ತವೆ. ಇತ್ತೀಚಿನ ದಿನಗಳಲ್ಲಿ ಹೀಗೆ 'ಸೆಕ್ಸಿಸ್ಟ್' ಮಾತುಗಳನ್ನಾಡಿದ ರಾಜಕಾರಣಿಗಳ ದೊಡ್ಡ ಪಟ್ಟಿಯೇ ಸಿಗುತ್ತದೆ. ಹೇಮಾಮಾಲಿನಿಯ ಕೆನ್ನೆಗಳೆಷ್ಟು ಮೃದುವಾಗಿ ಬಿಹಾರದ ರಸ್ತೆಗಳನ್ನು ನಿರ್ಮಿಸುವ ಭರವಸೆಯನ್ನು ನೀಡಿದ್ದ ರಾಷ್ಟ್ರೀಯ ಜನತಾದಳ ಮುಖ್ಯಸ್ಥ ಲಾಲೂಪ್ರಸಾದ್ ಯಾದವ್ ಹೇಳುತ್ತಾನೆ.

- *ನಗರಗಳ ತುಂಡುಗೂದಲಿನ (ಬಾಬ್ ಕಟ್ಟಿ ಔರತೇ) ಶ್ರೀಮಂತ ಮಹಿಳೆಯರಿಗಷ್ಟೇ ಈ ಮಸೂದೆಯಿಂದ ಲಾಭವಾಗುತ್ತದೆ. ಎಂದು ಲೋಕಸಭೆಯಲ್ಲಿ ಮಹಿಳಾ ಮೀಸಲಾತಿ ಮಸೂದೆ ವಿರೋಧಿಸಿದ್ದ ಜನತಾದಳ (ಸಂಯುಕ್ತ) ಅಧ್ಯಕ್ಷ ಶದರ್ ಯಾದವ್.*

- *ಭೋಪಾಲ್‌ನಲ್ಲಿ ತಮ್ಮ ಪಕ್ಷದ ಕಚೇರಿಯಲ್ಲಿ ವರದಿಗಾರ್ತಿಯೊಬ್ಬರನ್ನು ' ಬ್ಯೂಟಿಫುಲ್' ಎಂದು ಕರೆಯುವ ಮೂಲಕ ದಿಗ್ಭ್ರಮೆ ಮೂಡಿಸಿದ್ದರು. ಯಾದವ್ ಅವರು ವಿಭಿನ್ನ ಸಂದರ್ಭಗಳಲ್ಲಿ ಮಧ್ಯಪ್ರದೇಶ ಹಾಗೂ ಬಿಹಾರಗಳನ್ನು ಪ್ರತಿನಿಧಿಸಿದುದರಿಂದ ಯಾವುದನ್ನು ಇಚ್ಛೆಪಡುತ್ತೀರಿ ಎಂದು*

ಪ್ರಶ್ನೆ ಕೇಳಿದ್ದ ವರದಿಗಾರ್ತಿಗೆ 'ಇಡೀ' ರಾಷ್ಟ್ರವೇ ಸುಂದರ' ಎನ್ನುತ್ತಾ ನಂತರ ನೀವೂ ತುಂಬಾ ಸುಂದರಿ' ಎಂದು ಹೇಳಿ ಅನಿರೀಕ್ಷಿತ ಆಘಾತ ನೀಡಿದ್ದರು.

- ಉತ್ತರ ಪ್ರದೇಶದ ಖಾದಿ ಮತ್ತು ಗ್ರಾಮೋದ್ಯೋಗ ಸಚಿವ ರಾಜಾರಾಂ ಪಾಂಡೆ ಅವರು ಬಹಿರಂಗ ಸಭೆಯಲ್ಲಿ ಸುಲ್ತಾನ್‌ಪುರದ ಮಹಿಳಾ ಜಿಲ್ಲಾಧಿಕಾರಿಯ ಸೌಂದರ್ಯವನ್ನು ಹೊಗಳಿದರು 'ಎರಡನೇ ಬಾರಿಗೆ ಸುಲ್ತಾನ್‌ಪುರದ ಉಸ್ತುವಾರಿ ಸಚಿವನಾಗಿದ್ದೇನೆ ಪ್ರತಿ ಬಾರಿಯೂ ಸುಂದರ ಮಹಿಳಾ ಡಿ.ಸಿ ಗಳ ಜೊತೆ ಕೆಲಸ ಮಾಡುವ ಅವಕಾಶ ಸಿಕ್ಕಿದೆ. ಈ ಹಿಂದೆ ಕಾಮಿನಿ ಚೌಹಾನ್ ರತನ್ ಅವರು ಡಿ.ಸಿ ಆಗಿದ್ದಾಗ ಅವರ ಸೌಂದರ್ಯಕ್ಕೆ ಸರಿಸಾಟಿಯಾಗುವವರು ಬೇರೆ ಯಾರೂ ಇಲ್ಲ ಎಂದು ಭಾವಿಸಿದ್ದೆ . ಆದರೆ ಹೊಸ ಡಿ.ಸಿ ಅಧಿಕಾರ ವಹಿಸಿಕೊಂಡ ಮೇಲೆ ಜೊತೆಗೆ ಇವರು ಇನ್ನೂ ಹೆಚ್ಚು ಸುಂದರಿ ಎಂದು ತಿಳಿಯಿತು. ಇವರು ಮೃದುಭಾಷಿ ಅಷ್ಟೇ ಅಲ್ಲ ಒಳ್ಳೆಯ ಆಡಳಿತಗಾರ್ತಿ ಕೂಡ ಎಂದು ಬಹಿರಂಗ ಸಭೆಯಲ್ಲಿ ಹೇಳಿದಾಗ ಇರಿಸುಮುರಿಸು ಅನುಭವಿಸಿದ ಜಿಲ್ಲಾಧಿಕಾರಿ ಕೆ. ಧನಲಕ್ಷ್ಮೀ ತಮ್ಮ ಭಾವನೆಯನ್ನು ತೋರಗೊಡದೆ ಮುಖ ಮುಚ್ಚಿಕೊಂಡರು ಎಂಬುದಾಗಿ ವರದಿಯಾಗಿತ್ತು.

- ರಾಷ್ಟ್ರಪತಿ ಅವರ ಪುತ್ರ ಹಾಗೂ ಕಾಂಗ್ರೆಸ್ ಸಂಸತ್ ಸದಸ್ಯ ಅಭಿಜಿತ್ ಮುಖರ್ಜಿಯಂತೂ ನೆರಿಗೆವಿದ್ದ ಮುಖಕ್ಕೆ ಬಣ್ಣ ಹಚ್ಚಿದ ಮಹಿಳೆಯರು ಡಿಸ್ಕೋಥೆಕ್ ಹೋಗಿ ನಂತರ ತಮ್ಮ ಆಕ್ರೋಶ ವ್ಯಕ್ತಪಡಿಸಲು ಇಂಡಿಯಾಗೇಟ್ ಬಳಿ ಬರುತ್ತಾರೆ. ಎಂದು ದೆಹಲಿ ವಿದ್ಯಾರ್ಥಿನಿ ಅತ್ಯಾಚಾರ ಪ್ರಕರಣದ ಪ್ರತಿಭಟನಾಕಾರರ ವಿರುದ್ದ ಭಾರಿ ಕ್ಷುಲ್ಲಕವಾಗಿ ಮಾತನಾಡಿದ್ದರು ನಿರೂಪಿಸುತ್ತಾ ಹೋದರೆ ಇಂತಹ ಮಾತುಗಳ ಉದಾಹರಣೆಗಳು ಮುಗಿಯುವುದೆ ಇಲ್ಲ.

ನೈಸ್ ವಿವಾದದ ಹಿನ್ನೆಲೆಯಲ್ಲಿ ಸಮಾರಂಭವೊಂದರಲ್ಲಿ ಮಾತನಾಡುತ್ತ ಹಿಂದಿನ ಮುಖ್ಯಮಂತ್ರಿ ಎಚ್.ಡಿ.ಕುಮಾರಸ್ವಾಮಿ ಅವರು ನಾನೇನು ಬಳೆತೊಟ್ಟು ಸೋಮಾರಿಯಾಗಿ ಕುಳಿತಿಲ್ಲ ಎಂದು ಹೇಳಿದ್ದರು. ಬಳೆ ತೊಟ್ಟ ಹೆಣ್ಣು ಸಾಮರ್ಥ್ಯವಿಲ್ಲದವಳು ಎಂಬಂತಹ ಅರ್ಥದ ನೆಲೆಯಲ್ಲಿ ಕಾಣುವ ಪ್ರಜಾಪ್ರಭುತ್ವದಲ್ಲಿ ಎಷ್ಟರಮಟ್ಟಿಗೆ ಸರಿ?

ಹಾಗೆಯೇ ರಾಜ್ಯದ ಈಗಿನ ಮುಖ್ಯಮಂತ್ರಿ ಸಿದ್ದಾರಾಮಯ್ಯ ಅವರು ಉನ್ನತ ಮಹಿಳಾ ಅಧಿಕಾರಿಗಳನ್ನು ಏನಮ್ಮಾ, ಗೊತ್ತಲ್ಲಮ್ಮ ಎಂಬಂತಹ ಪದಗಳಿಂದ ಸಂಭೋದಿಸಿ ನಿರ್ದೇಶನಗಳನ್ನು

ನೀಡಿದ್ದು ಪತ್ರಿಕಾ ವರದಿಗಳಲ್ಲಿವೆ. ಮಹಿಳೆ ಕುರಿತಂತೆ ಅನುಗ್ರಹಪೂರ್ವಕ(ಪ್ಯಾಟ್ರನೈಸಿಂಗ್) ಧೋರಣೆಯನ್ನು ಬಿಂಬಿಸುವ ಈ ಭಾಷೆಯ ಮೂಲ ಪಿತೃ ಪ್ರಧಾನ ಸಂಸ್ಕೃತಿಯ ನಿರೂಪಣೆಗಳಾಗಿವೆ.

"ನಮ್ಮ ಭಾಷೆ ಅಥವಾ ಅಭಿವ್ಯಕ್ತಿ ಪುರುಷ ಪ್ರಧಾನ ಸಮಾಜದ ಲಿಂಗತ್ವ (ಜೆಂಡರದ) ಮತ್ತು ಲೈಂಗಿಕ ತಾರತಮ್ಯ (ಸೆಕ್ಸಿಸ್ಟ್)ಗಳ ಪ್ರತಿಬಿಂಬವಿರಬಹುದಲ್ಲವೇ? ಇಂಥ ಕಲ್ಪನೆಗಳು ಯಜಮಾನ್ಯ ಅಥವಾ ಕುಲದ ಅಧಿಪತಿ {ಪ್ಯಾಟ್ರಿಯರ್ಕ) ಮೌಲ್ಯಗಳು ಸಮಾಜದ ರಚನೆ ವಿನ್ಯಾಸಗಳಲ್ಲಿ ಹಾಸುಹೊಕ್ಕಾಗಿವೆ. ಅವು ಸೈದ್ಧಾಂತಿಕ ಸ್ಥಾನ-ಮಾನವನ್ನು ಪಡೆದು ಲಿಂಗ ಅಸಮಾನತೆಗೆ ದೃಢೀಕರಣವನ್ನು ಒದಗಿಸಿದೆ. ಎಲ್ಲದರಲ್ಲೂ ಗಂಡಿನ ಜಬರ್‌ದಸ್ತ್ 'ನೈಜವಾಗಿ'ರುವಂತೆ ತೋರುತ್ತದೆ."[೧೪] ಇನ್ನು ಜನಪದರು ಮಹಿಳೆಯನ್ನು ನಿರೂಪಿಸಿಕೊಂಡಿರುವ ಬಗೆಯನ್ನು ಇದಕ್ಕಿಂತ ಭಿನ್ನವೇನು ಇಲ್ಲ. ಮಹಿಳೆ ಅಧಿಕಾರ ನಿರ್ವಹಿಸಲು ನಿರ್ಧಾರ ತೆಗೆದುಕೊಳ್ಳಲಾರಳು ಅಸಮರ್ಥಳು ಪುರುಷನಿಗೆ ಅಧೀನಳಾಗಿರಬೇಕು ಎಂಬಂತ ಬಗೆಯ ಹಲವು ನಿರೂಪಣೆಗಳು ಭಾಷೆಯೊಳಗಡೆ ವ್ಯಕ್ತವಾಗಿವೆ.

ಜನರ ಬಳಕೆಯಲ್ಲಿಯ ನುಡಿಗಟ್ಟುಗಳಲ್ಲಿ, ಒಗಟುಗಳಲ್ಲಿ, ಗಾದೆಗಳಲ್ಲಿ, ಕಥೆಗಳಲ್ಲಿ ಮಹಿಳೆಯನ್ನು ನಿರೂಪಿರುವ ಕ್ರಮ ಕಂಡುಬರುತ್ತದೆ. ಸಮಾಜದ ಕನ್ನಡಿಯಾದ ಭಾಷೆ ಈ ಬಗೆಯ ಸಮಾಜದ ಎಲ್ಲ ದೃಷ್ಟಿಕೋನಗಳನ್ನು ಪ್ರತಿನಿಧಿಸುತ್ತವೆ. ಚರಿತ್ರೆಯಾಗಿ, ವಿಶ್ವಕೋಶವಾಗಿ, ನೀತಿ ಶಾಸ್ತ್ರವಾಗಿ, ಶಾಸನವಾಗಿ, ಸಮಾಜಕ್ಕೆ ಮಾರ್ಗದರ್ಶಕವಾಗಿ, ಬಾಳಿಗೆ ಊರುಗೋಲಾಗಿ ಜನ ಜೀವನವನ್ನು ರೂಢಿಸಿದ್ದುಂಟು ಪೋಷಿಸಿದ್ದುಂಟು. ಉನ್ನತಗೊಳಿಸಿದ್ದುಂಟು.[೧೫] ಪುರುಷ ಪ್ರಧಾನ ವ್ಯವಸ್ಥೆಯನ್ನು ಒಂದು ಕಾಲಘಟ್ಟದಿಂದ ಮತ್ತೊಂದು ಕಾಲಘಟ್ಟಕ್ಕೆ ದಾಟಿಸಿಕೊಂಡು ಬರುವುದಕ್ಕೆ ಜನಪದರ ಈ ಸಾಹಿತ್ಯಿಕ ರೂಪಗಳು ಸಹಕಾರಿಯಾಗಿವೆ.

***• ಗಾದೆಗಳಲ್ಲಿ ಮಹಿಳೆಯನ್ನು ನಿರೂಪಿಸಿರುವ ಕ್ರಮ***

- *"ಹೆಂಡತಿಯ ಜುಟ್ಟು ಗಂಡನ ಕೈಯಲ್ಲಿ"*
- *"ಕುಟಿಗೆಯಲ್ಲಿ ನೋಡಿದರೆ ಅಣ್ಣ ಇರಬೇಕು ಅಡಿಗೆಮನೆಯಲ್ಲಿ ನೋಡಿದರೆ ಅಕ್ಕ ಇರಬೇಕು*
- *ಹರಕು ಬಾಯಿಯ ಹೆಣ್ಣು ಹೆಣ್ಣಲ್ಲ ಕೊಳಕು ಮಣ್ಣಿನ ಗದ್ದೆ ಗದ್ದೆಯಲ್ಲ.*
- *"ಗಂಡಸಿಗೆ ತೆತ್ತಲ್ಲದೇ ಬುದ್ಧಿ ಇಲ್ಲ ಹೆಂಗಸಿಗೆ ಹೆತ್ತಲ್ಲದೇ ಬುದ್ಧಿ ಇಲ್ಲ"*
- *"ಹೆಂಗಸರಿಗೆ ಆಡಳಿತ ಕೊಡೋದು ಒಂದೇ ಚೇಳಿಗೆ ಪಾರುಪತ್ಯ ಕೊಡೋದು ಒಂದೇ"*
- *"ತಲೆಯಿಲ್ಲದ ಅಜ್ಜಿಗೆ ಪಟ್ಟ ಕಟ್ಟಿದರಂತೆ"*

ಈ ವಯಸ್ಸಿನಲ್ಲಿ ಯಾಕೋ ಮದುವೆ? ಅಂದರೆ

ನಾ ಸತ್ತರೆ ಆಳೋಕೆ ಒಬ್ಬಳಿರಲಿ ಅಂತ. ಅಷ್ಟೇ ಅಂದ

ಹಣ್ಣು ಕೆಟ್ರ ಪುಟ್ಟಿ ಹಾಳು, ಹೆಣ್ಣು ಕೆಟ್ರ ಹಟ್ಟಿ ಹಾಳು

ಗೆಡ್ಡೆ ಹೊಲಹೀನ, ಗೊಡ್ಡು ಹೆಂಡತಿ ಹೀನ

ಹೆಣ್ಣು ಬಾಯಿ ತೆರೆದರೆ, ಮಣ್ಣು ಕೂಡ ಕೆಂಡವಾಗುತ್ತೆ

ಮಹಿಳೆಯರ ಸ್ಥಾನಮಾನಗಳು ಪುರುಷ ಪ್ರಧಾನ ಸಮಾಜದಲ್ಲಿ ನಿಕೃಷ್ಟವಾಗಿ ನಿರೂಪಣೆಗೊಂಡಿವೆ. "ಅರಸಿಯಾದರು ಪುರುಷನ ಅಡಿಯ ಕೆಳಗೆ" ಎಂದು ನೋಡುವ ಸಮಾಜ ಮಹಿಳೆಗೆ "ಸಾಮಾಜಿಕ ಬದುಕಿನಲ್ಲಿ ನಿಗದಿತವಾದ ಪರಮೋಚ್ಚ ಸಮ್ಮಾನದ ಪದವಿ ಇದೆ. ಈ ಪದವಿಯನ್ನು ಪಡೆಯುವುದು ಅವಳಿಗೆ ಅನಿವಾರ್ಯವೇ ಎಂಬಂತೆಯೂ ಪರಿಗಣಿಸಲಾಗುತ್ತದೆ. ಅವಳೂ ತನ್ನ ಪದವಿಯನ್ನು ದಕ್ಕಿಸಿಕೊಳ್ಳಲು ಹೆಣಗುತ್ತಾಳೆ"[೧೬] ಮಹಿಳೆಯನ್ನು ಕೇವಲ ಹೆರುವ ಯಂತ್ರವಾಗಿ ಆಡಳಿತ ಗೊತ್ತಿಲ್ಲದವಳಂತೆ ಪುರುಷ ಅಧೀನದಲ್ಲಿ ಬದುಕುವಂತೆ ಹೆಚ್ಚು ಮಾತನಾಡದಂತೆ ಮೂಕಳಂತೆ ನಿರೂಪಿಸಿದೆ. ಈ ನಿರೂಪಣೆಗೆ ವ್ಯತಿರಿಕ್ತವಾಗಿ ನಡೆಯದಂತೆ ಅನೇಕ ನಿಷೇಧ ನಿರ್ಬಂಧಗಳನ್ನು ಪುರುಷ ಪ್ರಧಾನ ವ್ಯವಸ್ಥೆ ಅವಳ ಮೇಲೆ ಹೇರುವುದರ ಮುಖಾಂತರ ಅವಳನ್ನು ನಿಯಂತ್ರಿಸುತ್ತದೆ.

ಜನಪದದ ಮತ್ತೊಂದು ಪ್ರಕಾರವಾದ ಒಗಟು ಒಡುಪುಗಳಲ್ಲಿ ಮಹಿಳೆಯು ನಿರೂಪಿತವಾಗಿರುವ ಕ್ರಮವನ್ನು ನೋಡುವುದಾದರೆ;

**ಒಡಪು**

- *ಹಗ್ಗದಲ್ಲಿ ಹೊಡದರೆ ಮಗಲಾಕ ಬರ್ತಾಳ್.....*
- *"ಅಕ್ಕಿಗಿ ಅಗುಳಿಲ್ಲ*

  *ತುಪ್ಪಕ್ಕ ವಾಸಿಲ್ಲ*

  *ಮಕ್ಕಳತಾಯಿಗೆ ಮೊಲಿಯಿಲ್ಲ*

  *ನಾಮ್ಮಕಿ..... ಗೆ ತಲಿಯಿಲ್ಲ"*
- *"ತೆಗ್ಗಿನ್ಯಾಗ ಕುಂತು ಎದ್ದೆದ್ದುನೋಡ್ತಾಳ"*

*ಸಿಟ್ಟಿಗಿ ಬಂದ ಬಡಿಲಾಕ ಎದ್ದರ*

*ಸಟ್ಟಣಾನ ಬಂದ ಕಾಲ ಹಿಡಿತಾಳ....*

*ನಾ ಒಂದ ಹೇಳಾ ಣಾ*

ತಾ ಒಂದ ಮಾಡತಾಳ....

ನಾಯಿ ಮ್ಯಾಲ ಕುತ್ತ

ನಾಡ ನೋಡತಾಳ

ಒಗಟು

- 'ಗಿಡ್ಡಿ ಗುದ್ದಿದರ ಮನೆತುಂಬಾ ಮಕ್ಕಳು'
- 'ಸೋಗಿನ ಹೆಣ್ಣಿಗೆ ಒಂದ ಕಣ್ಣು'
- 'ಅವ್ವನ ಸೀರಿ ಮಡಚಾಕ ಆಗೋದಿಲ್ಲ, ಅಪ್ಪನ ರೋಕ್ಕ ಎಣಿಸಾಕ ಆಗೋದಿಲ್ಲ'
- 'ಅಪ್ಪ ಆಕಾಶಕ್ಕೆ ಹೋದ್ರ ಅವ್ವ ಪಾತಳಕ್ಕೆ ಹೋದ್ಲು, ಮಗ ವ್ಯಾಪಾರಕ್ಕೆ ಹೋದ್ರ ಮಗಳು ಮದವಿಗೆ ಹೋದ್ಲು.'

ಬಣ್ಣದ ಸೀರಿ ಉಟಗೊಂಡು ಮಣ್ಣಾಗ ಕುಂತೈತಿ

ಹಿಡಿಯಾಕ ಹೋದ್ರ ಕಡಿಯಾಕ ಬರತೈತಿ

ಅಕ್ಕಿಗೆ ಅಗುಳಿಲ್ಲ

ತುಪ್ಪಕ್ಕ ಕಂಪಿಲ್ಲ

ಮಕ್ಕಳ ತಾಯಿಗೆ ಮೊಲೆ ಇಲ್ಲ

ಅಮ್ಮ ಕುಂತಾಳ, ಮೊಮ್ಮಗಳು ಓಡ್ಯಾಡತಾಳ

ಎಂಟು ಮಲಿ ಗಂಡು ಮೋಲೆ

ಸಂದ್ಯಾಗ್ಹಾದು ಬರತಾಳ ಸುಂದರಬಾಯಿ

ಕರಿ ಸೀರಿ ಗರತಿ

ಪ್ಯಾಟ್ಯಾಗ ಇರತಿ

ರೊಕ್ಕ ಕೊಟ್ಟರ ಬರತಿ

ಛೃ ಛೃ ರಂಡೆ

ಕೈಯೆಲ್ಲ ಹರಕೊಂಡೆ

ಹಸರ ಕುಬಸದ ಮ್ಯಾಲ ಬಂಗಾರ ಗೊಂಡೆ

ಜನಪದರು ತಮ್ಮ ಸಾಹಿತ್ಯಿಕ ರೂಪಗಳಲ್ಲಿ ಮಹಿಳೆಯನ್ನು ವಿವರಿಸಿಕೊಂಡಿರುವ ಕ್ರಮಗಳಿವು. ಸಮಾಜ ಮಹಿಳೆಯನ್ನು ನಡೆಸಿಕೊಳ್ಳುವಂತಹ ವಿಚಾರಗಳು. ಹೆಣ್ಣು ಎಂದು ಗಂಡಸಿನ ಅಧೀನಳಾದಳೋ ಅಂದಿನಿಂದಲೂ ಆಕೆ ಹತೋಟಿಮೀರಿ ಬೆಳೆಯದಂತೆ ತನ್ನ ಕಣಿವೆಯೊಳಗೆ ಇರಿಸಿಕೊಳ್ಳುವ ಪ್ರಯತ್ನವನ್ನು ಸಮಾಜ ಕೆಲವೊಂದು ಆದರ್ಶ ಮೌಲ್ಯಗಳ ಮೂಲಕ ನಡೆಸಿಕೊಂಡು ಬಂದಿದೆ. ಈ ಮೌಲ್ಯಗಳಿಗೆ ತಕ್ಕಂತೆ ಕೆಲವು ಭಾಷಿಕ ರಚನೆಗಳು ರೂಪುಗೊಂಡಿದ್ದು ಅವುಗಳು ಗಾದೆ ಒಡಪು, ಭೈಗುಳಗಳಲ್ಲಿ ಪ್ರಯೋಗಗೊಂಡಿವೆ. ಇದರ ಮುಂದುವರೆದ ಸ್ವರೂಪವನ್ನು ನಗೆಹನಿಗಳಲ್ಲಿಯೂ ನೋಡಬಹುದು.[೧೭]

ಮಹಿಳೆಯರ ಬಲಹೀನತೆಯನ್ನು ಮುಂದಿಟ್ಟುಕೊಂಡು ಆದಷ್ಟು ಮಹಿಳೆಯರನ್ನು ಅಪಮಾನಕ್ಕೆ ಗುರಿಪಡಿಸುವಂತಹ ನಗೆಹನಿಗಳು ಸಾಕಷ್ಟು ರಚಿತವಾಗಿವೆ. ಹಾಗೂ ಲೈಂಗಿಕ ಸರಕಾಗಿ ಮಹಿಳೆ ಭಾಷೆಯೊಳಗಡೆ ನಿರೂಪಿತವಾಗುತ್ತಾಳೆ. ಉದಾಹರಣೆಗೆ ಒಮ್ಮೆ ಕೆಂಚ ಕೆ.ಎಸ್.ಆರ್.ಟಿ.ಸಿ ಬಸ್ಸಿನಲ್ಲಿ ಕೂತು ಬೆಂಗಳೂರಿನಿಂದ ಬಳ್ಳಾರಿಗೆ ಪ್ರಯಾಣಿಸುತ್ತಿದ್ದ. ಬಸ್ಸಿನಲ್ಲಿ ಬೀಡಿ ಸೇದಲು ಆರಂಭಿಸಿದ ಇದನ್ನು ನೋಡಿ ಪಕ್ಕದ ಸೀಟಿನಲ್ಲಿರೋ ಮಗು ಹಿಡಿದುಕೊಂಡ ಹೆಂಗಸು "ಏನ್ರೀ ನೀವು ನೋ ಸ್ಮೋಕಿಂಗ್ ಅಂತ ಬೋರ್ಡ ಇದ್ರೂ ಬೀಡಿ ಸೇದ್ತಾ ಇದ್ದೀರಲ್ಲಾ " ಅಂತ ದಬಾಯಿಸಿದ್ದಳು.

ಕೆಂಚನಿಗೆ ಅವಮಾನವಾದಂತಾಗಿ ಬೀಡಿ ಹೊರಗೆಸೆದು ಬಿಟ್ಟ. ಸ್ವಲ್ಪ ಹೊತ್ತಿನ ನಂತರ ಕೆಂಚನಿಗೆ ಬೈದ ಅದೇ ಹೆಂಗಸು ಮಗುವಿಗೆ ಮೊಲೆಹಾಲು ಕೊಡಲು ಪ್ರಾರಂಭಿಸಿದಳು. ಇದನ್ನು ನೋಡಿ ಕೆಂಚ ಆ ಹೆಂಗಸಿಗೆ ಹೇಳಿದ "ಏನ್ರಿ ನನಗೆ ಬುದ್ದಿವಾದ ಹೇಳ್ತೀರಲ್ಲಾ ನೀವಿಗ ಏನ್ಮಾಡ್ತಾ ಇದ್ದೀರಿ ನೀವು ಆ ಬೋರ್ಡ ನೋಡಿ ಈಗ ಅಂತ ಡ್ರೈವರ್ ಸೀಟಿನ ಹಿಂದುಗಡೆ ಇರೋ ಬೋರ್ಡ್ ತೋರಿಸಿದ ಅದರಲ್ಲಿ ಹೀಗೆ ಬರೆದಿತ್ತು "ಬಸ್ಸು ಚಲಿಸುವಾಗ ಯಾರೂ ಕೂಡ ತಮ್ಮ ದೇಹದ ಅಂಗಾಗಗಳನ್ನು ಹೊರಹಾಕಬಾರದಾಗಿ ವಿನಂತಿ" ಗಂಡಸಿನ ಕ್ರೂರತೆಗೆ, ಕೃತ್ಯಕ್ಕಷ್ಟೇ ಅಲ್ಲದೇ ಮಾತಿನಲ್ಲಿ ಸಹ ಹೆಣ್ಣು ಒಳಗಾಗಿದ್ದಾಳೆ ಗಂಡಸು ತಾನು ಹೆಣ್ಣನ್ನು ನಡೆಸಿಕೊಳ್ಳುವ ನೆಲೆಯಲ್ಲಿ ನಿಂತು ನಗೆಹನಿಗಳನ್ನು ಸೃಷ್ಟಿಸಿರುವುದನ್ನು ಇಲ್ಲಿ ವ್ಯಕ್ತವಾಗುತ್ತದೆ.

ಪುರುಷ ಪ್ರದಾನ ವ್ಯವಸ್ಥೆ ಮಹಿಳೆಯನ್ನು ತನ್ನ ಅಧೀನದಲ್ಲಿ ನಿರೂಪಿಸಿಕೊಂಡಿದ್ದಾನೆ. ಅಧಿಕಾರ, ಭಾಷೆ, ಸ್ವತಂತ್ರ್ಯ, ಸಮಾನತೆ ಇವೆಲ್ಲವನ್ನು ಕಸಿದುಕೊಂಡಿದ್ದಾರೆ. ಇವುಗಳಿಗೆ ವ್ಯತಿರಿಕ್ತವಾಗಿ ಇರುವ ಸಂದರ್ಭವನ್ನು ಪ್ರಮಿಳಾ ರಾಜ್ಯ ಎಂದು ಲೇವಡಿ ಮಾಡುತ್ತಾರೆ. ಈ ಪರಿಕಲ್ಪನೆಯ ಮೂಲವನ್ನು ಮಹಾಭಾರತದ ಜೈಮಿನಿಯ ಆವೃತ್ತಿಯಲ್ಲಿ ಗುರುತಿಸಲಾಗಿದೆ.[೧೮]. ಮಹಿಳೆಯರಿಗೆ ಅಧಿಕಾರ ಸಲ್ಲದು. ಅವರೇನಿದ್ದರು ಪುರುಷನ ಸೇವೆಯಲ್ಲಿ ಇರಬೇಕು, ಎಂಬುದು ಪಿತೃಪ್ರಧಾನ ಸಮಾಜ ನಿರೂಪಣೆ. ಮಹಿಳೆ ಅಧಿಕಾರ ವಹಿಸಿಕೊಂಡು ಆಡಳಿತ ನಡೆಸಿದರೆ, ಈ ಹೊತ್ತಿಗಾದರೂ

ಯಾವುದೇ ಸ್ತ್ರೀ ಅಥವಾ ಸಮಾಜ ವ್ಯವಸ್ಥೆಯು ಪುರುಷಪ್ರದಾನ ಚೌಕಟ್ಟಿನಿಂದ ಸ್ವಲ್ಪ ಆಚೀಚೆ ಕದಲಿದಾಗಲೆಲ್ಲ ಅಂತಹ ಸ್ತ್ರೀಯನ್ನು ಪ್ರಮೀಳೆ ಎಂದು ಆ ಸಮಾಜವನ್ನು ಪ್ರಮೀಳಾರಾಜ್ಯವೆಂದೂ ಲೇವಡಿ ಮಾಡಲಾಗುತ್ತದೆ. ಅಷ್ಟೇ ಏಕೆ ಮಹಿಳೆಯರಿಂದ ನಿರ್ವಹಣೆಗೊಳ್ಳುವ ಮನೆ, ಕಚೇರಿ ಇತ್ಯಾದಿಗಳನ್ನು ಪ್ರಮೀಳಾ ರಾಜ್ಯವೆಂದೇ ಪರಿಚಯಿಸಲಾಗುತ್ತದೆ. ಸ್ತ್ರೀ ಸ್ವಾತಂತ್ರ್ಯದ ಪ್ರಶ್ನೆಯನ್ನು ಹೋರಾಟವನ್ನು ಪ್ರಮೀಳಾ ರಾಜ್ಯ ಸ್ಥಾಪನೆಯ ಚಟುವಟಿಕೆಯಾಗಿ ವಿವರಿಸಲಾಗುತ್ತದೆ.[೧೯]

ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಹೀಗೆ ಮಹಿಳೆ ಅಸಹಾಯಕ ರೀತಿಯಲ್ಲಿ ಪುರುಷನ ಲೈಂಗಿಕ ಭೋಗದ ವಸ್ತುವಾಗಿದ್ದಾನೆ. ಎಲ್ಲಾ ಕಾಲಘಟ್ಟದಲ್ಲಿ ಪುರುಷ ಮತ್ತೆಮತ್ತೆ ಮರು ರೂಪಿಸಿಕೊಂಡು ಅದನ್ನು ಪೋಷಿಸುತ್ತ ಬಂದಿದ್ದಾನೆ " ಪುರುಷಾಡಳಿತ ಪುರಷಕೇಂದ್ರಿತ ಸಾಮಾಜಿಕ ವ್ಯವಸ್ಥೆಯನ್ನು ಸಹಜವೆಂದೂ, ಕ್ರಮಬದ್ಧವೆಂದೂ, ಸಾರ್ವತ್ರಿಕವೆಂದೂ ನಿರೂಪಿಸುತ್ತದೆ. ಅದಕ್ಕೆ ತದ್ವಿರುದ್ಧವಾದ ಸ್ತ್ರೀ ಕೇಂದ್ರಿತವಾದ ರಾಜ್ಯವೊಂದನ್ನು ಕಲ್ಪಿಸಿ ಅದನ್ನೊಂದು ವಿಷಯ ವ್ಯವಸ್ಥೆಯೆಂದು ಪ್ರತಿಪಾದಿಸುವ ಮೂಲಕ ಪುರುಷಪ್ರಧಾನ ಚಿಂತನಾ ಕ್ರಮವನ್ನು ಸಿಂಧುಗೊಳಿಸಿಕೊಳ್ಳುವುದು ಹಾಗೂ ಅಂತಹ ಸ್ತ್ರೀಯ ಮೇಲೆ ವಿಜಯ ಸಾಧಿಸುವ ಮೂಲಕ ತಮ್ಮ ನಾಯಕನನ್ನು (ಅರ್ಜುನನನ್ನು) ಎತ್ತಿಹಿಡಿಯುವುದು ಇದರ ಹಿಂದಿನ ಉದ್ದೇಶ)"[೨೦].

ಹೀಗೆ ಮಹಿಳೆ ಪುರುಷ ಪ್ರಧಾನ ವ್ಯವಸ್ಥೆಯ ಭಾಷೆಯೊಳಗಡೆ ಹಲವಾರು ನಂಬಿಕೆಗೆ, ಪೂರ್ವಗ್ರಹ ಗ್ರಹಿಕೆಗೆ ಒಳಗಾಗಿ ಪುರುಷನ ಅಗತ್ಯತೆಗೆ ಅನುಗುಣವಾಗಿ ನಿರೂಪಿತಗೊಂಡಿದ್ದಾಳೆ ಮಹಿಳೆಯನ್ನು ಇದೆ ಹಿನ್ನೆಲೆಯ ಕಾಪಾಡಿಕೊಳ್ಳಲು ಅಂದಿನ ಸ್ಥಿತಿಯಲ್ಲೆ ಉಳಿಸಿಕೊಳ್ಳಲು ಸಮಾಜ ಅಪೇಕ್ಷಿಸುತ್ತದೆ. ಅವರ ಅನೂಕೂಲಕ್ಕೆ ತಕ್ಕಂತೆ ಮಹಿಳೆಗೆ ಅನೇಕ ನಿರ್ದೇಶನಗಳನ್ನು ನೀಡಿದೆ ಸಮಾಜ ಅಪೇಕ್ಷಿಸುವ ಅಪೇಕ್ಷೆಗೆ ಅನುಗುಣವಾಗಿ ಮಹಿಳೆ ಬದುಕಬೇಕು ಈ ಸಮಾಜದ ಅಪೇಕ್ಷೆಗಳು ಮತ್ತು ನಿರ್ದೇಶನಗಳು ಮಹಿಳೆಯನ್ನು ಕಟ್ಟಿಹಾಕಿವೆ. ಸಮಾಜದ ಅಪೇಕ್ಷೆ ಮತ್ತು ನಿರ್ದೇಶನಗಳನ್ನು ಮುಂದಿನ ಅಧ್ಯಾಯದಲ್ಲಿ ಅರ್ಥೈಸಿದೆ.

***ಅಡಿಟಿಪ್ಪಣಿ***

*೧. ಭಾಷೆಯೊಂದಿಗೆ ಗುದ್ದಾಟ, ಮೀನಾ ಮೈಸೂರು, ಪ್ರಜಾವಾಣಿ ೩/೬/೧೨, ಸಾಹಿತ್ಯ ಪುರವಾಣಿ. ಪು.೮*

*೨. ಅವಳ ಭಾಷೆ, ಡಾ. ಕೆ.ಆರ್.ಸಿದ್ದಗಂಗಮ್ಮ, ಹೊಸತು, ಏಪ್ರೀಲ್ ೨೦೧೩.ಪು.೪೯*

*೩. ಭಾಷೆಯೊಂದಿಗೆ ಗುದ್ದಾಟ, ಮೀನ ಮೈಸೂರು, ಪ್ರಜಾವಾಣಿ, ೩/೬/೧೨ ಸಾಹಿತ್ಯ ಪುರವಾಣಿ. ಪು.೮*

*೪. ವ್ಯಕ್ತಿ ಚಹರೆಯಾಗಿ ಭಾಷೆ, ಎಚ್.ಎಸ್. ಶ್ರೀಮತಿ, ನುಡಿನಾಡಿ, ಮಾರ್ಚ ೨೦೧೧*

*೫. ಉದ್ಧೃತ; ನಾರಾಯಣ ಕೆ.ವಿ.(ಸಂ). ಪು.೨೨, ೨೦೦೫*

೬. ಮಾತು ಮಾತು ಮಾತು, ಚಿದನಾಂದ ಸಾಲಿ, ಪ್ರಜಾವಾಣಿ, ಸಾಪ್ತಾಹಿಕ ಪುರವಾಣಿ, ೨೭/೧/೧೨ ಪು.೪

೭. ಮಾತು ಮಾತು ಮಾತು, ಚಿದನಾಂದ ಸಾಲಿ, ಪ್ರಜಾವಾಣಿ ಸಾಪ್ತಾಹಿಕ ಪುರವಾಣಿ, ೨೭/೧/೧೨, ಪು.೪

೮. ಅವಳು ಮಾತಾಡೋ ಮಲ್ಲಿಗೆ, ಕೃಷ್ಣಭಟ್ ಅಳದಂಗಡಿ, ವಿಜಯ ಕರ್ನಾಟಕ ಲವಲವಿಕೆ, ೮/೯/೧೨ ಪು.೧

೯. ಮಾತು ಮಾತು ಮಾತು, ಚಿದನಾಂದ ಸಾಲಿ, ಪ್ರಜಾವಾಣಿ ಸಾಪ್ತಾಹಿಕ ಪುರವಾಣಿ ೨೭/೧/೧೨ ಪು.೪

೧೦. ಭಾಷೆಯಲ್ಲಿ ಹೆಣ್ಣಿನ ಪ್ರತಿನಿಧೀಕರಣ, ಡಾ.ಶಿವಾನಂದ ಎಸ್. ವಿರಕ್ತ ಮಠ; ಹೆಣ್ಣು ಮತ್ತು ಭಾಷೆ (ಸಂ. ಶ್ರೀಮತಿ ಎಚ್.ಎಸ್. ಪು.೧೧೭) ೨೦೦೭.

೧೧. ಸ್ತ್ರೀವಾದಿ ಭಾಷಾ ಶಾಸ್ತ್ರ ಪ್ರವೇಶೀಕೆ (ಅನು. ಡಾ. ಎಚ್.ಎಸ್.ಶ್ರೀಮತಿ. ಪು. ೮೧, ೨೦೦೯

೧೨. ಭಾಷಾ ಕಲಿಕೆ ಮತ್ತು ಬಳಕೆಗಳಲ್ಲಿ ಹೆಣ್ಣಿಗೆ ಇರುವ ಸವಾಲುಗಳು, ಡಾ.ಕೆ.ವಿ. ನಾರಾಯಣ ಹೆಣ್ಣು ಮತ್ತು ಭಾಷೆ (ಸಂ. ಡಾ.ಎಚ್.ಎಸ್. ಶ್ರೀಮತಿ .ಪು.೭) ೨೦೦೭

೧೩. ಸಿಮಾನದ ಬೋವಾ, ೨೦೦೭, ಪು ೧೬-೧೭, ಅನುವಾದ ಶ್ರೀಮತಿ ಎಚ್.ಎಸ್

೧೪. ಭಾಷೆಯೋಳಗೆ ಗಂಡಿನ ಜಬರ್‌ದಸ್ತ, ಪ್ರೋ.ಬಿ.ಕೆ ಚಂದ್ರ ಶೇಕರ್, ಪ್ರಜಾವಾಣಿ. ೧೩/೧೦/೧೨. ಪು.೬

೧೫. ಕನ್ನಡ ಗಾದೆಗಳಲ್ಲಿ ಸ್ತ್ರೀ, ಡಾ.ತ್ರೀವೇಣಿ, ೨೦೦೫, ಪು.೧೭೦

೧೬. ಸ್ತ್ರೀವಾದ, ಪು.೧೧೬, ೨೦೦೩, ಎಚ್.ಎಸ್.ಶ್ರೀಮತಿ

೧೭. ನಗೆ ಹನಿಗಳಲ್ಲಿ ಹೆಣ್ಣಿನ ಪ್ರತಿನಿಧೀಕರಣ, ಡಾ.ಅನ್ನಪೂರ್ಣ ಗುಡದೂರ, ಪು.೯, ೨೦೦೯

೧೮. ಭಾಷಾಂತರ & ಲಿಂಗರಾಜಕಾರಣ ವಸಾಹತು ಭಾಷಾಂತರಗಳ ಲಿಂಗತ್ವ ಅಧ್ಯಯನ; ಉಷಾ, ಪು.೫೮, ೨೦೧೨

೧೯. ಭಾಷಾಂತರ & ಲಿಂಗರಾಜಕಾರಣ ವಸಾಹತು ಭಾಷಾಂತರಗಳ ಲಿಂಗತ್ವ ಅಧ್ಯಯನ; ಉಷಾ. ಪು.೯೫, ೨೦೧೨

೨೦. ಭಾಷಾಂತರ & ಲಿಂಗರಾಜಕಾರಣ ವಸಾಹತು ಭಾಷಾಂತರಗಳ ಲಿಂಗತ್ವ ಅಧ್ಯಯನ; ಉಷಾ, ಪು.೫೮, ೨೦೧೨

# ಅಧ್ಯಾಯ – ೩

## ಮಹಿಳೆಯ ಭಾಷಾ ಬಳಕೆ ನಿರ್ದೇಶನ – ಅಪೇಕ್ಷೆ

೩.೧. ಸಾಮಾಜಿಕ ನಿರ್ದೇಶನ–ಅಪೇಕ್ಷೆ

೩.೨. ಸಾಂಸ್ಕೃತಿಕ ಪಾರಂಪರಿಕ ನಿರ್ದೇಶನ–ನೀತಿ ನಿರೂಪಣೆ

## ಅಧ್ಯಾಯ – ೩

# ಮಹಿಳೆಯ ಭಾಷಾ ಬಳಕೆ ನಿರ್ದೇಶನ – ಅಪೇಕ್ಷೆ

ಮಾನವ ಸಮಾಜದಲ್ಲಿ ಲಿಂಗಭೇಧ ನೀತಿ ರೂಢಿಯಲ್ಲಿದೆ. ಮನುಷ್ಯರು ಉಳಿದೆಲ್ಲ ಪ್ರಾಣಿಗಳಿಂದ ಭಿನ್ನ ಹಾಗೂ ಶ್ರೇಷ್ಠ ಪ್ರಾಣಿ ಎಂದು ತಮ್ಮಷ್ಟಕ್ಕೆ ತಾವೇ ಎಂದುಕೊಂಡಿರುವರು. ಉಳಿದೆಲ್ಲ ಪ್ರಾಣಿ ಪಕ್ಷಿಗಳಿಗಿಂತ ಭಿನ್ನವಾಗಿ ಕಂಡುಬರುವುದಕ್ಕೆ ಭಾಷೆ, ಸಂಸ್ಕೃತಿ ಇತ್ಯಾದಿ ಅಂಶಗಳು ಕಾರಣವಾಗಿವೆ. ತಾವು ಶ್ರೇಷ್ಠ ಎಂದುಕೊಂಡಿರುವ 'ಮಾನವ' (ಪುರುಷ) ಈ ವಿಶ್ವದಲ್ಲಿರುವ ಎಲ್ಲವೂ ತನಗಾಗಿಯೇ ಸೃಷ್ಠಿಯಾಗಿದೆ. ಇದೆಲ್ಲದಕ್ಕೂ ತಾನೆ ಒಡೆಯ ಎನ್ನುವಂತಹ ಭಾವನೆಯನ್ನು ಬೆಳೆಸಿಕೊಂಡಿರುವುದು ಕಂಡುಬರುತ್ತದೆ.

ಹೆಣ್ಣು ಪುರುಷನಿಗಿಂತ ದೈಹಿಕ ರಚನೆಯಲ್ಲಿ ಭಿನ್ನವಾದ ದೇಹ ರಚನೆಯನ್ನು ಹೊಂದಿರುವಳು. ಈ ಕಾರಣಗಳನ್ನು ಮುಂದಿಟ್ಟುಕೊಂಡು ಮಹಿಳೆಯನ್ನು ಕೂಡ ಜಡವಸ್ತುವಿನೊಂದಿಗೆ ಸೇರಿಸಿದ್ದಾನೆ. ಅಂದರೆ ತನಗಿಂತ ಕಡಿಮೆ ದರ್ಜೆಯೆಂದೆ ಬಗೆಯುವ ರೂಢಿಯಿದೆ. ಭಾರತೀಯ ತತ್ವಶಾಸ್ತ್ರದಲ್ಲಿ ಇದೊಂದು ಸಮೀಕರಣ. ಹೆಣ್ಣು, ಹೊನ್ನು, ಮಣ್ಣು, ಈ ಮೂರು ಸಾಧಕ ಪುರುಷನ ಸಾಧನೆಗೆ ಅಡ್ಡಿಯಾಗುವ ಅಂಶಗಳೆಂದೇ ಭಾವಿಸಲಾಗಿದೆ. 'ಮನುಷ್ಯನ' (ಪುರುಷನ) ಮನಸ್ಸನ್ನು ಚಂಚಲಗೊಳಿಸಿ ತಪಸ್ಸನ್ನು ಕೆಡಿಸುವ ಕಾರಣಗಳೆಂದೇ ಪ್ರಚಾರಪಡಿಸಿದ್ದಾರೆ. ಜಗತ್ತಿನಾದ್ಯಂತ ಹೆಣ್ಣನ್ನು ಎರಡನೆಯ ದರ್ಜೆಯ ಪ್ರಜೆಯಾಗಿಯೇ ಕಂಡಿರುವುದು ಕಾಣುತ್ತಿರುವುದು ಇಂದಿಗೂ ಸತ್ಯಸಂಗತಿ.

ಸಮಾಜ ವ್ಯವಸ್ಥೆಯು ಪುರುಷನ ಆದರ್ಶೀಕೃತ ಪರಂಪರೆಯಲ್ಲಿ ಸಾಗುವಂತಹದ್ದು. ಈ ಆದರ್ಶೀಕೃತ ಸ್ವರೂಪವನ್ನು ಹೆಣ್ಣು ಗಂಡುಗಳಿಬ್ಬರಿಗೂ ಒಂದೇ ರೀತಿಯಲ್ಲಿ ಅನ್ವಯಿಸಿದರೆ ಸಮಸ್ಯೆಗಳಿರುವುದಿಲ್ಲ. ಆದರೆ ನಮ್ಮ ಸಾಂಪ್ರದಾಯಿಕ ಸಮಾಜಿಕ ವ್ಯವಸ್ಥೆ ಸಂಪೂರ್ಣವಾಗಿ ಪುರುಷ ಕೇಂದ್ರಿಕೃತವಾಗಿದೆ. ಆತನ ಅಪೇಕ್ಷೆಗೆ ಅನುಗುಣವಾಗಿ ಇಲ್ಲಿನ ಮೌಲ್ಯವ್ಯವಸ್ಥೆ ಕಟ್ಟಲ್ಪಟ್ಟಿದೆ.

ಗೃಹಿಣಿತ್ವ, ಪಾತಿವ್ರತ್ಯ, ಶೀಲ, ಪಾವಿತ್ರ್ಯ, ತಾಯ್ತನ ಮೊದಲಾದ ಆದರ್ಶಗಳನ್ನು ಹೆಣ್ಣಿನ ತಲೆಗೆ ಕಟ್ಟಲಾಗಿದೆ. ಹೆಣ್ಣನ್ನು ಸಾಮಾಜೀಕರಿಸುವ ಸಂಸ್ಕೃತೀಕರಿಸುವ ತಮ್ಮ ಧೋರಣೆಗಳಿಗೆ ವಿರುದ್ಧವೆನಿಸಿದರೆ ಶಿಕ್ಷಿಸುವ ದಂಡಿಸುವ ಅಧಿಕಾರವನ್ನು ಪುರುಷ ಹೊಂದಿದ್ದಾನೆ.

ಸಮಾಜದ ಒಳಗಡೆ ಒಂದು ಬಗೆಯ ಊಹಾತ್ಮಕ ಚೌಕಟ್ಟು ನಿರ್ಮಾಣವಾಗಿದೆ. ಇದರಲ್ಲಿ ಮಹಿಳೆ ಎಂದರೆ ಹೀಗೆ ಇರಬೇಕು. ಪುರುಷ ಎಂದರೆ ಹೀಗಿರಬೇಕು ಎಂದು ನಿರ್ದೇಶನಗಳಿವೆ. ಇವು ಪುರುಷನ ಹಿತಾಶಕ್ತಿ ಕಾಪಾಡುವುದಕ್ಕೆ ಬಹುಮಟ್ಟಿಗೆ ಅನುಕೂಲಕರವಾಗಿವೆ. ಮಹಿಳೆಯನ್ನು ಪುರುಷನ ಅಪೇಕ್ಷೆಯಂತೆ ನಡೆದುಕೊಳ್ಳುವಂತೆ ನಿರ್ದೇಶನಗಳನ್ನು ಹಾಕಿಕೊಡಲಾಗಿದೆ. ಇದು ಅಲಿಖಿತ ಸಂವಿಧಾನದಂತೆ ಎಲ್ಲರೊಳಗೂ ಸುಪ್ತವಾಗಿ ಅಡಗಿದೆ.

ಪುರುಷ ತಾನು ಮೇಲಿನ ಸ್ಥಾನದಲ್ಲಿ ಇರಲೂ ಮಹಿಳೆಯನ್ನು ಕೆಳಸ್ತರದಲ್ಲಿ ಇರಿಸಿದ್ದಾನೆ. ಪುರುಷನ ಅಪೇಕ್ಷೆಯಂತೆ ನಡೆದುಕೊಳ್ಳಲು ಕೆಲವು ನಿರ್ದೇಶನಾತ್ಮಕ ತತ್ವಗಳಿವೆ. ಸಮಾಜದಲ್ಲಿ ಇವುಗಳು ಕಾಲದಿಂದ ಕಾಲಕ್ಕೆ ಪೀಳಿಗೆಯಿಂದ ಪೀಳಿಗೆಗೆ ದಾಟಿಕೊಂಡು ಬಂದಿವೆ. ಅವುಗಳು ಬಳಕೆಯ ಭಾಷೆಯೊಳಗಡೆ ಕಂಡುಬರುತ್ತದೆ. ಏಕೆಂದರೆ ಭಾಷೆ ಸಮಾಜದ ಕನ್ನಡಿ ಇದ್ದ ಹಾಗೆ ಸಮಾಜವು ಪುರುಷನಿಗೆ ಅನುಕೂಲಕರ ರೀತಿಯಲ್ಲಿ ನಿರ್ಮಿತವಾಗಿದೆ.

ಸಮಾಜದ ಅಪೇಕ್ಷೆಗಳು ನಿರ್ದೇಶನಗಳು ಜನಪದರ ನಿರ್ವಚನಗಳ ಮೂಲಕ ಕಾಲದಿಂದ ಕಾಲಕ್ಕೆ ದಾಟುತ್ತಬರುತ್ತಿವೆ. ಅವೆಂದರೆ ಗಾದೆ, ಒಗಟು, ಬೈಗುಳ, ನಗೆಹನಿ, ಜನಪದಗೀತೆಗಳು ಇತ್ಯಾದಿ. ನಿರ್ವಚನಗಳಲ್ಲಿ ನಿರ್ದೇಶಿತವಾಗಿ ಮಹಿಳೆಯರು ಹೇಗಿರಬೇಕು ಹೇಗಿರಬಾರದು ಎಂದು ನಿರ್ದೇಶಿಸುತ್ತೆ. ಮಹಿಳೆ ಸದಾ ಗಂಡ ಮತ್ತು ಮಕ್ಕಳ ಸೇವೆಯಲ್ಲಿ ತೊಡಗಿರಬೇಕು ಎಂದು ಸಮಾಜ ಅಪೇಕ್ಷಿಸುತ್ತದೆ. ಸಮಾಜದ ಈ ಬಗೆಯ ಹಲವು ಅಪೇಕ್ಷೆಗಳನ್ನು ಮಹಿಳೆ ಚಾಚು ತಪ್ಪದೆ ಪಾಲಿಸಬೇಕು. ಸಮಾಜ ಮಹಿಳೆಯನ್ನು ಹಾಗೆ ರೂಪಿಸಿಕೊಂಡಿರುತ್ತದೆ. ಸಮಾಜದ ಅಪೇಕ್ಷೆಗೆ ವಿರುದ್ದವಾಗಿ ನಡೆದುಕೊಳ್ಳುವ ಪ್ರಯತ್ನ ಇಂದಿಗೂ ಮಹಿಳೆ ಮಾಡಿಲ್ಲ.

ಹೆಣ್ಣಿಗೆ ಪುರುಷರಿಂದ ನಿರ್ಮಾಣಗೊಂಡ ಸಮಾಜ ಹೊರಿಸಿರುವ ಇನ್ನೊಂದು ಬಹುದೊಡ್ಡ ಮೌಲ್ಯವೆಂದರೆ ಶೀಲ ಅಥವಾ ಪಾತಿವ್ರತ್ಯ. ಇದು ಹೆಣ್ಣಿಗೆ ಮಾತ್ರ ಇರುವ ಮೌಲ್ಯ. "ಇಲ್ಲಿನ ದೈವ ಧರ್ಮಗಳೆಲ್ಲ ಪುರುಷ ಸುಖೀಯಾಗಿ ನಿರ್ಮಾಣವಾಗಿವೆ."[1]

ಸ್ತ್ರೀಯರು ಸಮಾಜದ ಮೌಲ್ಯ ಸಂರಕ್ಷಕರು. ಸಮಾಜವು ಪುರುಷರಿಗಿಂತ ಮಹಿಳೆಯರಿಂದ ಉತ್ತಮ ನಡೆತೆಯನ್ನು ಅಪೇಕ್ಷಿಸುತ್ತದೆ. ಪುರುಷರಿಗೆ ಹೋಲಿಸಿದರೆ, ಸ್ತ್ರೀಯರಿಗೆ ಸ್ವಾತಂತ್ರ್ಯ

ಕಡಿಮೆ. ಸ್ತ್ರೀಯರ ತಪ್ಪುಗಳ ಬಗ್ಗೆ ಸಮಾಜ ಹೆಚ್ಚು ಕಠಿಣವಾಗಿರುತ್ತದೆ. ಸ್ತ್ರೀಯರು ಮಕ್ಕಳಿಗೆ, ಮುಂದಿನ ಜನಾಂಗಕ್ಕೆ ಮಾದರಿಯಾಗಿರಬೇಕೆಂದು ಸಮಾಜ ಅಪೇಕ್ಷಿಸುತ್ತದೆ. ಅದಕ್ಕಾಗಿ ಮಹಿಳೆಯರಿಗೆ ಅನೇಕ ನಿರ್ದೇಶನ ನೀಡಿರುತ್ತದೆ.

ಪುರುಷ ಪ್ರಧಾನ ಸಮಾಜ ಅಪೇಕ್ಷಿಸುವ ಹೆಣ್ಣಿನ ಕಲ್ಪನೆಗಳು

ಹೆಣ್ಣು ಸುಂದರವಾಗಿಬೇಕು.

ಹೆಣ್ಣು ಪುರುಷನಿಗೆ ಎದುರಾಡಬಾರದು (ಹೆಚ್ಚು ಮಾತನಾಡಬಾರದು).

ಪುರಷನ ಅಧೀನಳಾಗಿರಬೇಕು.

ಪುರುಷನ ಮಕ್ಕಳು ಮನೆ, ವಂಶ, ಇವುಗಳ ಲಾಲನೆ ಪಾಲನೆ ಪೋಷಣೆಯಲ್ಲಿ ಸದಾ ತೊಡಗಿರಬೇಕು.

ವಿವಾಹಬಾಹಿರ ಸಂಬಂಧಗಳಿಂದ ದೂರವಿದ್ದು, ಏಕ ಪತಿ ವ್ರತಸ್ಥಳಾಗಿರಬೇಕು.

ಶೀಲವಂತಳಾಗಿರಬೇಕು.

ಮೃದುಸ್ವಭಾವದವಳಾಗಿರಬೇಕು.

ನಯ ನಾಜುಕಿನಿಂದ ವರ್ತಿಸಬೇಕು.

ಎತ್ತರಿಸಿದ ಧ್ವನಿಯಲ್ಲಿ ಮಾತನಾಡಬಾರದು. ಬದಲಿಗೆ ಮೃದುವಾಗಿರಬೇಕು.

ತಾಳ್ಮೆ, ಸಹನೆ, ದಯಾಮಯಿ ಕರುಣಾಮಯಿಯಾಗಿರಬೇಕು.

ಪತಿವ್ರತೆಯಾಗಿರಬೇಕು.

ಹೀಗೆ ಮಹಿಳೆಯ ಬಗ್ಗೆ ಸಮಾಜದ ಅಪೇಕ್ಷೆಗಳ ಬಹುದೊಡ್ಡ ಪಟ್ಟಿಯನ್ನೆ ಮಾಡಬಹುದು. ಈ ಪಟ್ಟಿಯನ್ನು ಮುಂದುವರಿಸಿಕೊಂಡು ಈ ಗುಣಗಳನ್ನು ಮಹಿಳೆಯಲ್ಲಿ ಕಾಪಡಿಕೊಂಡು ಹೋಗಲು ಕೆಲವು ನಿರ್ದೇಶನಗಳನ್ನು ಹಾಕಿದೆ. ಈ ಬಗೆಯ ಎಲ್ಲ ವಿಚಾರಗಳನ್ನು ಕುರಿತಂತೆ ಮುಂದೆ ಸಮಾಜದಲ್ಲಿ ಜೀವಂತವಿರುವ ನಿದರ್ಶನಗಳ ಮೂಲಕ ಅಧ್ಯಯನ ಮಾಡಲಾಗಿದೆ.

ಸಮಾಜದೊಳಗಿನ ಈ ಅಪೇಕ್ಷೆಗೆ ಅನುಗುಣವಾಗಿ ಭಾಷಾ ಬಳಕೆ ರೂಪುಗೊಂಡಿರುತ್ತದೆ. "ಭಾಷೆ ಬಳಕೆಯ ಹಿಂದೆ ಒಂದು ಐಡಿಯಾಲಜಿ ಇರುತ್ತದೆ. ಯಾವುದೇ ಸಮುದಾಯದ ಭಾಷೆಯನ್ನು ನೋಡಿದಾಗಲೂ ಅಲ್ಲಿ ಆ ಸಮುದಾಯದ ವಿಚಾರಧಾರೆಗಳು, ದೃಷ್ಟಿಕೋನಗಳಲ್ಲದೆ,

ಸಂಸ್ಕೃತಿ ವಿಶಿಷ್ಟ ಸಂಗತಿಗಳಾದ ಮೌಲ್ಯವ್ಯವಸ್ಥೆ, ಅಲ್ಲಿನ ಸಂಪ್ರಾದಾಯಗಳು, ಆಚಾರಣಾಲೋಕ ವಿಧಿ ನಿಷೇಧಗಳು ಮುಂತಾದವುಗಳೆಲ್ಲವನ್ನು ಆ ಭಾಷಿಕ ವ್ಯವಸ್ಥೆ ಹೊತ್ತು ತಂದಿರುತ್ತದೆ."[೨]

ಸಮುದಾಯದಲ್ಲಿರುವ ಎಲ್ಲರೂ ಒಂದೆ ಬಗೆಯ ಭಾಷೆಯ ಬಳಕೆ ಮಾಡುತಿದ್ದರು. ಬಳಕೆಯ ಭಾಷೆಯೊಳಗಡೆ ಸಮುದಾಯದ ಮೌಲ್ಯಗಳು ಮತ್ತು ಅದರ ಚಹರೆಯನ್ನು ಪ್ರತಿಬಿಂಬಿಸುತ್ತಿರುತ್ತದೆ. "ಭಾಷೆಯೊಂದರೊಳಗೆ ನಾವು ಜನಿಸಿರುತ್ತೇವೆ. ಅದರಲ್ಲಿ ಅರ್ಥವತ್ತಾದ ಸಂವಹನವನ್ನು ಸಾಧಿಸಲು ಆ ಭಾಷೆಯ ಕ್ರಿಯಾ-ವ್ಯವಸ್ಥೆಗಳನ್ನು ಅರಿಯುವುದು ಅನಿವಾರ್ಯ. ಅದರೊಳಗಿನ ಭೇದಕಾರದ ಅಂಶಗಳನ್ನು ಅರಿಯುವುದು ಅನಿವಾರ್ಯ ಮತ್ತು ಅದರೊಳಗಿನ ಭೇದಕಾರಕ ಅಂಶಗಳನ್ನು ಬಳಸಲೇಬೇಕಾಗುತ್ತದೆ. ನಾನು ಎನ್ನುವುದಕ್ಕೆ ತನ್ನದೇ ಅಸ್ಮಿತೆಯೊಂದು ಬರುವುದೇ ಭಿನ್ನವಾದ ನೀನು ಎಂಬ ಘಟಕದ ಜೊತೆ ಹೋಲಿಸಿಕೊಂಡಾಗ ಭಾಷೆಯ ಒಳಗಿನ ಜೆಂಡರ್ ಅಧಿಕಾರವನ್ನು ಕಳಚಲು ನಿರ್ಲಿಂಗಿಯ ಶಬ್ದರಚನೆ ಅಥವಾ ಎರಡೂ ಲಿಂಗಗಳಿಗೆ ಒಂದೇ ಪದದ ಬಳಕೆ ಮುಂತಾದ ಹಲವು ಪ್ರಯೋಗಗಳನ್ನು ಸ್ತ್ರೀವಾದಿಗಳು ಜಾಗತಿಕವಾಗಿ ಮುನ್ನೆಲೆಗೆ ತಂದಿರುತ್ತಾರೆ. ಆದರೆ ಇಂಥ ಪ್ರಯೋಗಗಳು ಆಯಾಯ ಭಾಷೆಯೊಳಗಡೆ ಈಗಾಗಲೇ ಸ್ಥಾಪಿತವಾಗಿವೆ. ಸಂರಚನೆಗೆ ತಕ್ಕಂತೆ ಮಾತ್ರವೇ ಸಫಲ ಅಥವಾ ವಿಫಲವಾಗಿರುತ್ತವೆ."[೩]

ಮಹಿಳೆ ಬಳಸುವ ಭಾಷೆ ಬಳಕೆ ಮೇಲ್ ನೋಟಕ್ಕೆ ಸಹಜವಾದ ಸಮುದಾಯ ಬಳಸುವ ಭಾಷೆಯನ್ನೇ ಮಹಿಳೆ ಬಳಸುತ್ತಾಳೆ. ಈ ಭಾಷೆ ಮಹಿಳೆಯ ಭಾವನೆಗಳನ್ನು ವ್ಯಕ್ತಪಡಿಸಲು ಪರಿಪೂರ್ಣವಾಗಿದೆಯೇ? ಅಥವಾ ಮಹಿಳೆಗೆ ಕಷ್ಟವಾಗಿದೆಯೇ ಎಂದು ಪ್ರಶ್ನಿಸಿಕೊಂಡರೆ ಮಹಿಳೆಯ ಸಂವೇದನೆಗಳನ್ನು ಹೇಳಿಕೊಳ್ಳಲು ಭಾಷೆ ಕಷ್ಟವಾಗಿದೆ. "ಕನ್ನಡ ಭಾಷೆಯಲ್ಲಿ ಅದರದೇ ಬಿಗಿಯಾದ ಕಟ್ಟಳೆಗಳಿವೆ. ಹೊರಗೆ ಎಷ್ಟೇ ಸ್ತ್ರೀ ಸಂವೇದನೆಯ ಕಾಳಜಿಗಳು ಇಂದು ಕಾಣಿಸಬಹುದು ಆದರೆ ಗಂಡಾಳ್ತನವನ್ನು ನಿವಾರಿಸುವ ನಿಟ್ಟಿನ ಹೊಸ ಭಾಷಾಪ್ರಯೋಗಗಳನ್ನು ಇಲ್ಲಿನ ಸಾಂಪ್ರದಾಯಿಕ ಸಮಷ್ಟಿ ಚಿತ್ತ ಒಳಗಿಂದಲೇ ನಿರಾಕರಿಸುತ್ತದೆ."[೪]

ಪ್ರಸ್ತುತ ಅಧ್ಯಯನದಲ್ಲಿ ಮಹಿಳೆ ಬಳಸುವ ಭಾಷಾ ಚಹರೆಗಳನ್ನು, ವೈಶಿಷ್ಟಗಳನ್ನು ಗುರುತಿಸುವ ಜೊತೆಗೆ ಸಾಮಾಜಿಕ ನಿರ್ದೇಶನ-ಅಪೇಕ್ಷೆಗಳನ್ನು ಅರ್ಥೈಸಿಕೊಳ್ಳುವುದು ಮುಖ್ಯವಾಗಿದೆ. ಈ ಅಧ್ಯಯನದಿಂದ ಕನ್ನಡದ ಸಂದರ್ಭದಲ್ಲಿ ಭಾಷೆಯೊಳಗಡೆ ಇರುವ ಲಿಂಗ ವೈಶಿಷ್ಟ್ಯತೆಗಳನ್ನು ಕಂಡುಕೊಳ್ಳಲೂ ಸಾಧ್ಯವಾಗುತ್ತದೆ. ಈ ಅಗತ್ಯ ಪೂರೈಕೆಗಳಿಗೆ ಅನುಗುಣವಾಗಿ ಅಧ್ಯಾಯ ಮುಂದುವರೆದಿದೆ.

### ೩.೧. ಸಾಮಾಜಿಕ ನಿರ್ದೇಶನ-ಅಪೇಕ್ಷೆ

ಮಹಿಳೆ ಭಾಷೆಯನ್ನು ಕಲಿಯುವ ಸಂದರ್ಭದಲ್ಲಿ ಒಂದು ವಿಶೇಷವಾದ ಸಾಮರ್ಥ್ಯವನ್ನು ಹೊಂದಿದ್ದಾಳೆ. ಗಂಡಿಗಿಂತ ವೇಗವಾಗಿ ಭಾಷಾ ಸಾಮರ್ಥ್ಯವನ್ನು ಆಕೆ ಪಡೆದುಕೊಳ್ಳುತ್ತಾಳೆ. ಅದಕ್ಕೆ ಸಂಶೋಧನೆಗಳು ಸಾಕ್ಷಿಯಾಗಿವೆ. ವಾಸ್ತವವಾಗಿ ವೇಗವಾಗಿ ಭಾಷಾ ಸಾಮರ್ಥ್ಯವನ್ನು ಬಳಸುವ ಸಂದರ್ಭ ಬಂದಾಗ ಮಾತ್ರ ಸಮಾಜದಲ್ಲಿನ ನಿರ್ಬಂಧ ನಿಷೇಧಗಳು ಅಡ್ಡಿಯನ್ನುಂಟು ಮಾಡುತ್ತವೆ. ಹೀಗಾಗಿ ಹೆಂಗಸಿನ ಮಾತಿನ ಬಳಕೆಯ ಪ್ರಮಾಣ ಕಡಿಮೆಯಾಗುತ್ತಾ ಹೋಗುತ್ತದೆ. ಸಮಾಜ ಮಹಿಳೆಯನ್ನು ಪರಿಭಾವಿಸಿಕೊಳ್ಳುವುದಕ್ಕೆ ಪ್ರತಿಯಾಗಿ ಅವಳನ್ನು ಪರಿಶಿಷ್ಟವಾಗಿ, ಅನುಬಂಧವಾಗಿ, ಉಪಾದಿಯಾಗಿ ಪರಿಭಾವಿಸಿಕೊಂಡಿರುವುದನ್ನು ಸರಳವಾಗಿ ಗುರುತಿಸಬಹುದಾಗಿದೆ. ಇನ್ನೂ ಮುಂದೆ ಹೋಗಿ ಹೇಳಬೇಕೆಂದರೆ ಮಹಿಳೆಯನ್ನು ತಾಯಿಯಾಗಿ, ಕುಟುಂಬದ ಸಂಸಾರದ, ಗಂಡನ, ಮಕ್ಕಳ, ಹಿತಾಸಕ್ತಿಗಳನ್ನು ಕಾಪಾಡುವ ಒಂದು ಸಾಧನವಾಗಿ, ಸಂಪನ್ಮೂಲವಾಗಿ ಪರಿಭಾವಿಸಿಕೊಳ್ಳಲಾಗಿದೆ. ಒಂದು ವೇಳೆ ಸಮಾಜವು ಅಪೇಕ್ಷಿಸುವ ಕ್ರಮದಲ್ಲಿ ಮಹಿಳೆಯರು ಬದುಕದಿದ್ದರೆ ಅವರನ್ನು ಘಾತುಕ ಶಕ್ತಿಗಳಂತೆ ನೋಡುವುದು ಪ್ರಚಲಿತದಲ್ಲಿದೆ. ಸಮಾಜವು ಇಂತಹ ಜಾಡು ಬಿಟ್ಟು ಹೋಗುವ ಹೆಣ್ಣಿನ ನಡತೆಯನ್ನು ಮನ್ನಿಸುವುದಿಲ್ಲ. ಸಮಾಜವು ಹೇಗೆ ನಿರೀಕ್ಷಿಸುತ್ತದೋ ಅದೇ ರೀತಿ ಮಹಿಳೆಯರು ಬದುಕಬೇಕಾಗುತ್ತದೆ. ಇಲ್ಲದಿದ್ದರೆ ಸಮಾಜದ ಬಹಿಷ್ಕಾರ, ನಿಷೇಧ ಗಡಿಪಾರುಗಳಿಗೆ ಒಳಗಾಗಬೇಕಾಗುತ್ತದೆ.

ಪುರುಷನನ್ನು ಸಾಮಾಜಿಕತೆಯ ಸಂಸ್ಕೃತಿಯ ನೆಲೆಯಲ್ಲಿ ಪರಿಭಾವಿಸಿಕೊಳ್ಳುತ್ತಿರುವುದರಿಂದ ಅವನು ಸಮಾಜದಲ್ಲಿ ಅಧಿಕಾರ, ಆಸ್ತಿ, ಸಂಪತ್ತು, ಸಂಪನ್ಮೂಲಕ್ಕೆ ಹಕ್ಕುದಾರನಾಗಿಬಿಟ್ಟಿದ್ದಾನೆ. ಸಮಾಜದಲ್ಲಿ ಇರುವಂತಹ ಈ ಬಗೆಯ ತಾರತಮ್ಯ ಗುಣ ಮನುಷ್ಯರ ಬಳಕೆಯ ಭಾಷೆಯೊಳಗಡೆಯೂ ಸಹಜವಾಗಿಯೇ  ಕಾಣುತ್ತದೆ. ಏಕೆಂದರೆ ಭಾಷೆ ಸಮಾಜವನ್ನು ಪ್ರತಿನಿಧಿಸುತ್ತದೆ.

ಮಹಿಳೆ ಬಳಸುವ ಭಾಷೆ ಗಂಡಸು ನಿರ್ಮಿತ, ಪುರುಷನ ಹಿತಾಸಕ್ತಿಗೆ ಅನುಗುಣವಾಗಿ ಭಾಷೆ ರಚನೆಯಾಗಿದೆ. ಈ ಮಾದರಿಯ ಅಧ್ಯಯನಗಳು ಈಗಾಗಲೇ ಪಾಶ್ಚಿಮಾತ್ಯರಲ್ಲಿ ನಡೆದಿವೆ. ಈ ಪ್ರಶ್ನೆಯನ್ನು ಮುಂದಿಟ್ಟುಕೊಂಡು ಕನ್ನಡ ಭಾಷೆಯನ್ನು ಅಧ್ಯಯನ ಮಾಡುವುದು ಅಗತ್ಯವಿದೆ. ಮಹಿಳೆಯ ಬಳಕೆಯ ಭಾಷೆಯನ್ನು ಕುರಿತು ಅಧ್ಯಯನ ಮಾಡಬೇಕು ಮತ್ತು ಮಹಿಳೆಯ ಬಳಕೆಯ ಭಾಷೆ ಕುರಿತು ಸಮಾಜದ ಅಪೇಕ್ಷೆ ಏನಾಗಿದೆ? ಮಹಿಳೆಯ ಬಳಕೆಯ ಭಾಷೆಯ ಬಗೆಗೆ ಸಮಾಜದ ಅಪೇಕ್ಷೆ ಪೂರಕವಾಗಿದೆಯೇ? ಸಮಾಜದ ಅಪೇಕ್ಷೆಗೆ ಮಹಿಳೆ ಯಾವೆಲ್ಲ ವಲಯದಲ್ಲಿ ಪ್ರತಿರೋಧವನ್ನು ವ್ಯಕ್ತಪಡಿಸುತ್ತಿದ್ದಾಳೆ ಎಂಬಂತಹ ಮಹತ್ವದ ಪ್ರಶ್ನೆಗಳನ್ನು

ಮುಂದಿಟ್ಟುಕೊಂಡು ಪ್ರಸ್ತುತ ಅಧ್ಯಯನ ಕನ್ನಡದ ಸಂದರ್ಭದಲ್ಲಿ ಇವುಗಳಿಗೆ ಉತ್ತರಿಸಿಕೊಳ್ಳುತ್ತ ಮುಂದುವರೆದಿದೆ.

ಬಳಕೆಯ ಭಾಷೆ ಎಂದಾಗ ಇಲ್ಲಿ ಮುಖ್ಯವಾಗಿ ಜನಪದರು ರೂಪಿಸಿಕೊಂಡಿರುವ ಗಾದೆ, ಒಗಟು, ಜನಪದ ಕಥೆಗಳು ಹಾಗೂ ಕ್ಷೇತ್ರಕಾರ್ಯದಲ್ಲಿ ಕಂಡುಕೊಂಡ ಮಹಿಳೆಯರೊಳಗೆ ಇರುವಂತಹ ಕೆಲವು ನಿರೂಪಣೆಗಳ ಮುಖಾಂತರ ಇವುಗಳನ್ನು ಅಧ್ಯಯನ ಮಾಡುವುದರ ಮುಖೇನ ಈ ಪ್ರಶ್ನೆಗಳನ್ನು ಬಿಡಿಸಿಕೊಳ್ಳಲಾಗಿದೆ.

ಸಮಾಜ ಮಹಿಳೆಯನ್ನು ಮಾತನಾಡದಂತೆ ಪ್ರತಿ ಸಂದರ್ಭದಲ್ಲಿಯು ಮಹಿಳೆಯ ಬಾಯಿಯನ್ನು ಕಟ್ಟಿಹಾಕುತ್ತಿರುತ್ತದೆ. ಉದಾಹರಣೆಗೆ

"ನೀನು ಸುಮ್ಮನಿರು ಬಾಯಿ ಮುಚ್ಚು"

"ಮಾತಾಡಬೇಡ, ನಿನಗೆ ಗೊತ್ತಾಗಲ್ಲ"

"ನಿನಗೆ ಅರ್ಥ ಆಗಲ್ಲ"

"ಏನೇನೋ ಮಾತಾಡಬೇಡ"

"ನಿನಗೆ ತಿಳಿಯಲ್ಲ ಸುಮ್ಮನೆ ಇರು"

ನಿನಗೇನ ಗೊತ್ತಾಗುತೆ ಮುಸರೇ ತೊಳೆಯಾದ ಬಿಟ್ಟೆ

ನಿನಗೆ ಗೊತ್ತಾಗೊಲ್ಲ ಗಂಡಸರ ವಿಚಾರ

ಈ ನಿರೂಪಣೆಗಳು ಯಾರು ಯಾರಿಗೆ ಹೆಚ್ಚು ಬಳಸುತ್ತಾರೆ? ಎಂದು ಪ್ರಶ್ನಿಸಿಕೊಂಡರೆ ಸರ್ವೆಸಾಮಾನ್ಯವಾಗಿ ಅರ್ಥವಾಗಿಬಿಡುತ್ತದೆ. ಪುರುಷ ಮಹಿಳೆಯನ್ನು ಉದ್ದೇಶಿಸಿ ಮಾತನಾಡುವ ಪ್ರತಿ ಬಾರಿಯೂ ಹೇಳುವ ಮಾತುಗಳಿವು. ಅಂದರೆ ಇಲ್ಲಿ ನಮಗೆ ಸ್ಪಷ್ಟವಾಗಿ ತಿಳಿಯುತ್ತದೆ. ಪುರುಷ ಮಾತನಾಡುತ್ತಿರುವಾಗ ಮಹಿಳೆಯ ಬಗ್ಗೆ ಇರುವಂತಹ ಅಪೇಕ್ಷೆಗಳು. ಪುರುಷ ಮಾತನಾಡುವಾಗ ಮಹಿಳೆಯನ್ನು ಪ್ರತಿಭಾರಿ ನಿರ್ದೇಶಿಸುತ್ತಿರುತ್ತಾನೆ. ಮತ್ತು ಮಹಿಳೆ ಮಾತನಾಡದಂತೆ ನೋಡುತ್ತಾನೆ, ನೋಡಿಕೊಳ್ಳುತ್ತಾನೆ.

"ಮಾತು-ಮಾತಿನ ನಡುವೆ ಸುಮ್ಮನಿರಿಸುವ ಬಾಯಿ ಮುಚ್ಚಿಸುವ ಈ ಪ್ರಕ್ರಿಯೆ ಯಾವಾಗ ನಡೆಯುತ್ತದೆ ಎಂದರೆ ಹೆಣ್ಣಿನ ಮಾತಿಗೆ ಆರ್ಥವಿಲ್ಲ ಎಂದಾಗ. ಹೆಣ್ಣಿನ ಭಾಷೆ ತನ್ನ ಕ್ರಿಯಾರೂಪವನ್ನು ಕಳೆದುಕೊಳ್ಳುವುದು ಮಾತಿಗೆ ಬೆಲೆಯಿಲ್ಲದಿರುವಾಗ. ಭಾಷಿಕ ಪರಿಣಾಮ ನೀರರ್ಥಕವಾದದ್ದು ಕೇಳಿಸಿಕೊಳ್ಳುವವರ ನಿರಾಕರಣೆಗೆ ಒಳಗಾಗುವಂತಹದ್ದು ಎಂದು ತಿಳಿದಾಗ ಸಹಜವಾಗಿಯೇ

ಹೆಣ್ಣು ಆ ಭಾಷಾ ಬಳಕೆಯ ಸಂದರ್ಭದಿಂದ ದೂರ ಉಳಿಯುತ್ತಾಳೆ. ಹೀಗಾಗಿಯೇ ಮಾತಿನ ನೆಲೆಯಿಂದ ಹೆಣ್ಣು ಪ್ರತ್ಯೇಕಗೊಂಡು ಮೌನದೆಡೆಗೆ ಸಾಗಿಬಿಡುತ್ತಾಳೇ"[೫]

ಹೀಗಿದ್ದರೂ ಮಹಿಳೆಯ ಮೇಲೆ ಒಂದು ಆರೋಪವಿದೆ. ಹಿಂದಿನ ಅಧ್ಯಾಯದಲ್ಲಿ ಚರ್ಚಿಸಿದಂತೆ "ಹೆಚ್ಚು ಮಾತನಾಡುತ್ತಾಳೆ" ಹರಟೆ ಮಲ್ಲಿ, ಅವಳು ಮಾತಾಡೋ ಮಲ್ಲಿ ಎಂದು ಆರೋಪಿಸಲಾಗಿದೆ. ಮಹಿಳೆ ಹೆಚ್ಚು ಮಾತಾಡುತ್ತಾಳೆ ಎಂಬ ಬಗೆಯ ನಿರೂಪಣೆಗಳು ನಮ್ಮ ಜನಪದ ಗಾದೆಗಳಲ್ಲಿ ಕಂಡುಬರುತ್ತದೆ. ಉದಾಹರಣೆಗೆ "ಮಾತು ಮನೆ ಕೆಡಿಸಿತು ತೂತು ಒಲೆ ಕೆಡಿಸಿತು" ಈ ಗಾದೆ ಪ್ರಮುಖವಾಗಿ ಮಹಿಳೆಯನ್ನೊಳಗೊಂಡೆ ರಚನೆಯಾಗಿದೆ. ಒಲೆ ಎನ್ನುವುದು ಮಹಿಳೆಯನ್ನೊಳಗೊಂಡ ಸಂಗತಿ. ಮಹಿಳೆ ಮತ್ತು ಒಲೆಯನ್ನು ಪರಂಪರೆಯಿಂದಲೂ ಒಟ್ಟಿಗೆ ಇರಿಸಿದ್ದಾರೆ. ಹೀಗಾಗಿ ಮಹಿಳೆ ಮಾತಿನಿಂದಾಗಿ ಮನೆ ಕೆಟ್ಟುಹೋಗುತ್ತೆ ಆದುದರಿಂದ ಮಹಿಳೆ ಮಾತನಾಡಬಾರದು ಎಂಬ ನಿರ್ದೇಶನ ಇದರಲ್ಲಿ ಅಡಗಿದೆ. ಮಹಿಳೆ ಒಲೆ ಊದಿಕೊಂಡು ಮನೆಯ ಒಳಗಡೇನೆ ಇರಬೇಕು. ಅವಳು ಮಾತನಾಡಲು ಪ್ರಾರಂಭಿಸಿದರೆ ಪುರುಷನ ಆದರ್ಶ ಮೌಲ್ಯಗಳಿಗೆ ದಕ್ಕೆ ಆಗಬಹುದೆಂದು ಈ ಬಗೆಯ ನಿರೂಪಣೆಗಳನ್ನು ರಚಿಸಲಾಗಿದೆ.

"ಹಂಡೆ ಬಾಯಿ ಮುಚ್ಚಬಹುದು ಮುಂಡೆ ಬಾಯಿ ಮುಚ್ಚೊಕೆ ಆಗಲ್ಲ" ಮಹಿಳೆ ಹೆಚ್ಚು ಮಾತಾಡುವುದನ್ನು ಆರೋಪಿಸುವ ಗಾದೆ ಇದಾಗಿದೆ. ಮಹಿಳೆ ಬಾಯಿ ಬಿಟ್ಟರೆ ಆದರ್ಶ ಮೌಲ್ಯಗಳನ್ನು ಹೇರಲು ಸಾಧ್ಯವಿಲ್ಲ ಎಂದು ಭಾವಿಸಿ ಮಹಿಳೆಯನ್ನು ಶಾಶ್ವತವಾಗಿ ಬಾಯಿ ಮುಚ್ಚಿಸುವ ನಿರೂಪಣೆಗಳಿವು. ಕನ್ನಡ ಸಂದರ್ಭದಲ್ಲಿ ಈ ಬಗೆಯಲ್ಲಿ ಹಲವು ನಿರೂಪಣೆಗಳನ್ನು ನೋಡುವುದಾದರೆ,

"ಹೆಣ್ಣು ಬಾಯಿ ತೆರೆದರೆ, ಮಣ್ಣು ಕೂಡ ಕೆಂಡವಾಗುತ್ತೆ"

"ಮಾತು ತಂದವಳು ಮಗಳಲ್ಲ
ಕ್ಯಾತೆ ತಂದವಳು ಸೂಸೆಯಲ್ಲ"

"ಹರಕು ಬಾಯಿಯ ಹೆಣ್ಣು ಹೆಣ್ಣಲ್ಲ
ಕೊಳಕು ಮಣ್ಣಿನ ಗದ್ದೆ ಗದ್ದೆಯಲ್ಲ"

ಎಂದು 'ಹೆಣ್ಣಿಗೆ ಮಾತು ಹೆಚ್ಚು' ಎಂದು ನಿಷೇಧವನ್ನು ಹೇರಿ ಅವಳನ್ನು ಬಹುಪಾಲು ವ್ಯವಸ್ಥೆ ಮೂಕಳಾಗಿಸಿದೆ. "ನಗೋ ಹೆಂಗ್ಸನ್ನು ನಂಬಬೇಡ" ಎಂದಿತ್ಯಾದಿ ಗಾದೆಗಳೆಲ್ಲವೂ ಹೆಣ್ಣಿನ ಎಲ್ಲಾ ಚಟುವಟುಕೆಗಳ ಮೇಲೆ ಗಂಡು ಸಾಧಿಸುವ ಹತೋಟಿಯನ್ನು ತೋರಿಸುತ್ತದೆ.

"ಮಾತು ಮೀರಿದ ಹೆಂಡತಿ, ತುಟಿ ಮೀರಿದ ಹಲ್ಲೂ ಎರಡೂ ಅಸಹ್ಯ"

ಈ ಬಗೆಯ ಗಾದೆಗಳು ಮಹಿಳೆಯರ ಮಾತುಗಳಿಗೆ ಸಮಾಜ ಹಾಕುವ ಕಡಿವಾಣಗಳನ್ನು ಪ್ರತಿನಿಧಿಸುತ್ತವೆ. ಈ ಅಂಶಗಳೆಲ್ಲವೂ ಸಮಾಜದ ಅಪೇಕ್ಷೆಯಾಗಿವೆ. ಅಂದರೆ ಮಹಿಳೆಯ ಭಾಷೆಯನ್ನು ಕುರಿತಂತೆ ಇರುವ ಅಪೇಕ್ಷೆ ಏನು? ಎಂಬುದಕ್ಕೆ ಈ ನಿರೂಪಣೆಗಳು ಉತ್ತರಿಸುತ್ತವೆ. ಹೀಗಿದ್ದಾಗ ಮಹಿಳೆ ಈ ಸಮಾಜದ ಅಪೇಕ್ಷೆಯನ್ನು ಪೂರೈಸಲು ಹೇಗೆ ಹೆಣಗಾಡುತ್ತಿದ್ದಾಳೆ. ಅಪೇಕ್ಷೆಯ ಭಾಷೆ ಬಳಕೆಯನ್ನು ಮಹಿಳೆ ಹೇಗೆ ಬಳುಸುತ್ತಿದ್ದಾಳೆ. ಮಹಿಳೆಗೆ ಸಮಾಜ ಪ್ರತಿ ಹಂತದಲ್ಲೂ ಕಡಿವಾಣವನ್ನು ಒಡ್ಡಿ ಅವಳನ್ನು ಮೂಕಳನ್ನಾಗಿಸಿದೆ. ಸ್ವತಂತ್ರ್ಯವಾಗಿ ನಿರ್ಭಯವಾಗಿ ಮಹಿಳೆ ಮಾತನಾಡಲು ಸಮಾಜದಲ್ಲಿ ಅವಕಾಶಗಳೇ ಇಲ್ಲ. ಸಮಾಜ ಮಹಿಳೆಯರ ಮಾತುಗಳು ಎಷ್ಟಿರಬೇಕು ಎಂದು ಈಗಾಗಲೇ ಸಿದ್ಧಪಡಿಸಿಕೊಟ್ಟಿದೆ. ಸಮಾಜ ರೂಪಿಸಿಕೊಟ್ಟಿರುವ ಅಷ್ಟೇ ಪದಗಳಲ್ಲಿ ಆ ಚೌಕಟ್ಟಿನ ಒಳಗೆ ಮಾತಾಡಬೇಕು ಎಂಬುದನ್ನು ಸಮಾಜ ನಿರ್ಧರಿಸಿದೆ. ಹೀಗೆ ಸಿದ್ಧಗೊಂಡಿರುವಂತಹ ಭಾಷೆಯನ್ನು ಬಳಸಿ ಅಭಿವ್ಯಕ್ತಿಸಲು ನಮಗೆ ಕಷ್ಟವಾಗಿದೆ ಎಂದು ಕೆಲವು ಲೇಖಕಿಯರು ಹೇಳಿಕೊಂಡಿದ್ದಾರೆ. ಉದಾಹರಣೆಗೆ "ಹೆಣ್ಣು ಮಕ್ಕಳಿಗೆ ಅಭಿವ್ಯಕ್ತಿ ಅಷ್ಟು ಸಲೀಸಾಗಿರುವುದಿಲ್ಲ. ನಾವು ಅನುಭವಿಸುವ ನೋಡುವ ಅನೇಕ ಸಂಗತಿಗಳ ಬಗ್ಗೆ ಕ್ರಿಯೆಗಳ ಬಗ್ಗೆ ಮನಸ್ಸಲ್ಲಿ ಏನೆಲ್ಲಾ ಅಂದುಕೊಳುತ್ತೇವೆ. ಆದರೆ ಅದನ್ನೆಲ್ಲಾ ಮಾತಿನಲ್ಲಿ, ಬರಹದಲ್ಲಿ ಹೇಳಲು ಸಾಧ್ಯವಾಗದೆ ಒದ್ದಾಡುತ್ತೇವೆ".[೬] ಇದು ಔಪಚಾರಿಕ ವಲಯದಲ್ಲಿ ಶಿಕ್ಷಿತ ಮಹಿಳೆ ಪುರುಷ ನಿರ್ಮಿತ ಭಾಷೆ ಒಳಗಡೆ ತನ್ನ ಅಭಿವ್ಯಕ್ತಿಯನ್ನು ಕುರಿತಾಗಿ ಮತ್ತೊಬ್ಬ ಲೇಖಕಿಯ ಪ್ರತಿಕ್ರಿಯೆ. ಭಿನ್ನ ಮಾದರಿಯಲ್ಲಿ ಸಿಗುತ್ತದೆ.

"ಮಹಿಳೆಗೆ ತನ್ನ ಅನುಭವಗಳ ಅಭಿವ್ಯಕ್ತಿಗೆ ಒಂದು ಭಾಷೆ ಇದೆ, ಹೀಗೆ ಅದು ಪುರುಷ ಭಾಷೆ ಹೆಣ್ಣಿನ ಭಾಷೆಯನ್ನು ರೂಪಿಸಿಕೊಳ್ಳಲು ಪ್ರಯತ್ನಿಸಿದ್ದೀರೇನು ? ಅಥವಾ ಇದನ್ನು ಹೇಗೆ ಗ್ರಹಿಸುತ್ತೀರಿ ? ಎಂದು ಎಂ.ಫಿಲ್. ವಿದ್ಯಾರ್ಥಿನಿ ಶಕೀಲಾ ಕೇಳಿದ ಪ್ರಶ್ನೆಗೆ ಎಚ್. ನಾಗವೇಣಿ ಅವರ ಉತ್ತರ "ಇದು ಪುರುಷ ಭಾಷೆ, ಇದು ಹೆಣ್ಣಿನ ಭಾಷೆ ಎಂದು ಪರಂಪರೆಯಿಂದಲೆ ಒಂದು ಭಾಷಾ ಚೌಕಟ್ಟನ್ನು ಈ ಪುರುಷಪ್ರಧಾನ ಸಮಾಜ ನಮಗೆ ಹಾಕಿಕೊಟ್ಟಿದ್ದೂ ನಿಜ.... ಕೆಲವು ಬರಹಗಾರ್ತಿಯರು ತಮ್ಮ ಅನುಭವಗಳ ಅಭಿವ್ಯಕ್ತಿಗೆ ಆ ಭಾಷಾ ಚೌಕಟ್ಟನ್ನು ಒಪ್ಪಿಕೊಂಡಿದ್ದೂ ನಿಜ. ಆದರೆ ಈಗ ಕಾಲ ಬದಲಾಗಿದೆ. ನಾನು ಭಾಷೆಯಲ್ಲಿನ 'ಲಿಂಗಭೇಧ'ವನ್ನು ಎಂದೂ ಒಪ್ಪದಿರುವ ಕಾರಣ ನನ್ನ ಸೃಜನಶೀಲ ಅಭಿವ್ಯಕ್ತಿಗೆ......ನನ್ನ ಆಲೋಚನೆಗೆ ಅನುಭವ ವಸ್ತು ಪಾತ್ರ ಸನ್ನಿವೇಶಕ್ಕೆ ತಕ್ಕಂತೆ ಈ ಪುರುಷ ಪ್ರಧಾನ ವ್ಯವಸ್ಥೆಯಲ್ಲಿರುವ ಭಾಷೆಯನ್ನು ನಿರ್ಭಿಡೆಯಿಂದ ಬಳಸಿದ್ದೇನೆ, ಬಳಸುತ್ತೇನೆ. ಹೆಣ್ಣಿನ ಭಾಷೆಯನ್ನು ರೂಪಿಸಿಕೊಳ್ಳುವ ಅಗತ್ಯ ನನಗೆ ಬಂದೇ ಇಲ್ಲ.

ಬರುವುದು ಇಲ್ಲವೆಂದು ದ್ವಂದ್ವಾತ್ಮಕವಾಗಿ ತಮ್ಮ ನಿಲುವನ್ನು ಪ್ರಕಟಿಸುತ್ತಾರೆ."[೭] ಈ ಪ್ರಶ್ನೆಗೆ ಪ್ರತಿಕ್ರಿಯಿಸಿರುವ ಎಲ್ಲಾ ಲೇಖಕಿಯರು ಹೀಗೆ ಭಿನ್ನ ನಿಲುವನ್ನು ತಾಳುತ್ತಾರೆ. ಪುರುಷ ಭಾಷೆ ಮಹಿಳಾ ಭಾಷೆ ಎಂದು ಗುರುತಿಸಿ ಪುರುಷನಿಗೆ ಕೊಂಬು ಬರಿಸಬೇಡಿ ಎಂದು ಹೇಳುತ್ತಾರೆ.

ಇದಿಷ್ಟು ಬಳಕೆಯ ಭಾಷೆಯನ್ನು ಕುರಿತಂತೆ ಶಿಕ್ಷಿತ ಮಹಿಳೆಯರ ಪ್ರತಿಕ್ರಿಯೆಗಳು ಮಹಿಳೆಯರಿಗೆ ತಿಳಿಯದಂತೆ ಈ ವಿಚಾರ ಗೊಂದಲಕ್ಕೆ ಈಡುಗೊಳಿಸುತ್ತದೆ. ಏಕೆಂದರೆ ಪುರುಷ ಪ್ರಧಾನ ವ್ಯವಸ್ಥೆ ಬೇರು ಬಿಟ್ಟಿರುವಂತಹ ಆಳಗಲ ಆ ಬಗೆಯದು ಮಹಿಳೆ ತಾನು ಏನು ಮಾಡುತ್ತಿದ್ದೇನೆ? ತನ್ನ ನಿಲುವೇನು? ಎಂದು ತನ್ನತನವನ್ನು ಅರ್ಥಮಾಡಿಕೊಳ್ಳುವುದೇ ಸಾಧ್ಯವಾಗದಿರುವಂತೆ ಪರಿಸ್ಥಿತಿಯನ್ನು ಸೃಷ್ಟಿಸಲಾಗಿದೆ. ಮಹಿಳೆಯ ಎದುರಿಗೆ ಇಂತಹದೊಂದು ಪ್ರಶ್ನೆ ಎದುರಾದರೆ ಮಹಿಳೆ ಗೊಂದಲಕ್ಕೆ ಬೀಳುತ್ತಾಳೆ ಹೊರತು ಆಕೆಗೆ ತಾನು ಯಾವ ದಡದಲ್ಲಿದ್ದೀನಿ ಎಂಬುದು ಅರ್ಥಮಾಡಿಕೊಳ್ಳಲಿಕ್ಕೆ ಎಷ್ಟೋ ಸಮಯಾವಕಾಶ ಅಗತ್ಯವಾಗಿ ಬೇಕಿದೆ.

ಇನ್ನು ಜನಪದೀಯವಾಗಿ ಮಹಿಳೆಯರ ಬಳಕೆಯೊಳಗಡೆ ಅವಳ ಭಾಷಾ ಕ್ಷೇತ್ರ ಮಹಿಳಾ ವಲಯದಲ್ಲಿ ಅವಳ ಬಳಕೆಯ ಭಾಷೆ ಹೇಗಿದೆ? ಎಂಬುದನ್ನು ಗಮನಿಸಿ ಕನ್ನಡ ಸಂದರ್ಭದಲ್ಲಿ ಅವಳ ಭಾಷೆ ಹೇಗಿದೆ? ಈಗ ಬಳಕೆಯಲ್ಲಿ ಇರುವ ಭಾಷೆಯನ್ನು ಕುರಿತಂತೆ ಪಾರಂಪರಿಕವಾಗಿ ಮಹಿಳೆ ಹೇಗೆ ಪ್ರತಿಕ್ರಿಯಿಸುತ್ತ ಬಂದಿದ್ದಾಳೆ. ಮಹಿಳೆಯರು ರಚಿಸಿರುವ ನಿರೂಪಣೆಗಳ ಮುಖಾಂತರ ಮುಂದಿನಂತೆ ಅರ್ಥಮಾಡಿಕೊಳ್ಳಲುಬಹುದು. ಜನಪದ ಒಂದು ತ್ರಿಪದಿಯಲ್ಲಿ.

"ಮಾತ್ಗಾಗ್ತಿ ನಿನ್ ಮನೆ ಬೈಯ್ತದೆ ಅಂದ್ರೆ
ನಿಂತ್ ಬೇಯ್ಲಿ ನಿದಾನಕ್‌ಕುಪ್ಪುಸ್ಕಂಡ್ ಬೇಯ್ಲಿ
ಮಾತೋಂದು ಆಡಿದ್ರೆ ಮರುದ್ ತಳದಲ್
ಅಟ್ಕೋಂಡ್ ಉಣ್ತೇನಿ ಅಂದ್ಲಂತೆ"

ಎಂಬ ತ್ರಿಪದಿ ಮಹಿಳೆಯ ಮಾತುಗಳಿಗೆ ಸಂಬಂದಿಸಿ ಅತಿಯಾದ ಮಾತುಗಾರ್ತಿ ತನ್ನನು ತಾನು ಪ್ರತಿನಿಧೀಕರಿಸುವಂತೆ ತೋರುತ್ತದೆ. "ಬದುಕಿನ ಸುಖದುಃಖಗಳು ನಿರ್ಮಿಸುವ ಒತ್ತಡಗಳನ್ನು ಒಳಗೆ ಹುದುಗಿಸುವುದು ಸಾಧ್ಯವಿಲ್ಲ. ಹೊರ ಹರಿಯುವ ತೂಬುಗಳಿಲ್ಲದ್ದಿದ್ದರೆ ಕಟ್ಟೆ ಒಡೆಯುತ್ತದೆ" ಹಾಗಾಗಿಯೇ ಮಹಿಳೆಯರು ತಮ್ಮ ನಡುವೇಯ ಎಂದರೆ ಮಹಿಳೆಯರು ತಮ್ಮ ಒಳಗೆ ಮಾತನಾಡಿಕೊಳ್ಳುವ ಪ್ರಕ್ರಿಯೇ ನಡೆಸುತ್ತಾರೆ. ಇದು ಒಂದು ಬಗೆಯಲ್ಲಿ ಪ್ರತಿರೋಧವು ಆಗುತ್ತಿದೆ. ಮಹಿಳೆಯರನ್ನು ಮಾತನಾಡದಂತೆ ತಡೆಹಿಡಿದಿರುವುದರ ಪ್ರತಿರೋಧದಂತೆ ಇಲ್ಲಿ ಭಾಸವಾಗಿದೆ.

'ಹೊರ ಹೋಗುವ ರಾಜಮಾರ್ಗ ಮುಚ್ಚಿರುವಾಗ ಸಣ್ಣ ಕಾಲುದಾರಿ ನಿರ್ಮಾಣವಾಗುವುದು ಸಹಜ. ರಾಜಮಾರ್ಗದಲ್ಲಿ ಸಂಚರಿಸುವ ಸ್ವಯತ್ತ ಅಧಿಕಾರ ಹಕ್ಕುಗಳು ಗಂಡಸಿಗಿದೆ ಹಾಗೆ ಅವನ ಅಭಿವ್ಯಕ್ತಿಗಳಿಗೆ ಕಟ್ಟು ಪಾಡುಗಳಿಲ್ಲ'.[೮]

ಮಹಿಳೆ ಮಾತಿಗೆ ಮನ್ನಣೆ ಇಲ್ಲದಿರುವಾಗ ಅವಳ ಮಾತುಗಳೆಲ್ಲ ಹರಟೆ ಎಂದೆ ಸಮಾಜಕ್ಕೆ ಭಾಸವಾಗಿದೆ. ಸಮಾಜದಲ್ಲಿ ಮಹಿಳೆ ಕೇವಲ ಕೇಳುಗಳಾಗಿರಬೇಕು ಎಂದೆ ಸಮಾಜ ಬಯಸುತ್ತದೆ. ಮಾತುಕತೆ ಎಂದರೆ ಪರಸ್ಪರ ಸಂವಹನ. ನಾನು ಮಾತನಾಡುವುದನ್ನು ಎದುರಿಗಿರುವವರು ನಿಜವಾಗಿ ಕೇಳಿಸಿಕೊಳುತ್ತಿದ್ದಾರೆ ಎಂದು ಮೊದಲಿಗೆ ಅನ್ನಿಸಬೇಕು. ಅವರು ಆಗೀಗ ಊ ಊಹೋಂ ಎನ್ನುತ್ತಾ, ನನ್ನ ಮಾತಿಗೆ ಸೂಕ್ತವಾಗಿ ಪ್ರತಿಕ್ರಿಯೆ ಕೊಡಬೇಕು. ಮುಂದುವರೆದು ತಾವೂ ಮಾತಿಗೆ ತೊಡಗಿ ನನಗೆ ಕೇಳಿಸಿಕೊಳ್ಳಲು ಪ್ರತಿಕ್ರಿಯೆ ತೋರಲು ಅವಕಾಶ ಕಲ್ಪಿಸಬೇಕು. ಸಾಮಾನ್ಯವಾಗಿ ಗಮನಿಸಿ ತಾರತಮ್ಯ ಸಂಬಂಧಗಳಲ್ಲಿ ಮಾತುಕತೆ ಹೀಗೆ ನಡೆಯುವುದಿಲ್ಲ. ಮೇಲಿನವರು ಹೇಳುತ್ತಾರೆ ಕೆಳಗಿನವರು ಹೌದಾಪ್ಪಗಳಾಗಿರಬೇಕು. ಅಷ್ಟೇ ಬಹುತೇಕ ಗಂಡ ಹೆಂಡಿರ ಸಂಭಾಷಣೆ ಸಾಮಾನ್ಯವಾಗಿ ಹೀಗೆಯೇ ಇರುತ್ತದೆ. ಆತ ತನ್ನ ಆಫೀಸು ವ್ಯವಹಾರಗಳ ಗಂಭೀರ ಚರ್ಚೆಗಳನ್ನು ಆಕೆಯೊಂದಿಗೆ ಮಾಡುವುದಿಲ್ಲ. ಆದರೂ ಆ ಬಗ್ಗೆ ಮಾತನಾಡುವಾಗ ತನ್ನ ಪ್ರತಿಷ್ಠೆ ಹೆಗ್ಗಳಿಕೆಗಳನ್ನು ಹೇಳಿಕೊಳ್ಳುತ್ತಿದ್ದರೆ, ಈಕೆ ಒಳ್ಳೆಯ ಅಭಿಮಾನಿಯಾಗಿ ಕೇಳಿಸಿಕೊಳ್ಳಬೇಕು. ಇವಳ ಕೆಲಸಕಾರ್ಯಗಳನ್ನು ಕುರಿತು ಇವಳು ಮಾತನಾಡಲು ಶುರುಮಾಡಿದರೆ ಅವನು ಮಾತ್ರ ತೀರಾ ನಿರ್ಲಕ್ಷ್ಯವಾಗಿ ಎತ್ತಲೋ ಮುಖ ಮಾಡಿರುತ್ತಾನೆ. ಯಾವುದೋ ಪೇಪರ್ ಓದುತ್ತಿರುತ್ತಾನೆ. ಏನೋ ಅರ್ಥವಿಲ್ಲದೆ ಬಡಬಡಿಸುತ್ತಿದ್ದಾಳೆ ಎಂಬಂತೆ ಆಗೀಗ ಹೂಂಗುಟ್ಟುತ್ತಾನೆ. ಅದು ಒತ್ತಾಯಕ್ಕೆ ಉತ್ತರ ನಿರೀಕ್ಷಿಸಿದರೆ "ಆಂ ಮುಗೀತಾ? ಎಂಬುದಾಗಿ ವ್ಯಂಗ್ಯ ಮಾಡಿ ನೋಡುತ್ತಾನೆ. ಹೀಗೆ ಕೊನೆಯನ್ನು ಮುಟ್ಟಿಸುತ್ತಾನೆ. ಏನೆಂದೆ ಅಂತ ಪ್ರಶ್ನೆ ಹಾಕುತ್ತಾನೆ. ಇಲ್ಲ ಇನ್ನು ಮಿರಿದರೆ ಆಯಿತಾ ನಿನ್ನ ಪುರಾಣ ಎಂದು ಮಾತು ನಿಲ್ಲಿಸಲು ಮುಂದಾಗುತ್ತಾನೆ. ಮಹಿಳೆಯರ ಮಾತುಗಳನ್ನು ನಿರ್ಲಕ್ಷ್ಯ ಮಾಡುವ ಇಲ್ಲವೇ, ತಾವೇ ಅತಿಯಾಗಿ ಮಾತಾಡುವ ಹಲವು ಮಾದರಿಗಳು ಕೌಟುಂಬಿಕ ವಲಯಗಳಲ್ಲಿ ಕಂಡುಬರುತ್ತದೆ. ಕೆಲ ಮಹಿಳೆಯರ ಅಭಿಪ್ರಾಯಗಳು ಕೆಳಗಿನಂತಿವೆ.

- "ಇವರು ನನ್ನ ಹತ್ತಿರ ಸರಿಯಾಗಿ ಮಾತೇ ಆಡೋಲ್ಲ. ಮಾತು ಆಡಲೇಬೇಕಾಗಿ ಬಂದರೆ ಎಲ್ಲೋ ನೋಡ್ತಾ ಗೋಡೆಗೋ ಕಿಟಕಿಗೋ ನೆಲಕ್ಕೋ ಗಾಳಿಗೋ ಹೇಳ್ತಾ ಇರೋ ಹಾಗೆ ಮಾತ್ತಾಡುತ್ತಾರೆಯೇ ಹೊರತು ನನ್ನ ಕಡೆ ಮಾತ್ರ ನೋಡಲ್ಲ . ಎಲ್ಲಿ ಆದ್ರೂ ಹೋಗೋವಾಗ ಒಳಗೆ ಬಂದು ಇಂಥಾಕಡೆಗೆ ಹೋಗ್ತಾ ಇದ್ದೀನಿ ಅಂತ ಅನೌನ್ಸ್ ಮಾಡಿ ಹೋಗತ್ತಾರೆ."

•"ನಮ್ಮನೆಯವರಿಗೆ ತಾನೇನು ಅನ್ಯಾಯ ಮಾಡ್ತಿದೀನಿ ಅಂತ ಗೊತ್ತಾಗ್ತಿಲ್ಲ. ಅವರು ಎಲ್ಲರ ಹತ್ತಿರಾನೂ ನಗುನಗುತ್ತಾ ಮಾತಾಡ್ತಾರೆ; ನನ್ನೆದುರು ಮಾತ್ರ ಗಂಟುಮುಖ. ಅವರ ಹತ್ತಿರ ಎಷ್ಟು ಹೊತ್ತು ಬೇಕಾದರೂ ಕೂತು ಹರಟೆ ಹೊಡಿತಾರೆ. ನನ್ನ ಹತ್ತಿರ ಮಾತಾಡೋಕೆ ಮಾತ್ರ ಮಹಾರಾಯರಿಗೆ ಟೈಮೆ ಇಲ್ಲ. ನಾನು ನಾಲ್ಕು ಮಾತಿನಲ್ಲಿ ಕೇಳಿದರೆ ಅರ್ಧ ಮಾತಿನಲ್ಲಿ ಉತ್ತರ ಕೊಡ್ತಾರೆ. ಆಮೇಲೆ ಅಷ್ಟು ಕೊಟ್ಟಿದೇ ಜಾಸ್ತಿಯಾಯ್ತೇನೋ ಅನ್ನೋಹಾಗೆ ಧಿಢಿರಂಥ ಎದ್ದು ಹೊಗ್ಬಿಡ್ತಾರೆ"

•"ನಂಗತೂ ನಮ್ಮ ಯಜಮಾನರ ಮಾತು ಗಲಾಟೆ ಅಬ್ಬರ ಕೇಳಿ ಕೇಳಿ ತಲೆ ಚಿಟ್ಟುಹಿಡಿದ್ಹೋಗಿದೆ. ಅವರು ಏನು ಬೇಕಾದರೂ ಹೇಳಬಹುದು. ಬಾಯಿಗೆ ಬಂದಿದ್ದನ್ನೆಲ್ಲ ಅನ್ನಬಹುದು ಪರವಾಗಿಲ್ಲ. ನಾನು ಮಾತ್ರ ಬಾಯಿ ಮುಚ್ಕೊಂಡು ಬಿದ್ದಿರಬೇಕು. ನಾನೇನಾದರೂ ವಾಪಸ್ ಉತ್ತರ ಕೊಟ್ರೆ ಆಯಿತು, ದೊಡ್ಡ ಸಿಟ್ಟು ಬಂದು ಬಿಡುತ್ತೆ. ಅದೆಷ್ಟುದ್ದ ನಾಲಿಗೆ ನಿಂದು ಸಾಕು, ಮುಚ್ಚುಬಾಯಿ' ಅಂತ ಅಬ್ಬರಿಸಿಬಿಡ್ತಾರೆ. ತನಗೊಬ್ಬನಿಗೇ ಎಲ್ಲಾ ಗೊತ್ತು ಇವಳೊಬ್ಬಳು ಶತಮುರ್ಖಳು ಅಂದ್ಕೋಂಡಿರಬೇಕು. ಎಲ್ಲದಕ್ಕೆ ಯಾಕೆ ಬಾಯಿ ಹಾಕ್ಕೊಂಡು ಬರ್ತೀಯಾ ಅಂತ ಮುಖಕ್ಕೆ ಹೊಡೆದಾಹಾಗೆ ಹೇಳಿಬಿಡ್ತಾರೆ".

ಈ ಮೇಲಿನ ಉದಾಹರಣೆಗಳು ಸ್ಪಷ್ಟವಾಗಿ ವಿವರಿಸುತ್ತವೆ. ಭಾಷೆ ಬಳಕೆಯಲ್ಲಿ ಮಹಿಳೆಗೆ ಮಾತಾಡುವ ಅಗತ್ಯವಿಲ್ಲ ಮತ್ತು ಅವಳೊಟ್ಟಿಗೆ ಚರ್ಚಿಸುವುದು ಅಥವಾ ಮಾತಾಡುವುದು ಅಗತ್ಯವಿಲ್ಲ. ಅವಳ ಮಾತುಗಳು ತನಗೆ ಅಷ್ಟು ಮಹತ್ವವಾದುವುಗಳಲ್ಲ ಅನ್ನುವ ಮನೋಭಾವ. ಹೀಗಾಗಿ ಮಹಿಳೆಯರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಲಾಗದ ಸ್ಥಿತಿಯಲ್ಲಿ ನಿರ್ಲಕ್ಷ್ಯಕ್ಕೆ ಒಳಗಾಗುತ್ತಿದ್ದಾಳೆ. ಇದೆಲ್ಲವು ಕುಟುಂಬ ವಲಯದೊಳಗಡೆ ಮಹಿಳೆಯ ಮಾತುಗಳಿಗೆ ಇರುವ ಕಡಿವಾಣಗಳು.

ಹೆಣ್ಣಿನ ಭಾಷೆಯನ್ನು ಮೌಲ್ಯಮಾಪನ ಮಾಡುವ ವಿಧಾನ ಭಿನ್ನವಾಗಿದೆ. ಇದರ ಮೂಲಕ ಮಹಿಳೆಯರ ಬಾಯಿ ಮುಚ್ಚಿಸುವುದನ್ನು ಕಾಣಬಹುದು. ಮಾತಿನ ಮಲ್ಲಿ ವಾಚಳಿ ಎಂಬಂತಹ ಆರೋಪಗಳಿಂದ ಮೂದಲಿಸುತ್ತಾರೆ. ಆದರೆ ಈ ವಿಧಾನದ ಮೂಲದಿಂದಲೇ ಅವಳ ಧ್ವನಿಯನ್ನು ದಮನ ಮಾಡುವ ಕೆಲಸ ಮೊದಲಾಗುತ್ತದೆ. ಹೆಂಗಸರ ಹರಟೆಗಳು ಭಾಷಿಕ ಆಟಗಳು ಇತ್ಯಾದಿಯಾಗಿ ಮಾತನಾಡುತ್ತಲೇ ಇರುತ್ತಾರೆ. ಸಾಮಾಜಿಕವಾಗಿ ಇದನ್ನು ಮಹಿಳೆಯರ ಮಾತುಗಳು ನಿರುಪಯುಕ್ತ ಎಂದು ಪರಿಗಣಿಸಲಾಗುತ್ತದೆ. ಹಾಸ್ಯಾಸ್ಪದ ಎಂಬ ಹಣೆಪಟ್ಟಿಯೂ ಇದೆ. ಸಮಾಜದ ಈ ಬಗೆಯ ಧೋರಣೆಯಿಂದ ಹೆಂಗಸು ಸಾರ್ವಜನಿಕವಾಗಿ ಬಾಯಿ ಮುಚ್ಚಿಕೊಳ್ಳುತ್ತಾಳೆ. ಅವರ ಮಾತು ಹೆಂಗಸು ಹೆಂಗಸರ ನಡುವೆಗಷ್ಟೇ ಸೀಮಿತವಾಗಿಬಿಡುತ್ತವೆ. ಹೆಚ್ಚಿನ ಸಂದರ್ಭಗಳಲ್ಲಿ ಹೆಣ್ಣಿನ

ಮಾತಿನ ಮುಖ್ಯಲಕ್ಷಣ ಮೌನವಾಗಿಯೇ ನಿಲ್ಲುತ್ತದೆ. ಅವಳ ಬಾಯಿಮುಚ್ಚಿಸಿ ಮೌನಗೊಳಿಸಲಾಗಿದೆ. ಹೆಣ್ಣಿಗೆ ಮೌನವೇ ಭೂಷಣ. ಹೆಣ್ಣು ಎಂದರೆ ಮೃದುವಾಗಿ ಮಾತನಾಡಬೇಕು. ಮೇಲು ಧ್ವನಿಯಲ್ಲಿ ಮಾತನಾಡಬೇಕು. ಗಂಡಸಿನದೆಂದು ಪಟ್ಟಿಮಾಡಲಾದ ಭಾಷಾ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳುವುದು ಹೆಂಗಸಿಗೆ ಸಾಧ್ಯವಿಲ್ಲದ ಹಂತಕ್ಕೆ ತಂದು ನಿಲ್ಲಿಸಲಾಗಿದೆ. ಮಹಿಳೆಗೆ ಗಂಡಸಿನಂತೆ ವ್ಯವಹರಿಸಲು ಆಗುವುದಿಲ್ಲ ಎಂದಲ್ಲ. ಈ ವಲಯದಲ್ಲಿ ಅವಳಿಗೆ ಪ್ರವೇಶವನ್ನು ನಿಷೇಧಿಸಲಾಗಿದೆಯಷ್ಟೆ. ಮಾತನಾಡಬಾರದೆಂಬಂತೆ ಮತ್ತು ಮಾತನಾಡಲಾಗದಂತೆ ಅವಳ ಬಾಯಿಯನ್ನು ಮುಚ್ಚಿಸಲಾಗಿದೆ. ಹೆಣ್ಣಿನ ಮಾತು ಮತ್ತು ಅವಳ ಮೌನಗಳನ್ನು ವಿಶೇಷ ಸಾಮಾಜಿಕ ಸಂದರ್ಭಗಳಲ್ಲಿಟ್ಟೇ ವಿವರಿಸಿಕೊಳ್ಳಬೇಕಾಗುತ್ತದೆ. ಮೌನವಾಗಿ ಉಳಿಯುವ ಆಯ್ಕೆ ಅವಳದಲ್ಲ–ಹೆಣ್ಣಿನ ಮೌನ ಎಂದರೆ ಅದು ಅವಳು ಪಡೆದುಕೊಂಡಿರುವ ಸಾಮಾಜಿಕ ಭಾಷಾ ಚಹರೆಯೇ ಆಗಿದೆ. ಈ ಕಾರ್ಯ ಮನೆಯಿಂದಲೇ ಕುಟುಂಬದ ಒಳಗಡೆಯಿಂದಲೆ ಪ್ರಾರಂಭವಾಗುತ್ತದೆ. ಇದಕ್ಕೆ ಸಂಬಂದಿಸಿದ ಉದಾಹರಣೆಗಳನ್ನು ಈಗಾಗಲೆ ನೋಡಿದ್ದೇವೆ.

ಅನೌಪಚಾರಿಕ ವಲಯದಲ್ಲಿ ಮಹಿಳೆಯ ಭಾಷಾ ಬಳಕೆಗೆ ಎಷ್ಟು ಸ್ವತಂತ್ರ್ಯವಿದೆ ಎಂದು ಗಮನಿಸಿದರೆ ಅನೌಪಚಾರಿಕ ವಲಯದ ಪರಿಸ್ಥಿತಿಯಂತು ಅಷ್ಟೆ ಶೋಚನೀಯ ಸ್ಥಿತಿ ಕಂಡುಬರುತ್ತದೆ. ಒಂದು ಕಡೆಯಿಂದ ಮಹಿಳೆಯ ಮಾತನ್ನು ಪರಿಗಣನೆಗೆ ತೆಗೆದುಕೊಳ್ಳುವುದಿಲ್ಲ. ಮಹಿಳೆ ಮಾತನಾಡಿದರೆ ಹಾಸ್ಯಸ್ಪದಕ್ಕೆ ಒಳಗಾಗುತ್ತಾಳೆ. ಈ ಕಾರಣಕ್ಕಾಗಿ ಅನೌಪಚಾರಿಕ ವಲಯಗಳಲ್ಲಿ ಮಹಿಳೆ ಒಬ್ಬಳಿದ್ದು ಎಲ್ಲ ಗಂಡಸರಿದ್ದರೆ ಮಹಿಳೆಯರು ಅಂತಹ ಸಂದರ್ಭದಲ್ಲಿ ಮಾತನಾಡುವುದಿಲ್ಲ. ಮಹಿಳೆ ಆ ಗಂಡಸರೊಂದಿಗೆ ವೇದಿಕೆ ಹಂಚಿಕೊಂಡಾಗ ಸಹ ಮಹಿಳೆ ಮಾತಾಡದೆ ಮೌನವಾಗಿರುತ್ತಾಳೆ. ಈ ತೌಲನಿಕ ಚಿತ್ರಣ ಕಣ್ಣೆದುರಿಗೆ ನಡೆಯುವುದನ್ನು ಗಮನಿಸುವುದಕ್ಕೆ ಸಾಧ್ಯ. ಮಹಿಳೆ ಮೈತುಂಬ ಸೆರಗನ್ನು ಹೊದ್ದುಕೊಂಡು ಮತ್ತೆ ಮತ್ತೆ ಬಟ್ಟೆಯನ್ನು ಸರಿಮಾಡಿಕೊಳ್ಳುತ್ತಿರುತ್ತಾಳೆ. ಸಂಕೋಚ ಮನೋಭಾವದಿಂದ ಎದುರಿಗೆ ಇದ್ದ ಸಭಿಕರನ್ನು ಎದುರಿಸಲಾಗದೆ, ಜೊತೆಯಲ್ಲಿ ಇರುವವರೊಟ್ಟಿಗೂ ಪರಿಪೂರ್ಣ ಭಾಗಿಯಾಗದೆ ಇರುವ ಪರಿಸ್ಥಿತಿ ಕಂಡುಬರುತ್ತದೆ. ಈ ವಿಚಾರಗಳು ಕಾಲ್ಪನಿಕವಾದುವುಗಳಲ್ಲ. ಗ್ರಾಮಪಂಚಾಯಿತಿ ಮಹಿಳೆಯರು ಮಹಿಳಾ ಮೀಸಲಾತಿ ಇರೋ ಕಾರಣಕ್ಕೆ ನಾಮಮಾತ್ರಕ್ಕೆ ಅವರು ಆಯ್ಕೆಯಾಗಿ ಆಡಳಿತವನ್ನು ಪುರುಷ ನಡೆಸುತ್ತಿರುವ ಪರಿಸ್ಥಿತಿಯಲ್ಲಿ ಮಹಿಳೆ ಸಭೆಗಳಿಗೆ ಭಾಗವಹಿಸಲೇಬೇಕಾದಾಗ ಕಂಡುಬರುವ ಸ್ಥಿತಿಯಿದಾಗಿದೆ.

ಕ್ಷೇತ್ರ ಕಾರ್ಯ ಸಂದರ್ಭದಲ್ಲಿ ಗ್ರಾಮಪಂಚಾಯಿತಿ ಅಧ್ಯಕ್ಷರಾಗಿರುವ ಏಕಾಕ್ಷಮ್ಮನವರನ್ನು ಸಂದರ್ಶನ ಮಾಡಿ ಅವರ ಭಾಷಾ ಸ್ವಾತಂತ್ರ್ಯ ಕುರಿತು ಪ್ರಶ್ನಿಸಿದಾಗ ಅವರ ಉತ್ತರಗಳು ಈ ಪರಿಸ್ಥಿತಿಯನ್ನು ಪ್ರತಿನಿಧಿಸುತ್ತವೆ.

ಪ್ರಶ್ನೆ : ನೀವು ಸಭೆ ಸಮಾರಂಭಗಳಲ್ಲಿ ಮಾತನಾಡುತ್ತೀರಾ?

ಉತ್ತರ: ಇಲ್ಲಮ್ಮ ಮಾತಾಡಕ್ಕಿಲ್ಲ,

ಪ್ರಶ್ನೆ : ಯಾಕೆ ನಿಮಗೆ ಮಾತನಾಡಲು ಅವಕಾಶವಿಲ್ಲವೆ?

ಉತ್ತರ: ಇಲ್ಲಮ್ಮ ನಮ್ಮ ಹುಡುಗರ್ ಬಂದಿರ್‌ರಾರಲ್ಲ ಅವರೇ ಮಾತಾಡ್ತಾರೆ."

ಪ್ರಶ್ನೆ : ಯಾಕೆ ನೀವು ಮಾತಾಡೊದಿಲ್ಲ?

ಉತ್ತರ: ಎಲ್ಲರೂ ನಕ್ಕ ಬಿಡ್ತಾರೆ ಅಂತ ಮಾತಾಡಕಿಲ್ಲ.

ಈ ರೀತಿ ಮಹಿಳೆಯರು ಮಾತಾಡಲು ಬಂದರೂ ಮೂಕರಂತೆ. ಸಮಾಜದಲ್ಲಿ ಇಂತಹ ಸ್ಥಿತಿ ನಿರ್ಮಿಸಲ್ಪಟ್ಟಿದೆ. ಭಾಷೆ ಇರುವುದು ಭಾವನೆಗಳನ್ನು ವ್ಯಕ್ತಪಡಿಸಲು. ಭಾಷೆ ಪ್ರತಿಯೊಬ್ಬರಿಗೂ ಐಚ್ಛಿಕವಾಗಿರುವಂತಹದು ಎಂಬ ಭಾಷೆಯ ಕುರಿತ ವ್ಯಾಖ್ಯಾನ ಇಲ್ಲಿ ಬಿದ್ದು ಹೋಗುತ್ತದೆ. ಈ ವ್ಯಾಖ್ಯಾನ ಕೇವಲ ಪುರುಷನಿಗೆ ಸೀಮಿತ.

ನಮ್ಮ ಸಂವಿಧಾನದಲ್ಲಿ ಭಾರತದಲ್ಲಿರುವ ಪ್ರತಿಯೊಬ್ಬರಿಗೂ "ಅನುಚ್ಛೇದ ೧೯(೧)(ಎ)– ವಾಕ್ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯ"ವನ್ನು ಕೊಟ್ಟಿದೆ. ಜೊತೆಗೆ ಭಾರತದ ನಾಗರಿಕರು ತಮ್ಮ ದೃಷ್ಟಿಕೋನ ಮತ್ತು ಅಭಿಪ್ರಾಯಗಳನ್ನು ಮಾತು, ಬರವಣಿಗೆ, ಮುದ್ರಣ ಅಥವಾ ಇನ್ನಾವುದೇ ಮಾಧ್ಯಮಗಳ ಮೂಲಕ ಅಭಿವ್ಯಕ್ತಿಸಲು ಸ್ವಾತಂತ್ರ್ಯ ನೀಡಲಾಗಿದೆ.

ಮಹಿಳೆಯರ ವಿಷಯಕ್ಕೆ ಬಂದರೆ ಸಂವಿಧಾನ ನೀಡಿರುವ ಈ ಅವಕಾಶವನ್ನು ಸಮಾಜದ ನಿರ್ಬಂಧಿತ ಅಡೆತಡೆಗಳಿಗೆ ಅನುಗುಣವಾಗಿ ಮಹಿಳೆಯು ಭಾಷೆಯನ್ನು ಬಳಸಬೇಕು. ಮಹಿಳೆ ತಾನು ಮಾತನಾಡುವುದರ ಮೇಲೆ ಸಮಾಜ ನಿರ್ಬಂದ ಹಾಕಿಕೊಟ್ಟಿದೆ. ಆದರೆ ಆಕೆ ಮಾತನಾಡುವುದನ್ನು ಬೇರೆಯವರು ಕೇಳಿಸಿಕೊಳ್ಳುವುದಿಲ್ಲ. ಅವಳು ಬೇರೆಯವರ ಮಾತುಗಳನ್ನು ಕೇಳಲೇಬೇಕು. ಭಾಷೆ ಹೊರಗಿನಿಂದ ಆಕೆಯೊಳಗೆ ಪ್ರವೇಶಿಸಿರುತ್ತದೆ. ಆದರೆ ಹೀಗೆ ಕೇಳಿಸಿಕೊಂಡ ಮಾತಿಗೆ ತನ್ನ ಮಾತಿನ ಮುಖಾಂತರ ಪ್ರತಿಕ್ರಿಯೆ ನೀಡುವುದಿಲ್ಲ ಅಷ್ಟೆ. ಅದಕ್ಕೆ ಸಮಾಜದಲ್ಲಿ ಅವಕಾಶವಿಲ್ಲ. ಹೀಗಾಗಿ ಮಹಿಳೆಯರು ತನ್ನ ಮಾತುಗಳನ್ನು ಹೊರಹಾಕಲು ಹೊಸ ತಂತ್ರಗಾರಿಕೆ ನಿರ್ಮಾಣ ಮಾಡಿಕೊಳ್ಳುತ್ತಾಳೆ.

ಇದರಿಂದಾಗಿ "ಹೆಂಗಸರು ದನ, ಕರು, ನಾಯಿ, ಬೆಕ್ಕು, ನವಜಾತ ಶಿಶು, ಬಾಗಿಲು, ಕಿಟಕಿ ಅಷ್ಟೇಕೆ ಕಲ್ಲಿನ ಜೊತೆಗೂ ಮಾತಾಡುತ್ತಾರೆ. ಗಂಡಸರು ನೆವರ್ ಅವರು ಮನುಷ್ಯರ ಜೊತೆಗೆ ಸರಿಯಾಗಿ ಮಾತಾಡಿದರೇ ದೊಡ್ಡ ಸಾಧನೆ. ಇಲ್ಲೊಂದು ಪ್ರಸಂಗ ನೆನಪಾಗ್ತಿದೆ. ನಾನೊಮ್ಮೆ ಯಾವುದೋ ಗಣತಿ ಕಾರ್ಯಕ್ಕೆಂದು ನಿಯೋಜಿತವಾಗಿದ್ದೆ. ನನಗೆ ಒಬ್ಬ ಅಂಗನವಾಡಿ ಮಹಿಳೆಯನ್ನು ಸಹಾಯಕಳಾಗಿ ನೇಮಿಸಲಾಗಿತ್ತು. ಒಂದು ಕೃಷಿ ಕುಟುಂಬದ ಮನೆಯೊಳಗೆ ಹೋಗಿ ಮಾಹಿತಿ ಬರೆದುಕೊಳ್ಳುತ್ತಿದ್ದಾಗ, ಗೋದಲಿಯಲ್ಲಿದ್ದ ಹಸುವೊಂದು ಹಿಂದಿನಿಂದ ಆಕೆಯ ಸೆರಗಿಗೆ ಬಾಯಿ ಹಾಕಿ ನಮುಲ ತೊಡಗಿತು. ಅದರ ಬಾಯಿಂದ ತನ್ನ ಸೀರೆ ಸೆರಗನ್ನು ಕಿತ್ತುಕೊಳ್ಳುತ್ತ ಆಕೆ ಆಡಿದ ಮಾತು ನನಗಿನ್ನು ನೆನಪಿದೆ. ಅಯ್ಯಯ ನನ್ನ ಕರ್ಮ ಏನಾವಾ ಎವ್ವಾ ನಿನಗೆ ನನ್ನ ಸೀರಿನೂ ಕಡಿಮಿ ಬಿತ್ತಾ? ನೀನೇನು ಬರಗಾಲದಾಗ ಹುಟ್ಟಿದಾಕಿ ಮಾಡಿದಂಗ ಮಾಡಾಕತ್ತಿಯಲ್ಲ. ನೀನು ಸೀರಿ ತಿಂದು ಹಾಕಿದ್ರ ಹೊಸದು ಯಾರು ತಂದು ಕೊಡ್ತಾರವ ನಂಗೆ? ರಾಖಿ ಹುಣ್ಣಿಮತನ ನಡಿಬೇಕಿದು ಬುಡು: ಆ ಹಸು ಉತ್ತರ ಅಂತೂ ಕೊಡೋದಿಲ್ಲ, ಹೋಗ್ಲಿ ಈಕೆ ಹೇಳಿದ ಇಷ್ಟುದ್ದದ ರಾಮಾಯಣದಲ್ಲಿ ಒಂದು ಪದವಾದ್ರೂ ಅದಕ್ಕೆ ಅರ್ಥವಾಗುತ್ತಾ ಅಂದ್ರೆ ಅದೂ ಇಲ್ಲ. ಅದು ಆಕೆಗೆ ಗೊತ್ತಿಲ್ಲದ್ದೇನಲ್ಲ. ಎನ್ಮಾಡ್ತಿರಿ ಮನುಷ್ಯ ಫ್ಯಾಕ್ಚರಿಂಗ್ ಡಿಫೆಕ್ಟ್! ಆ ಆಕಳಲಿನ ಲಿಂಗವನ್ನು ಗುರುತಿಸಿ ಸಂಭೋಧಿಸಿ ಸೆರಗಿಗೆ ಬಾಯಿ ಹಾಕಿದ್ದಕ್ಕೆ ಅದು ಬರಗಾಲದಲ್ಲಿ ಹುಟ್ಟಿದೆಯೇ ಅಂತ ಅದರ ಜನ್ಮರಹಸ್ಯವನ್ನು ಬೆದಕಿದ ಆ ಮಾತಾಯಿ ಕೊನೆಗೆ ತನ್ನ ಆ ಸೀರೆ ಮುಂದಿನ ರಾಖಿ ಹುಣ್ಣಿವೆ ತನಕ ಬರಬೇಕು ಎಂದು ಹೇಳುವ ಮೂಲಕ ಸೀರೆ ತಂದು ಕೊಡಲಾಗದ ತನ್ನ ಗಂಡನ ಮೇಲಿನ ಸಿಟ್ಟನ್ನೂ ಪ್ರತಿವರ್ಷಕ್ಕೊಂದು ತಪ್ಪದೆ ತಂದುಕೊಡುವ ತನ್ನ ಅಣ್ಣನ ಮಮತೆಯನ್ನು ಬಯಲಿಗಿಟ್ಟು ಕೈತೊಳೆದುಕೊಂಡಳು. ಅಷ್ಟು ಮಾತುಗಳ ಅಗತ್ಯ ಅಲ್ಲಿತ್ತೆ?ಎಂದರೆ ಹೆಂಗಸರಿಗೆ ಅದು ಅಗತ್ಯದ ಪ್ರಶ್ನೆಯಷ್ಟೆ ಅಲ್ಲ. ಬದಲಿಗೆ ಅನಿವಾರ್ಯ ಪ್ರಶ್ನೆ ಎಂಬ ಸತ್ಯದ ದರ್ಶನವಾಗುತ್ತದೆ. ಹೀಗೆಲ್ಲಾ ಅಲ್ಲ ಬದಲಿಗೆ ಅನಿವಾರ್ಯದ ಪ್ರಶ್ನೆ ಎಂಬ ಸತ್ಯದ ದರ್ಶನವಾಗುತ್ತದೆ. ಹೀಗೆಲ್ಲಿ ಮಾತಾಡದಿದ್ದರೆ ಅವರ ಏಳುಸಾವಿರದ ಟಾರ್ಗೆಟನ್ನು ತಲುಪುವುದಾದರೂ ಹೇಗೆ? ಅಕಸ್ಮತ್ ನನ್ನ ಶರ್ಟಿಗೇನಾದರೂ ಅದು ಬಾಯಿ ಹಾಕಿದ್ದರೆ ನಾನೇನು ಮಾಡುತ್ತಿದ್ದೆ. ಅಂತ ಆಮೇಲೆ ಯೊಚಿಸಿದೆ. ಅದರ ಪಕ್ಕಕ್ಕೆ ಸರಿಸುತ್ತಿದೆ. ಅಬ್ಬಬ್ಬಾ ಎಂದರೆ ಹಾಗೆ ಮಾಡತ್ತಲೇ ಏಯಾ ಅಂತಲೋ ಹೋಯ್ ಅಂತಲೋ ಒಂದು ಪದ ಹೂಂಕರಿಸುತ್ತಿದ್ದೆ ಎನಿಸಿತು."[೧೦]

ಹೀಗೆ ಮಹಿಳೆ ಮಾತು ಅಪಮೌಲ್ಯಗೊಂಡು ಅದು ಮತ್ತೊಂದು ಮಾರ್ಗವನ್ನು ಅಥವಾ ಮತ್ತೊಂದು ರೂಪವನ್ನು ಪಡೆದಿರುವುದು ಸ್ಪಷ್ಟವಾಗಿ ಗೋಚರವಾಗಿದೆ. "ಇದನ್ನೇ ಸ್ತ್ರೀವಾದಿಗಳು ಹೌಸ್‌ವೈಫ್ ಸಿಂಡ್ರೋಮ್ ಎಂದು ಗುರುತಿಸಿದ್ದಾರೆ."[೧೧]

ಸಮಾಜವು ಅಡಿಗೆ ಹಾಡು ನರ್ತನ ಗೃಹಲಂಕಾರದಂಥವುಗಳು ಮಹಿಳೆಯ ಕಾರ್ಯಕ್ಷೇತ್ರಗಳೆಂದು ನಿರ್ದೇಶಿಸಿದೆ. ಭಾಷಿಕ ರಚನೆಯಲ್ಲೇ ಇರುವ ನಿಯಮಗಳು ಹಾಗೂ ರೂಢಿಗಳು ಹೆಣ್ಣು ಹಾಗೂ ಗಂಡಿನ ಸಂದರ್ಭಗಳಲ್ಲಿ ತೋರುವ ವಿಕಲ್ಪಗಳ ಬಗೆಗಳನ್ನು ಗಮನಿಸಬಹುದು.

•ಭಾಷೆಯು ಪುರುಷನಿಂದ ರಚಿತವಾಗಿದೆ. ಭಾಷೆಯ ಪ್ರತಿಯೊಂದು ವಾಕ್ಯ ರಚನೆ ಪುರುಷ ಹಿತಾಸಕ್ತಿ ಕಾಪಾಡುತ್ತಿರುತ್ತವೆ. ಮಹಿಳೆ ಭಾಷೆಯೊಳಗಡೆ ಇಲ್ಲವಾಗಿದ್ದಾಳೆ. ಇದುವರೆಗೂ ಕಟ್ಟಿರುವ ಚರಿತ್ರೆಯಲ್ಲಿ ಮಹಿಳೆ ಇಲ್ಲ. ಅಥವಾ ಸಂಪ್ರದಾಯಿಕವಾಗಿ ಬರೆಯುವ ಯಾವೊಂದು ಬರವಣಿಗೆಯಲ್ಲಿಯೂ ಮಹಿಳೆ ಕಂಡುಬರುವುದಿಲ್ಲ. ನಮ್ಮ ಪಠ್ಯ ಪುಸ್ತಕಗಳ ರಚನೆಯ ಭಾಷೆಯೊಳಗೆ ಮಹಿಳೆ ಇಲ್ಲ. ಯಾವುದೇ ಬರಹಗಳನ್ನು ತೆಗೆದು ನೋಡಿದರೂ 'ಅವನು' ಇರುತ್ತಾನೆ. ಅವಳು ಇರುವುದಿಲ್ಲ. ಚರಿತ್ರೆ ಬರವಣಿಗೆಗಳು ಇರಬಹುದು. ವಿಜ್ಞಾನದ ಬರವಣಿಗೆಗಳು ಇರಬಹುದು. ಸಾಮಾಜಿಕ ಬರವಣಿಗೆಗಳು ಇರಬಹುದು. ಯಾವುದೇ ಕ್ಷೇತ್ರ ತೆಗೆದು ನೋಡಿದರೂ ಮಹಿಳೆ ಇಲ್ಲ. ಕೇವಲ ಪುರುಷನನ್ನು ಉದ್ದೇಶಿಸಿಯೇ ರಚನೆಯಾಗಿವೆ. ಪುರುಷನಿಗೆ ಅನ್ವಯವಾಗುವಂತೆ ರಚನೆಯಾಗಿದೆ. ವಿಶೇಷ ಅಗತ್ಯವಿದ್ದಲ್ಲಿ ಮಾತ್ರ ವಿವರಣೆಯ ನಂತರದ ವಿಸ್ತರಣೆಯಾಗಿ ಸ್ತ್ರೀಯ ಪ್ರಸ್ತಾಪ ಬರುತ್ತದೆ.

ಉದಾ: ಮಾನವ ಪ್ರಗತಿ ಪಥದಲ್ಲಿದ್ದಾನೆ

ಮಾನವನು ಇಡೀ ಪ್ರಪಂಚವನ್ನು ಆಳುತ್ತಿದ್ದಾನೆ

ಮಾನವನು ಸಮಾಜದ ನಿರ್ಮಾಪಕನು

ಮಾನವ ಹಕ್ಕಿಯಂತೆ ಹಾರಬಲ್ಲ

ಈಜುಗಾರನ ಸಾಮರ್ಥ್ಯ

ಸಂಗೀತಗಾರನ ಲಹರಿ

ಮಗು ಬೆಳೆಯುತ್ತಾನೆ

ವಿಜ್ಞಾನಿ ಸಂಶೋಧಿಸುತ್ತಾನೆ.

ಇಲ್ಲಿ ಕರ್ತೃಪದಗಳು ಪುರುಷ ಸೂಚಿಗಳೇ ಎಂಬುದಕ್ಕೆ ಆ ಸಂದರ್ಭಗಳು ಕಾರಣಗಳನ್ನು ಒದಗಿಸಿಲ್ಲಾ. ಆದರೆ 'ಪುರುಷನು ಮಾತ್ರವೇ ಗಣನೆಗೆ ಬರುವವನು' ಈ ವಾಕ್ಯ ರಚನೆಗಳು ಕೇವಲ ಪುರುಷನನ್ನು ಒಳಗೊಂಡಿವೆ.

'ಆ ಮಹತ್ವದ ಸಭೆಯಲ್ಲಿ ಮಹಿಳೆಯರು ಉಪಸ್ಥಿತರಿದ್ದರು'

ಸತ್ತವರ ಪೈಕಿ ಐವರು ಮಹಿಳೆಯರೂ ಸೇರಿದ್ದಾರೆ.

ಎಂಬಂತಹ ವಾಕ್ಯಗಳು ವಿವರಣೆಯ ವಿಸ್ತರಣೆಯಾಗಿ ಮಹಿಳೆಯನ್ನು ಒಳಗೊಳ್ಳುತ್ತದೆ. ಅಂದರೆ ಈಗಿರುವ ಭಾಷೆ ಒಳಗಡೆ ಮಹಿಳೆ ಇಲ್ಲ ಎಂದಾಯಿತಲ್ಲ-ಘಟನೆ ನಡೆದಿದೆ ಎಂದರೆ ಅದು ಕೇವಲ ಪುರುಷನ ಸುತ್ತ ಮಾತ್ರ ನಡೆದಿದೆ ಎಂದು ಭಾಷೆ ತೋರುತ್ತಿದೆ. ಪ್ರತ್ಯೇಕವಾಗಿ ಅಲ್ಲಿ ಮಹಿಳೆಯು ಸೇರಿರುವಳು ಎಂಬುದನ್ನು ವಿವರಿಸುವ ಮಾದರಿಗಳು ಇವು. ಆದರೆ ಭಾಷೆ ಕೇವಲ ಪುರುಷನನ್ನು ಮಾತ್ರ ಒಳಗೊಂಡಿದೆ. ಹಾಗಾಗಿ ಮಹಿಳೆಯನ್ನು ಈಗ ಹೆಚ್ಚುವರಿಯಾಗಿ ಸೇರಿಸಿದ್ದಾರೆ. ಮಹಿಳೆಯನ್ನು ಒಳಗೊಂಡಂತೆ ಭಾಷೆ ರಚನೆ ಆಗಿಲ್ಲ ಎಂದಾಯಿತಲ್ಲ. ಈಗ ಇರುವ ಭಾಷೆಯಲ್ಲಿ ಮಹಿಳೆಯನ್ನು ಪರಿಗಣಿಸಿಲ್ಲ. ಈ ಭಾಷೆ ಕೇವಲ ಪುರುಷನಿಂದ ಪುರುಷರಿಗಾಗಿ ರಚನೆಯಾಗಿದೆ ಎಂಬುದು ಈ ಬಗೆಯ ನಿದರ್ಶನಗಳು ಸ್ಪಷ್ಟಪಡಿಸುತ್ತವೆ.

ಸಾಮಾಜಿಕ ಅಧಿಕಾರ ಸಂಬಂಧಗಳಲ್ಲಿ ಹೆಣ್ಣಿನ ಭಾಷಿಕ ಚಟುವಟಿಕೆಗಳು ಬಲಹೀನವಾಗಿ ಉಳಿದುಬಿಡುವ ಮಾದರಿಗಳೇ ಹೆಚ್ಚಾಗಿ ಕಾಣುತ್ತವೆಂಬುದು ಸಹಜ. "ಅಂದರೆ ಮಾತನಾಡುತ್ತಲೇ ಇದ್ದರು ಮೂಕಳಾಗಿರಬೇಕು ಎಂಬ ವಿರೋಧಾಬಾಸದಲ್ಲಿ ಹೆಣ್ಣಿನ ಮೌನವನ್ನು ಬಲಹೀನತೆ ಎನ್ನಬೇಕೆ? ಒತ್ತರಿಸಿ ಇಟ್ಟ ಕ್ಷಣಕ್ಕೆ ಅವಳು ಒತ್ತರಿಯೇ ಹೋಗುವಳೇ ಎಂದರೆ ಹಾಗೇನಿಲ್ಲ. ಅವಳ ಚೈತನ್ಯವು ಮುಚ್ಚಿ ಹೋದಂತಾದ ಅವಕಾಶಗಳ ಒಳಗಿನಿಂದಲೇ ಹೊಸ ಹಾದಿಗಳನ್ನು ಶೋಧಿಸುತ್ತಾ ಗಂಡಸಿಗೆ ಅಪರಿಚಿತವೇ ಆದ ಹೊಸ ಬಗೆಯ ಭಾಷಿಕ ಕೌಶಲ್ಯಗಳನ್ನು ಕಂಡುಕೊಳ್ಳುತ್ತದೆ. ಮೌನವಾಗಿಯೇ ಉಳಿದು ಸಂಭಾಷಣೆಯಲ್ಲಿ ಆ ತುದಿಯನ್ನು ಗಮನವಿಟ್ಟು ಕೇಳುವುದು ಮಾತುಕತೆಯಲ್ಲಿ ಪೂರ ಹೊಂದಾಣಿಕೆಯನ್ನು ತೋರುತ್ತಾ ನಮ್ರವಾಗಿಯೇ ಉಳಿದು ಸರಿಯಾದ ಹೊತ್ತಿನಲ್ಲಿ ಬೆಂಬಲ ನೀಡುವ ಮಾತಿನ ವರಸೆ ಬದಸಲಿಸುವ ಅಥವಾ ನುಡಿಜಗಿತ ಮಾಡುವ ಮೂಲಕ ತನ್ನ ಅಭಿವ್ಯಕ್ತಿಗೆ ಅವಕಾಶ ಕಲ್ಪಿಸಿಕೊಳ್ಳುವ ಕೌಶಲ್ಯ ಹೆಣ್ಣಿಗೆ ವಿಶಿಷ್ಟವಾದ ಒಂದು ವಿಧಾನ ಗಂಡಸಿಗೆ ಅರ್ಥವೇ ಆಗದೆಂಬಂತೆ ಉಳಿಯುವ ಕೌಶಲ್ಯ"[೨] ಮಹಿಳೆ ಮೂಕವಾಗಿಸುವ ಸಮಾಜಿಕ ವ್ಯವಸ್ಥೆಯಲ್ಲಿ ಮಹಿಳೆ 'ಕೌಶಲ್ಯತೆಯ ಕುರಿತು ಒಂದು ಬಗೆಯ ಸಮಾಧಾನ ಪಡೆದುಕೊಳ್ಳುವ ಉತ್ತರವಾಗಿ ತಿಳಿಯುತ್ತೇವೆ ಹೊರತು ಹಾಗೆ ಸಮಾಜದಲ್ಲಿ ಅವಕಾಶವೇ ಇಲ್ಲ.

## ೩.೨. ಸಾಂಸ್ಕೃತಿಕ ಪಾರಂಪರಿಕ ನಿರ್ದೇಶನ–ನೀತಿ ನಿರೂಪಣೆ

ಇದುವರೆಗೂ ಸಮಾಜದಲ್ಲಿ ಭಾಷೆ ಬಳಕೆಯಾಗುತ್ತಿರುವುದನ್ನು ಗಮನಿಸಲಾಗಿದೆ. ಇನ್ನು ಸಾಂಸ್ಕೃತಿಕ ಪಾರಂಪರಿಕ ರೂಢಿಯಿಂದ ಬಂದ ಕೆಲವು ನಿರ್ದೇಶನಗಳು ನೋಡಬೇಕು. ಇವು ಮಹಿಳೆಯರ ಭಾಷೆಯನ್ನು ಹೇಗೆ ನೋಡುತ್ತೇವೆ? ಮಹಿಳೆಗೆ ಮಾತನಾಡಲು ಅವಕಾಶ ಕೊಟ್ಟಿವೆಯೇ ಅಥವಾ ಇಲ್ಲವೇ? ಎಂಬ ಸೂಕ್ಷ್ಮಗಳು ಅರ್ಥವಾಗುತ್ತವೆ.

ಸಂಸ್ಕೃತಿ ಒಂದು ಸಮುದಾಯ ತನ್ನ ಬದುಕನ್ನು ರೂಪಿಸಿಕೊಳ್ಳಲು ರಚಿಸಿಕೊಂಡಿರುವ ಬದುಕಿನ ವಿಧಿ ವಿಧಾನಗಳನ್ನು ಆಚರಿಸುತ್ತಾ ಬರುತ್ತಿರುವ ಹಲವಾರು ವಿಧಿವಿಧಾನಗಳನ್ನು ಆಹಾರ, ಪೂಜಾವಿಧಿಗಳು, ಕೌಟುಂಬಿಕ, ಸಾಮಾಜಿಕ ಸಂಬಂಧಗಳು, ನಂಬಿಕೆ, ಆಚಾರ–ವಿಚಾರಗಳು ಒಟ್ಟಾರೆ ಜೀವನ ಮಾರ್ಗವನ್ನೇ ಸಂಸ್ಕೃತಿ ಎನ್ನಬಹುದು. ಜನರ ಸಂಸ್ಕೃತಿ ವಿವಿಧ ಸ್ವರೂಪಗಳಲ್ಲಿ ಕಂಡುಬರುತ್ತದೆ. ಸುಖ, ಸಂತೋಷ, ದುಃಖ ಹಲವು ಮೌಲ್ಯ ಇವುಗಳನ್ನು ಧ್ವನಿಸುತ್ತಿರುತ್ತದೆ. "ಮಹಿಳೆಯನ್ನು ಪ್ರಕೃತಿಯನ್ನಾಗಿ ಪುರುಷನ್ನು ಸಂಸ್ಕೃತಿಯನ್ನಾಗಿ ಗುರುತಿಸಲಾಗುತ್ತದೆ."[೩]

ಮಹಿಳೆಯನ್ನು ಜೈವಿಕ ನಿಯಂತ್ರಿತ ಪ್ರಕೃತಿಯ ನೆಲೆಯಲ್ಲಿ ಪರಿಭಾವಿಸಿಕೊಳ್ಳಲಾಗುತ್ತಿದೆ. ಆದ್ದರಿಂದ ಅವಳು ಪರಿಪಾಲನೆಗೆ, ಸಂತಾನೋತ್ಪತ್ತಿಗೆ ಜವಾಬ್ದಾರಳಾಗಿದ್ದಾಳೆ. ಸಂಗೋಪನೆ, ಸಂತಾನೋತ್ಪಾತ್ತಿಗಳು ಮಹಿಳೆಗೆ ನಿರ್ಧಿಷ್ಟಪಡಿಸಿರುವ ಸಂಗತಿಗಳಾಗಿವೆ. ಇಂದು ಅನುಭವಿಸುತ್ತಿರುವ ಎಲ್ಲಾ ಬಗೆಯ ಅಸಮಾನತೆ ತಾರತಮ್ಯ ಶೋಷಣೆಗಳ ಕಾರಣವನ್ನು ಮಹಿಳೆಯರು ಗುರುತಿಸಿಕೊಳ್ಳುತ್ತಿದ್ದಾರೆ. ಅವಳನ್ನು ಜೈವಿಕ ನೆಲೆಯಲ್ಲಿ ಪರಿಭಾವಿಸಿಕೊಂಡಿರುವ ಕ್ರಮ ಮುಂಚೆಯಿಂದಲೂ ನಡೆದಿದೆ. ಮಹಿಳೆಯನ್ನು ಸಾಮಾಜಿಕ ಘಟಕವಾಗಿ ಒಪ್ಪಿಕೊಳ್ಳದಿರುವ ಸಂಗತಿಯಿಂದಾಗಿಯೇ ತಿಳಿಯಬಹುದು. ಮಹಿಳೆಯನ್ನು ಸಮಾಜ ಲಿಂಗ ಅಸಮಾನತೆಯಿಂದ ಕಾಣುತ್ತಿದೆ ಎಂದು ಗುರುತಿಸಲು ಮಹಿಳೆ ಮಾಡುತ್ತಿರುವ ಸಂಗೋಪನೆಯ ಸಂಪಾದನೆಯಿಂದಲೂ ಲಿಂಗ ಅಸಮಾನತೆಯ ಮೂಲವನ್ನು ಗುರುತಿಸಬಹುದಾಗಿದೆ. ಮಹಿಳೆಯನ್ನು ಜೈವಿಕ ನಿಯಿತಿಯಲ್ಲಿ ನಿರ್ಬಂಧಿಸಿದ್ದರಿಂದಾಗಿ ಅವಳನ್ನು ಭಾವನಿಷ್ಟ ವ್ಯಕ್ತಿಯನ್ನಾಗಿ ಗುರುತಿಸುವುದು ರೂಢಿಗೆ ಬಂದಿತ್ತು. ಬುದ್ಧಿ–ಪಾಂಡಿತ್ಯ ಜ್ಞಾನವೆಂಬುದು ಪುರುಷರ ಗುಣಗಳಾದವು. ಬುದ್ಧಿಯನ್ನು ಭಾವಕ್ಕೆ ಪ್ರತಿಯಾಗಿ ನಿಲ್ಲಿಸಲಾಯಿತು. ಮಹಿಳೆಯರು ಭಾವನಿಷ್ಠರಾದರೆ ಪುರಷರು ಬುದ್ದೀನಿಷ್ಠರಾದರು. ಈ ಎಲ್ಲಾ ಕಾರಣಗಳಿಂದಾಗಿ ಪುರುಷರು ಶ್ರೇಷ್ಠರು ಮತು ಮಹಿಳೆಯರು ಕನಿಷ್ಠರು ಎಂಬ ಏಣಿಶ್ರೇಣಿಗಳು ಸಮಾಜದಲ್ಲಿ ಉಂಟಾದವು ಮಹಿಳೆಯರಿಗೆ ಸಂಬಂಧಿಸಿದೆಲ್ಲವೂ ಎರಡನೆಯ ದರ್ಜೆಯಾಗಿ ಬಿಟ್ಟಿತು. ಸಂಗೋಪನೆಗಿಂತ ಸಂಪಾದನೆ ಜೇಷ್ಠವಾಯಿತು. ಭಾವಕ್ಕಿಂತ ಬುದ್ದಿಯು ಶ್ರೇಷ್ಠವೆಂದಾಯಿತು. ಸಂಸ್ಕೃತಿಯು ಪ್ರಕೃತಿಗಿಂತ ಮೇಲು ಎಂದಾಯಿತು.

ಪರಂಪರೆಯಿಂದ ಮಹಿಳೆಯನ್ನು ಭಿನ್ನವಾಗಿ ಗುರುತಿಸಲಾಗಿದೆ. ಸ್ತ್ರೀಯನ್ನು ಅನಾವರಣಗೊಳಿಸಲಾಗದ ರಹಸ್ಯ ಎಂದು ಅವಳನ್ನು ಅರ್ಥಮಾಡಿಕೊಳ್ಳುವುದನ್ನು ಕೈಬಿಟ್ಟಿರುವ ಮಹಿಳೆಗೆ ಹಲವು ಆರೋಪಗಳನ್ನು ಹೊರಿಸಲಾಯಿತು. ಮಹಿಳೆಯಿಂದ ಪುರುಷನಿಗೆ ತೊಂದರೆ ಎಂದು ಮಹಿಳೆಗೆ ಕೆಲವು ಚೌಕಟ್ಟುಗಳನ್ನು ರೂಪಿಸಿದ್ದಾರೆ. ಒಂದೇ ಕಾಲಕ್ಕೆ ಅವಳನ್ನು ಸಬಲೆ–ಅಬಲೆ ಕಾಮುಕಿ–ವಿರಕ್ತೆ ಶರಣಾಗತೆ–ಅಂಕುಶಧಾರಣೀ ಎಂದು ಇತ್ಯಾದಿ ಚಿತ್ರಿಸಿವೆ. ಸ್ತ್ರೀಯರ ಚಿತ್ರಣದಲ್ಲಿ ಧರೆಯ ಸ್ವರೂಪದಲ್ಲಿ ಮಾತೃಪ್ರತಿಮೆ, ನಿಸರ್ಗ ರೂಪದಲ್ಲಿ ಸೃಜನಶೀಲ ಪ್ರತಿಮೆ, ದೇವಿಯ ರೂಪದಲ್ಲಿ ದುಷ್ಟಸಂಹಾರಕ್ಕೆ ಸೆಟೆದು ನಿಂತ ಶಕ್ತಿದೇವತೆಯ ಪ್ರತಿಮೆಗಳಿವೆ. ಅದರರೊಡನೆಯೇ ಮಾಟಗಾತಿ, ಮಾಂತ್ರಿಕಳೂ, ಢಾಕಿಣಿ, ಪುರುಷರನ್ನು ಮೋಹಗೊಳಿಸಿ ಅವರ ವ್ಯಕ್ತಿತ್ವದ ಸಾಧನೆಯ ಧಕ್ಕೆಗೆ ಕಾರಣಳಾಗುವ ವಿಕಾರಶೀಲ ಪ್ರಕೃತಿಯವಳೂ ಎನ್ನಲಾಗಿದೆ. ಹಾಗೆಯೇ ನಿಷ್ಠೆ, ಪ್ರತಿವ್ರತೆ ಮತ್ತು ಕಾಮರೂಪಿ ಬದುಕನ್ನು ಬೆಸೆಯುವ ಮನೋವೃತ್ತಾನುಸರಣಿಯಂಥ ಪ್ರತಿಮೆಗಳೂ ಇವೆ. ಸತಿ ಸಾವಿತ್ರಿ, ಸೀತಾ, ದ್ರೌಪದಿ,ಕುಂತಿ,ರಂಭೆ ಮೇನಕೆಯರ ಕಥೆಯಲ್ಲಿನ ಸ್ತ್ರೀಯರು ಕಾಳಿದಾಸನ ರತಿ ಪ್ರಧಾನ ಸೌಂದರ್ಯವತಿಯರಾದ ನಾಯಕಿಯರು ವೀರದೇವತೆಗಳ ಕಥೆ ಇತ್ಯಾದಿ ಎಲ್ಲಾ ಸ್ತ್ರೀಯರ ಚಿತ್ರಣಗಳು ಬೇರೆ ಬೇರೆ ಪ್ರತಿಮೇಗಳೆ ಆಗಿವೆ. ಸದ್ಗುಣಿ, ಸದಾಚಾಗಿಣಿ, ಪ್ರಾಮಾಣಿಕ ಏಕನಿಷ್ಠೆ, ಪತಿವ್ರತೆ, ವಿನಯಶೀಲ ಸಂಪನ್ನ ಪತ್ನಿ, ವಾತ್ಸಲ್ಯಮಯಿ ತಾಯಿ, ನಿಪುಣ ಗೃಹಿಣೀ, ಧರ್ಮ ಸಂರಕ್ಷಕಿ, ನೀತಿವಂತೆ ಎಂಬ ಗುಣಗಳು ಸ್ತ್ರೀಯರಿಗೇ ವಿಶಿಷ್ಟವಾದುವುಗಳು. ಸಮಾಜವು ಅವಳಿಂದ ಇಂಥ ಗುಣಗಳನ್ನು ಮಾತ್ರ ಅಪೇಕ್ಷೀಸುತ್ತಿದ್ದು, ಅವಳ ಇಂಥ ಭೂಮಿಕೆಯಿಂದ ಮಾತ್ರ ಸುಸಂಗತತೆ ಸಾಧ್ಯ ಎಂಬ ಗ್ರಹಿಕೆಯು ಗಮನೀಯ. ಸ್ತ್ರೀಯ ಈ ಪ್ರತಿಮೆ ಪರಂಪರೆಯು ನಿರ್ಮಿಸಿರುವ ಪುರುಷ ಪ್ರತಿಮೆಗಿಂತ ತೀರಾ ಭೀನ್ನವಾಗಿರುವುದಷ್ಟೇ ಅಲ್ಲ ಮಹತ್ವದಲ್ಲಿಯು ಗೌಣವಾದುದು ಎನ್ನಬಹುದು. ಮಹಿಳೆಯ ಅಂತರಂಗವನ್ನು ಅರಿಯುವುದು ಯಾರಿಂದ ಸಾಧ್ಯ? ಸರ್ವಜಗತ್ತಿಗೂ ಅನ್ವಯಿಸುವಂಥ ಒಂದು ವಿಧಾನವನ್ನು ರೂಪಿಸಬಹುದು. ಆದರೆ ಮಹಿಳೆ ವಿಷಯದಲ್ಲಿ ಇಂಥದನ್ನು ರೂಪಿಸುವುದಾಗಲಿ, ವಿವರಿಸುವುದಾಗಲಿ ಅತ್ಯಂತ ಕಠಿಣ ಕಾರಣ ಅವಳ ಜಗತ್ತೇ ಬೇರೆಯಾದುದು. ಸಾಹಿತ್ಯಕಾರರಿಂದ ಹಿಡಿದು ಮನಃಶಾಸ್ತ್ರಜ್ಞರವರೆಗೂ, ಬುದ್ದಿಜೀವಿಗಳಿಂದ ಹಿಡಿದು ತತ್ವಜ್ಞಾನಿಗಳವರೆಗೂ, ಸ್ತ್ರೀಯರನ್ನು ಒಗಟಾಗಿಯೇ ವ್ಯಾಖ್ಯಾನಿಸಿದ್ದಾರೆ. ಪ್ರಾಯ್ಡ್ ಕೂಡ ಪುರಷನಿಗಿಂತ ಸ್ತ್ರೀಯು ಅತ್ಯಂತ ರಹಸ್ಯಮಯಿ ಮತ್ತು ಪ್ರಶ್ನಾರ್ಹಳು ಎಂದಿದ್ದಾನೆ. ಅಲ್ಲದೆ ಸ್ತ್ರೀಗೆ ಅವಶ್ಯಕವಾದುದೇನು? ಎಂಬುದಕ್ಕೆ ಇನ್ನು ಉತ್ತರ ದೊರೆತಿಲ್ಲ. ಇನ್ನೂ ಈ ಪಾರಂಪರಿಕ ಸಾಂಸ್ಕೃತಿಕ ಮೌಲ್ಯಗಳು ಭಾಷೆಯೊಳಗಡೆ ಮಹಿಳೆಯನ್ನು ಹೀಗೆ ಪ್ರತಿನಿಧಿಸುತ್ತಿದ್ದಾಳೆ ಪಾರಂಪರಿಕ ನೀತಿ–ನಿರ್ದೇಶನಗಳನ್ನು ಸಮಾಜ ರಕ್ಷಿಸಿಕೊಂಡು ಬರುತ್ತಿರುವುದು ಭಾಷೆಯಿಂದನೇ

ಎಂದು ಹೇಳಬಹುದು. ಅಂದರೆ ಪಾರಂಪರಿಕ ಮೌಲ್ಯಗಳನ್ನು ನಿರಂತರವಾಗಿ ಕಾಪಾಡಿಕೊಂಡು ಬರಲಾಗಿದೆ. ಪುರುಷ ತನ್ನ ಸ್ಥಾನವನ್ನು ಉಳಿಸಿಕೊಳ್ಳುವುದಕ್ಕಾಗಿ ಮಹಿಳೆಯ ಮೇಲೆ ಕೆಲವು ನಿರ್ಭಂದಗಳನ್ನು ಹೇರುವುದರ ಮೂಲಕ ಈ ಎಲ್ಲ ವಿಚಾರಗಳು ಭಾಷೆ ತನ್ನೊಳಗೆ ಅಡಿಗಿಸಿಕೊಂಡಿದೆ. ಈ ಸೂಕ್ಷ್ಮತೆಯನ್ನು ವೈಜ್ಞಾನಿಕವಾಗಿ ನೋಡಿದಾಗ ತಿಳಿಯುತ್ತದೆ ಸಮಾಜದ ಸಾಂಸ್ಕೃತಿಕ ನೀತಿ ನಿರ್ದೇಶನಗಳು ಹೇಗಿವೆ ಎಂದು.

ಭಾಷೆ ಮಹಿಳೆಯನ್ನು ಪ್ರತಿನಿಧೀಕರಿಸುವಾಗ ಪಾರಂಪರಿಕ ನೀತಿ ನಿರ್ದೇಶನಗಳನ್ನು ಪಾಲಿಸುತ್ತ ಮಹಿಳೆ ತಾನು ಬಳಸುವ ಭಾಷೆಯನ್ನು ಸಮಾಜದ ಅಪೇಕ್ಷೆಗೆ ಅನುಗುಣವಾಗಿ ಹಿತ ಮಿತವಾಗಿ ಭಾಷೆ ಬಳಕೆ ಮಾಡುತ್ತಾಳೆ. ಉದಾಹರಣೆಗೆ

- ಮಾತಿನಲ್ಲಿ ಹಿಂಜರಿಕೆ
- ಹೆಚ್ಚು ಮಾತನಾಡದೆ ಮೌನವಾಗಿರುವುದು. ಹಿತಮಿತ ಮಾತನಾಡುವುದು.
- ನಿರರ್ಗಳವಾಗಿ ಮಾತನಾಡದಿರುವುದು.
- ಎದುರಾಡದೆ ಸದ್ಗುಣ ಉಳ್ಳವಳು ಎಂಬುದನ್ನು ಕಾಪಾಡಿಕೊಂಡು ಹೋಗುತ್ತಾಳೆ.
- ತನ್ನ ಅಭಿಪ್ರಾಯವನ್ನು ಗಟ್ಟಿಯಾಗಿ ಮಂಡಿಸದಿರುವುದು.

ಇತ್ಯಾದಿ ಮಹಿಳೆಯರ ಭಾಷಿಕ ಲಕ್ಷಣಗಳೆಂದು ಗುರುತಿಸಬಹುದು. ಇವುಗಳನ್ನಲ್ಲದೆ ಮಹಿಳೆ ಸಾಮಾಜಿಕ ನೀತಿ ನಿರ್ದೇಶನಗಳನ್ನು ಮೀರದಂತೆ ಕೆಲವೊಂದಿಷ್ಟು ನಿರೂಪಣೆಗಳನ್ನು ನಿರ್ದೇಶನಗಳನ್ನು ಕಟ್ಟಿಕೊಟ್ಟಿದೆ. ಆ ಬಗೆಯ ನಿರ್ವಚನಗಳು ಭಾಷೆ ಒಳಗಡೆಯೆ ಇವೆ. ಅವುಗಳನ್ನು ಜನಪದರು ಬಳಸುವ ಕೆಲವು ಸಾಹಿತ್ಯಿಕ ರೂಪಗಳಿಂದ ತಿಳಿದುಕೊಳ್ಳಬಹುದು. ವೇದ ಸುಳ್ಳಾದರೂ ಗಾದೆ ಸುಳ್ಳಾಗಲ್ಲ ಎಂಬ ಮಹತ್ವದ ಆಶಯವಿರುವ ಗಾದೆಗಳಲ್ಲಿ ಮಹಿಳೆ ಹೇಗಿರಬೇಕು ಎಂಬ ನಿರ್ದೇಶನದ ಕೆಲವು ನಿರ್ದೇಶನಗಳನ್ನು ಕೆಳಗಿನಂತೆ ಗಮನಿಸಬಹುದು.

- "ಹೆಂಡತಿಗೆ ಶೀಲವೇ ಭೂಷಣ

  ಸೂಳೆಗೆ ಸೌಂದರ್ಯವೇ ಭೂಷಣ"

- "ಅತ್ತೆ ಇಲ್ಲದೊಳು ಬಿತ್ತಾರಿ

  ಮಾವ ಇಲ್ಲದೊಳು ಮದನಾರಿ

  ಗಂಡ ಇಲ್ಲದೋಳು ದಂಡಿಗೆ ಬಜಾರಿ"

• ಕಂಡ ಕಂಡವರಿಗೆಲ್ಲ ಕೈಮುಗಿದರೂ

ಗಂಡಸತ್ತ ಮುಂಡೆಯ ಮಂಡೆ ಬೋಳಿಸದೆ ಬಿಡರು"

• ಹೆಣ್ಣು ಕೆಟ್ಟರೆ ಮೂರು ಲೋಕವೂ ಕೆಟ್ಟಹಂಗೆ

ಹೆಣ್ಣು ಬದುಕಿದ್ರೆ ಮೂರು ಲೋಕವು ಬದುಕಿದ್ದಂಗೆ"

• "ಹೆಣ್ಣಿಗೆ ಕಣ್ ಸನ್ನೆ

ಎತ್ತಿಗೆ ಮಿಣಿಸನ್ನೆ"

ಈ ಬಗೆಯಲ್ಲಿ ಮಹಿಳೆ ತಾಯಿ ಆಗಿರಬೇಕು ಆದರ್ಶಮಯಿ ಆಗಿರಬೇಕು, ಮದುವೆಯಾಗಿ ಏಕ ಪತಿವ್ರತಸ್ಥೆ ಆಗಿರಬೇಕು. ಸಮಾಜದ ಆದರ್ಶ ಅಪೇಕ್ಷೆಗಳು ಜನಪದರ ಸಾಹಿತ್ಯದೊಳಗಡೆ ಎಗ್ಗಿಲ್ಲದೆ ಹರಡಿಕೊಂಡಿವೆ. ಇಲ್ಲಿನ ನಿರೂಪಣೆಗಳನ್ನು ಜೀವನ ಪರ್ಯಂತ ಮಹಿಳೆ ಕಾಪಾಡಿಕೊಂಡು ಬರುತ್ತಿರಬೇಕು. ಇಲ್ಲದ್ದಿದ್ದರೆ ಮಹಿಳೆಗೆ ಉಳಿಗಾಲವಿಲ್ಲ. ಅವಳನ್ನು ಸಮಾಜ ಬಹಿಷ್ಕರಿಸುತ್ತದೆ. ಮಹಿಳೆಗಿರಬೇಕಾದ ಆದರ್ಶಗಳು ಯಾವುವು ಎಂದು ತಿಳಿದು ಅವುಗಳಂತೆಯೇ ಮಹಿಳೆ ಜೀವನ ಸಾಗಿಸಬೇಕು. ಇಲ್ಲಿ ಪುರುಷನಿಗೆ ಯಾವ ಆದರ್ಶಗಳು ಅನ್ವಯ ಆಗುವುದಿಲ್ಲ.

ಒಗಟುಗಳಲ್ಲಿ ಬಂದಿರುವ ಮಹಿಳೆಯರ ಆದರ್ಶ ಅಪೇಕ್ಷೆಗಳನ್ನು ಗಮನಿಸುವುದಾದರೆ,

ಉದಾ: ಕರೀ ಸೀರೆ ಉಟ್ಟಾಳ

ಕಾಲುಂಗರ ಇಟ್ಟಾಳ

ಮೇಲೆ ಹೋಗುತಾಳ ಕೆಳಗೆ ಬರತಾಳ್

ಮೇಲಿನ ಒಗಟಿನಲ್ಲಿ ಪುರುಷ ಬಯಸುವ ಆದರ್ಶಗಳು ಕಾಣಬಹುದು. ಇಲ್ಲಿ ಮಹಿಳೆ ಎಂದರೆ ಅವರ ಉಡುಗೆ ತೊಡುಗೆಗಳು ಹೇಗಿರಬೇಕು, ಅವರ ದೇಹ ರಚನೆ ಹೇಗಿರಬೇಕು ಎಂಬುದರ ಪೂರ್ವ ನಿರ್ಧಾರಿತ ಕಲ್ಪನೆಗಳು ಇವು.

ಪುರುಷ ಕಟ್ಟಿಕೊಟ್ಟಿರುವ ಆದರ್ಶಗಳನ್ನು ನಿರ್ದೇಶನಗಳನ್ನು ಪಾಲಿಸಿಕೊಂಡು ಬರುವಳಾಗಿ ಮಹಿಳೆ ತನ್ನ ಗಂಡನ ಹೆಸರನ್ನು ಒಡುಪು ಕಟ್ಟಿ ಹೇಳುವುದು.

•"ಹನ್ನೆರಡು ವರ್ಷ ಹೇಳೋದು ತಂದಿ-ತಾಯಿ ಹೆಸರ. ಆಮ್ಯಾಲ ಕೇಳೋದು ಅತ್ತಿ-ಮಾವರ ಹೆಸರ, ಅಕ್ಕರತಿಗಾಗಿ ಹೇಳೋದು ಬಾವ-ಮೈದುನರ ಹೆಸರ ಪತಿವ್ರತ್ಯಾಗಿ ಹೇಳೊದು ನನ್ನ ರಾಯರ ಹೆಸರ"

• "ಹೆಣ್ಣು ಹುಟ್ಟಿದ್ದು ಹೆರವರಿಗಾಗಿ, ಗಂಡ ಹುಟ್ಟಿದ್ದು ಮನೆಯ ಕಿರಿತಿಗಾಗಿ, ಹೆಸರು ಹೇಳುವೆ ನಿಮ್ಮೆಲ್ಲರ ಪಿರಿತಿಗಾಗಿ............

• "ಆರಮಣಾ ವಳ
ಮುರ ಮಣಾ ಜೊಳ್ಳ
ನಮ್ಮ ರಾಯರ ಮಾತಾಡೊದು ಸೂಳ್ಳ
"ನತ್ತ ಇಟ್ಕೊಂಡ ನಗಲಿ ಹ್ಯಾಂಗ
ಹಾದಿ ಮಾಲ ಕುತ್ತಾನ ಹಾಯಲಿ ಹ್ಯಾಂಗ
ಕಚೇರ್ಯಾಗ ಕುತ್ತಾನ ಕರೀಲಿ ಹ್ಯಾಂಗ....
"ಕಸಕಸಿ ಉಂಡಿ, ಕಾಸಿದ ತುಪ್ಪ
ಕಾಸ್ಯಾಡಿ ಮಾತಿಗಿ ವಾಸ್ಯಾಡಿ
ಹೊಗತಾನ...
ಪುರುಷರು ಮಹಿಳೆಯನ್ನು ಕುರಿತು ಹೇಳುವ ಒಡಪು.

• "ವ್ಯಾಪಾರಿಗೆ ಪತ್ತ ಬೇಕು
ರೋಗಿಗೆ ಪಥ್ಯ ಬೇಕು
ಒಕ್ಕಲಿಗ್ಯಾಗ ಎತ್ತ ಬೇಕು
ನನ್ನ...........(ಹೆಂಡತಿ)ವಳ ಮೂಗಿಗೆ ನತ್ತ ಬೇಕು.
"ಹಗ್ಗದಲ್ಲಿ ಹೊಡೆದರ ಮಗ್ಗಲಕ್ಕ ಬರತಾಳ್.............
"ಕಂಟ್ಯಾಗ ಕಂಟಿ ಕಾತರ ಕಂಟಿ
ನನ ಹ್ಯಾಣತಿ ಬಾಳ ಜಗಳಗಂಟಿ

"ಗಣಕೋಳಿಲೆ ಬಡದಂ
ಕುಣಕೋತ ಬರತಾಳ.....
"ಹಸರ ದಟ್ಟಿ, ಬಂಗಾರ ಪಟ್ಟಿ
ನಾ ಕೊಡಲಿಲ್ಲ ಆಕ್ಕಿ ಉಡಲಿಲ್ಲ...

ಹೀಗೆ ಒಡಮುಗಳು ಬಳಕೆಯೊಳಗಿರುವ ಭಾವನೆಗಳನ್ನು ವ್ಯಕ್ತಪಡಿಸುತ್ತವೆ. ಸಮಾಜದಲ್ಲಿ ಪ್ರಸ್ತುತ ಇರುವ ನಿರೂಪಣೆಗಳು ಪಾರಂಪರಿಕವಾಗಿ ಬಂದಿರುವ ಸಾಮಾಜಿಕ ಅಪೇಕ್ಷೆಗಳನ್ನು ವಿವರಿಸುತ್ತವೆ. ಮಹಿಳೆಗೆ ಸಮಾಜದಲ್ಲಿ ಇರುವ ಭಾಷಿಕ ನಿರ್ಬಂಧಗಳನ್ನು ವ್ಯಕ್ತಪಡಿಸುತ್ತಿವೆ. ಇವು ಸಮಾಜದ ಕನ್ನಡಿಗಳು. ಮಹಿಳೆಯರನ್ನು ಸಮಾಜ ಕಾಣುತ್ತಿರುವ ನಿರೂಪಣೆಗಳಾಗಿವೆ.

ಪರಂಪರಾಗತವಾಗಿ ಬೆಳೆದು ಬಂದಿರುವಂತಹ ಈ ಬಗೆಯ ಮನೋಭಾವದಿಂದಾಗಿ ಪುರುಷ ಮಹಿಳೆ ಇಬ್ಬರಲೂ ಕೆಲವು ವಿಚಾರಗಳು ಹಂಚಿಕೊಂಡು ಹೋಗದೆ ಮಹಿಳೆಗೆ ಮಾತ್ರ ಆದರ್ಶದ ಹೊರೆಯನ್ನು ಹೊರೆಸಲಾಗಿದೆ. ಪುರುಷ ಮಾತ್ರ ಸಮಾಜದಲ್ಲಿಯ ಪ್ರತಿಯೊಂದು ವಿಚಾರವನ್ನು ನಿರ್ಧರಿಸುವವನಾಗಿದ್ದಾನೆ. ಮಹಿಳೆಗೆ ಈ ಯಾವುದರ ಕಲ್ಪನೆಯೂ ಸುಳಿಯದ ಹಾಗೇ ಎಚ್ಚರ ವಹಿಸಿದ್ದಾನೆ. ಜೊತೆಗೆ ತನ್ನ ಸ್ಥಾನವನ್ನು ಭದ್ರಪಡಿಸಿಕೊಂಡಿದ್ದಾನೆ. ಮಹಿಳೆಯನ್ನು ಆಳುವ ಅಧಿಕಾರ ಹೊಂದಿರುವ ಒಡೆಯನ ಸ್ಥಾನದಲ್ಲಿ ಕುಳಿತ್ತಿದ್ದಾನೆ.

ಒಬ್ಬ ಮಹಿಳೆಯಾಗಿ ಯಾಕೆ ನಾನು ಎಂದು ಈ ಕೆಳಗಿನ ಪ್ರಶ್ನೆಗಳನ್ನು ಕೇಳಿಕೊಳ್ಳಬೇಕು.

- ಪುರುಷರಿಂದ ರಕ್ಷಿಸಲ್ಪಡಬೇಕು.
- ತಂದೆ, ತಾಯಿ ಇಬ್ಬರೂ ಕೆಲಸ ಮಾಡುತ್ತಿದ್ದರೂ ಮಗುವಿನ ಪಾಲನೆ ಹಾಗೂ ಮನೆಗೆಲಸದ ಪ್ರಾಥಮಿಕ ಜವಾಬ್ದಾರಿ ನನ್ನ ಮೇಲೆಯೇ ಇದೇ.
- ಪುರುಷರಷ್ಟೇ ಕೆಲಸವನ್ನು ಮಾಡಿದರೂ ನಮಗೆ ಪುರುಷರಷ್ಟೇ ವೇತನವನ್ನು (ಕೂಲಿಯನ್ನು) ಕೊಡುವುದಿಲ್ಲ.
- ನಾನು ಯಾಕೆ ನಾಯಕತ್ವದ ಅಧಿಕಾರದಿಂದ ವಂಚಿತಳಾಗಿದ್ದೇನೆ.
- ಶಾಲೆಯಲ್ಲಿ ಮಹಿಳೆಯರ ಇತಿಹಾಸದ ಬಗ್ಗೆ ಬಹಳ ಕಡಿಮೆ ಕಲಿಯುತ್ತೇವೆ.
- ರಾಜಕೀಯ, ಆಡಳಿತದಲ್ಲಿ, ವ್ಯಾಪಾರದಲ್ಲಿ, ಮಾಧ್ಯಮಿಕ ಹಾಗೂ ಉನ್ನತ ಶಿಕ್ಷಣದಲ್ಲಿ ಮತ್ತು ವೈದ್ಯಕೀಯ ವೃತ್ತಿಯಲ್ಲಿ ನ್ಯಾಯಾಂಗ ವ್ಯವಸ್ಥೆಯಲ್ಲಿ ಧಾರ್ಮಿಕ ಸಂಸ್ಥೆ ಮುಂತಾದವುಗಳಲ್ಲಿ ಮಾದರಿಯಾಗಿ ಬಹಳ ಕಡಿಮೆ ಜನರಿದ್ದಾರೆ.
- ನಾನು ಮದುವೆಯಾದರೆ ನನ್ನ ಹೆಸರನ್ನು ಬದಲಾಯಿಸಿಕೊಳ್ಳಬೇಕು. ಮತ್ತು ನನ್ನ ಮಕ್ಕಳಿಗೆ ನನ್ನ ಗಂಡನ ಹೆಸರನ್ನೇ ಕೊಡಬೇಕು.

- ನಾನು ಮರ ಹತ್ತಿದರೆ ಹೊರಗೆ ಆಡಿದರೆ, ಆಟಗಳಲ್ಲಿ ಭಾಗವಹಿಸಿದರೆ ನನ್ನನ್ನು ಗಂಡು ಭೀರಿ ಎಂದು ಕರೆಯುತ್ತಾರೆ.
- ನನಗೆ ಮಕ್ಕಳು ಬೇಡವೆಂದು ಹೇಳಿದರೆ ನನ್ನನ್ನು ವಿಚಿತ್ರ ವ್ಯಕ್ತಿ ಎಂದು ಪರಿಗಣಿಸುತ್ತಾರೆ.
- ನನ್ನದೇ ಶರೀರಕ್ಕೆ ಏನಾಗುತ್ತದೆ ಎಂಬುದರಲ್ಲಿ ನನಗೆ ನಿಯಂತ್ರಣವಿಲ್ಲ.
- ಪುರುಷರ ಜೊತೆ ಲೈಂಗಿಕ ಆಸಕ್ತಿಯನ್ನು ವ್ಯಕ್ತಪಡಿಸಲು ಆಗುವುದಿಲ್ಲ.
- ನಾನು ಅತ್ಯಾಚಾರ ಹಾಗೂ ದೈಹಿಕ ಹಲ್ಲೆಗಳಿಗೆ ಬಲಿಪಶುವಾಗಿದ್ದೇನೆ.
- ನಾನು ಪುರುಷರಿಗಿಂತ ಕಡಿಮೆ ಬುದ್ಧಿ ಹಾಗೂ ಕಡಿಮೆ ಸಾಮರ್ಥ್ಯ ಉಳ್ಳವಳು ಎಂದು ನಟಿಸಬೇಕಾಗುತ್ತದೆ.
- ನನ್ನ ಕೆಲಸದಲ್ಲಿ ನಾನು ಸೂಕ್ಷ್ಮಮತಿ & ಭಾವನಾತ್ಮಕಳಾಗಿದ್ದರಿಂದ ನನ್ನ ಬೆಲೆ ಕಡಿಮೆಯಾಗಿದೆ.

ಇಂತಹ ಪ್ರಶ್ನೆಗಳನ್ನು ಮಹಿಳೆ ಕೇಳಿಕೊಂಡರೆ ದೊರೆಯುವ ಉತ್ತರಗಳು ಭಿನ್ನವಾಗಿರುತ್ತವೆ. ಸಮಾಜದಲ್ಲಿ ಮಹಿಳೆಯ ಪಾತ್ರವು ಬೇರೆಯಾಗುತ್ತದೆ. ಮಹಿಳೆ ತಾನು ಕಳೆದುಕೊಂಡಿರುವಂತಹ ವಿಚಾರಗಳನ್ನು ಅರಿತುಕೊಳ್ಳುತ್ತಾಳೆ. ಆದರೆ ಈ ಯಾವ ಕಲ್ಪನೆಯೂ ಮಹಿಳೆಯು ಮಾಡಿಕೊಳ್ಳದ ಹಾಗೆ ಅವಳನ್ನು ರೂಪಿಸಲಾಗಿದೆ.

ಅದೇ ರೀತಿಯಾಗಿ ಪುರುಷರಿಗೆ ಒಪ್ಪಿಸಿದ ಅಥವಾ ಸಮಾಜ ಅಪೇಕ್ಷಿಸುವ ಪುರುಷನ ಗುಣಲಕ್ಷಣಗಳ ಒಂದು ಬಾರಿ ಒಬ್ಬ ಪುರುಷನಾಗಿ ನಾನು ಯಾಕೆ ಎಂದು ಈ ಕೆಳಗಿನ ಪ್ರಶ್ನೆಗಳನ್ನು ಕೇಳಿಕೊಂಡಾಗ ನೀತಿ ನಿರ್ದೇಶನಗಳ ಲಕ್ಷಣ ತಿಳಿಯುತ್ತದೆ.

- ನನಗಿಂತ ಎತ್ತರವಾದ ಹಾಗೂ ವಯಸ್ಸಾದ ಮಹಿಳೆಯನ್ನು ಹೊರಗೆ ಕರೆದುಕೊಂಡು ಹೋಗಲು ಸಂಕೊಚವೆನಿಸುತ್ತದೆ.
- ನಾನೇ ಎಲ್ಲ ಖರ್ಚುಗಳಿಗೆ ಹಣ ನೀಡಬೇಕು.
- ಕೈ ಕುಲುಕುವಾಗ ಬಿಟ್ಟರೆ ಬೇರೆ ಸಮಯದಲ್ಲಿ ಪುರುಷರನ್ನು ಮುಟ್ಟುವುದಿಲ್ಲ.
- ಡಾನ್ಸ್(ನೃತ್ಯ) ಕಲಿಯಬೇಕೆಂದರೆ ನನಗೆ ವಿಚಿತ್ರವೆನಿಸುತ್ತದೆ. (ಕೆಲವು ಅಪವಾದಗಳು ಇವೆ)
- ನಾನು ಯಶಸ್ವಿ ಹಾಗೂ ಗೌರವಾನ್ವಿತನೆಂದು ಗುರುತಿಸಿಕೊಳ್ಳಬೇಕಾದರೆ ನಾನು ಒಂದು ಕೆಲಸವನ್ನು ಹೊಂದಿ ವೇತನವನ್ನು ಪಡೆದುಕೊಳ್ಳಬೇಕು.
- ಪೂರ್ಣಾವಧಿಯ ಒಂದು ಕೆಲಸ ಇರಬೇಕೆಂಬ ಒತ್ತಡವಿದೆ.

- ಬೇರೆ ಗಂಡಸರ ಎದುರಿಗೆ ಹಾಗೂ ಸಾರ್ವಜನಿಕರ ಎದುರಿಗೆ ಅಳುವುದು ಸಾಧ್ಯವಿಲ್ಲ.
- ನನಗೆ ಭಯವಾಗುತ್ತದೆ. ಸರಿಯಾಗಿ ಗೊತ್ತಿಲ್ಲ/ಅಪಾಯದಲ್ಲಿದ್ದೇನೆ ಎಂಬ ಯಾವುದೆ ವಿಚಾರವಾಗಿ ಒಪ್ಪಿಕೊಳ್ಳಲು ಆಗುತ್ತಿಲ್ಲ. ಅಥವಾ ಹೀಗೆ ಗಂಡಸಾಗಿ ಹೇಳಬಾರದು.
- ನನ್ನ ಲೈಂಗಿಕ ಸಾಮರ್ಥ್ಯದ ಕುರಿತು ಉತ್ಪ್ರೇಕ್ಷೆಗೊಳ್ಳುತ್ತೇನೆ.
- ನನಗೆ ಆಹ್ವಾನ ಬಂದಾಗ (Challange) ಯಾವಾಗಲೂ ಆದರಿಂದ ವಿಮುಖನಾಗಲಾರೆ ಮತ್ತು ಹಿಂದೆಗೆಯಲಾರೆ.
- ಮಹಿಳೆಯರ ಜೊತೆಗೆ ಹೆಚ್ಚು ಲೈಂಗಿಕವಾಗಿ ಹೆಚ್ಚು ಸಮರ್ಥನಾಗಿರಬೇಕೆಂದು ಅಪೇಕ್ಷೀಸುತ್ತಾರೆ. (Assetive)
- ನಾನು ಯಾವಾಗಲೂ ಮೂಲ ಆದಾಯ (Bread WInner) ತರುವವನಾಗಿದ್ದು ನನ್ನ ಕುಟುಂಬದವನ್ನು ಸಂರಕ್ಷಿಸಬೇಕೆಂದು ಅಪೇಕ್ಷಿಸುತ್ತಾರೆ.
- ನಾನು ಹೆಚ್ಚು ಶಕ್ತಿಶಾಲಿಯಗಿ, ದಬ್ಬಾಳಿಕೆಯ ಪ್ರವೃತ್ತಿ ಇರುವವನು ಮತ್ತು ನಿರ್ಧಾರ ಕೈಗೊಳ್ಳುವವನಾಗಿರಬೇಕೆಂದು ಬಯಸುತ್ತಾರೆ.

ಈ ಪ್ರಶ್ನೆಗಳ ಇಬ್ಬರಲ್ಲೂ ಭಿನ್ನವಾದವುಗಳು. ಒಬ್ಬರ ನಡಾವಳಿಕೆಯನ್ನು ಇನ್ನೊಬ್ಬರ ಅನುಕರಿಸುವ ಆಗಿಲ್ಲ. ಸಮಾಜದ ಅಪೇಕ್ಷೆಯಂತೆ ಬಂದಂತಹ ಈ ಬಗೆಯ ನಡವಳಿಕೆಗಳು ಪರಸ್ಪರರಲ್ಲಿ ನಿರ್ಧಿಷ್ಟವಾಗಿ ಇರಬೇಕು. ಈ ಮೌಲ್ಯಗಳು ಬದಲಾಗುತ್ತವೆ. ಇನ್ನೊಬ್ಬರೂ ಕಾಪಾಡಿಕೊಂಡು ಬರಬೇಕು.

ಈ ಮೌಲ್ಯಗಳನ್ನು ಆದರಿಸಿದಂತೆ ಕೆಲಸದ ಹಂಚಿಕೆಯು ಸಮಾಜದೊಳಗಡೆ ನಡೆದಿದೆ. ಈ ಹಂಚಿಕೆಯಿಂದಾಗಿ ಮಹಿಳೆ ಮತ್ತು ಪುರುಷರು ಸಮಾಜದಲ್ಲಿ ನಿರ್ವಹಿಸುವ ಪಾತ್ರಗಳು ಎಂಥವು ಅಥವಾ ಹೇಗಿರಬೇಕು ಎಂದು ನಿರ್ದೇಶಿಸಿದಂತಹವು.

ಪುರುಷರಿಂದ ಅಪೇಕ್ಷೀಸುವ ಕೆಲಸ ಪುರುಷನಿಗೆ ಪರಂಪರೆಯಿಂದ ನಿರ್ದೇಶಿಸಿರುವ ಕೆಲಸಗಳನ್ನು ಕೆಳಗಿನ ಪಟ್ಟಿಯಲ್ಲಿ ಗಮನಿಸಬಹುದು. ಅಥವಾ ಕೆಳಗೆ ಕೊಟ್ಟಿರುವ ಪಟ್ಟಿಯಲ್ಲಿ ಯಾರು ಯಾವ ಕೆಲಸವನ್ನು ಮಾಡಬೇಕು ಎಂದು ಸಮಾಜ ಅಪೇಕ್ಷಿಸುತ್ತದೆ.

- ರಾಜ್ಯಭಾರ ಮಾಡುವುದು
- ಭಾರ ಎತ್ತುವುದು, ಯಂತ್ರ ಚಾಲನೆ

- ಮಾತನಾಡುವುದು (ಭಾಷಣ ಮಾಡುವುದು)
- ನಿರ್ಧಾರ ಮಾಡುವುದು
- ಮಾರಾಟ ಮಾಡುವುದು
- ಲೆಕ್ಕಾಚಾರ ಮಾಡುವುದು
- ಗದ್ದೆ ಕೆಲಸ
- ಉಳುಮೆ ಮಾಡುವುದು
- ಕುಟುಂಬದ ಒಡೆತನ

ಮಹಿಳೆಯರಿಗೆ ಹಂಚಿರುವ ಕೆಲಸಗಳು ಅಥವಾ ಮಹಿಳೆ ಮಾತ್ರ ಈ ಕೆಲಸಗಳನ್ನು ಮಾಡಬೇಕು ಎಂದು ನಿರ್ದೇಶಿಸಿಕೊಟ್ಟಿರುವಂತಹ ಕೆಲಸಗಳು ಅಥವಾ ಕೆಳಗಿನ ಕೆಲಸಗಳನ್ನು ಯಾರು ಮಾಡಬೇಕು ಎಂಬುದು ಸಮಾಜದ ಅಪೇಕ್ಷೆಯಾಗಿದೆ.

- ಗೃಹಿಣಿ
- ನರ್ಸ್
- ಅಡುಗೆ ಮಾಡುವವರು
- ಟೀಚರ್
- ಬಟ್ಟೆ ತೊಳೆಯುವುದು
- ಒಲೆ ಉರಿಸುವುದು
- ಬುಟ್ಟಿ ಹೆಣೆಯುವುದು
- ನೀರು ಸೇದುವುದು (ನೀರು ತರುವುದು)
- ಮಗುವನ್ನು ನೋಡಿಕೊಳ್ಳುವುದು
- ಬಟ್ಟೆ ಹೊಲಿಯುವುದು.

ಪರಂಪರಗತವಾಗಿ ಸಮಾಜದಲ್ಲಿ ನಿರ್ಧರಿಸಿದ ಸಿದ್ಧ ಕೆಲಸಗಳೂ ಇವುಗಳನ್ನು ಬದಲಾಗಿ ಪುರುಷ ಮಾಡಿದರೆ ಹೆಣ್ಣಿಗೆ ಅಥವಾ ಅವನ ವ್ಯಕ್ತಿತ್ವಕ್ಕೆ ದಕ್ಕೆ ತರುವಂತಹ ಕೆಲಸಗಳಾಗಿವೆ. ಪುರುಷನ ಕೆಲಸಗಳನ್ನು ಮಹಿಳೆ ಮಾಡಲು ಅವಕಾಶವೇ ಇಲ್ಲ. ಒಂದು ವೇಳೆ ಸಮಾಜದ

ನಿರ್ಬಂಧ ಮೀರಿಮಾಡಿದರೆ ಗಂಡು ಭೀರಿ ಎಂದು ಸಮಾಜ ಅವಳನ್ನು ನೋಡುವ ದೃಷ್ಟಿಕೋನವೇ ಬದಲಾಗುತ್ತದೆ. ಆಧುನಿಕತೆಯಲ್ಲಿ ಅಪವಾದ ಎಂಬ ಂತೆ ಮಾಡುತ್ತಿದ್ದರೂ ಸಮಾಜದ ಅಪೇಕ್ಷೆಗೆ ವಿರುದ್ಧವಾಗಿರುವಂತಹ ವಿಚಾರವಾಗಿದೆ.

ಸಮಾಜ ಈ ಲಿಂಗಾಧಾರಿತವಾಗಿದೆ ಎಂಬುದಕ್ಕೆ ಇನ್ನೂ ಕೆಲವಂದಿಷ್ಟು ಉದಾಹರಣೆಗಳನ್ನು ಕೊಡುವುದಾರೆ ಮಹಿಳೆಯ ಲಕ್ಷಣಗಳನ್ನೇ ಅವಳಿಗೆ ಪರಂಪರೆಯಿಂದ ನೀಡಿರುವ ಕೆಲವು ಅಂಶಗಳಿವೆ. ಅವುಗಳೆಂದರೆ,

- ಎಲ್ಲರೆದುರಿಗೆ ಅಳುವುದು
- ಮನೆಗೆಲಸ
- ವೇಶ್ಯಾವೃತ್ತಿ
- ಗರ್ಭಧಾರಣೆ
- ತಾಯಿ
- ಅತ್ಯಾಚಾರ
- ಕತ್ತಲೆಯ ಭಯ
- ವರದಕ್ಷಿಣೆ
- ವಿಧವೆ
- ಬಂಜೆ
- ಗಂಡುಭೀರಿ
- ಚಾಡಿ ಮಾತು
- ಕುಟುಂಬ

ಗಂಡಸಿನ ಲಕ್ಷಣ ಕುರಿತು ಮನೋಭಾವ ಮತ್ತು ಗಂಡಸು ಗುಣಗಳು.

- ತಾತ್ವಿಕ ಮನೋಭಾವ
- ಜಾಣ್ಮೆ
- ಹುಟ್ಟು(ಜನನ)

- ಮರ ಹತ್ತುವುದು
- ಮೀಸೆ
- ಬ್ಯಾಂಕ್ ಖಾತೆ
- ಪಿತ್ರಾರ್ಜಿತ(ಅನುವಂಶಿಕ)
- ಎತ್ತರ ದಪ್ಪವಾದ ದೇಹ
- ಕ್ರೀಡೆಗಳು
- ಕೂದಲು ಕತ್ತರಿಸುವುದು
- ಮಧ್ಯ(ಸಾರಾಯಿ)
- ಜೂಜು

ಪಾರಂಪರಿಕವಾಗಿ ಬೆಳೆದು ಬಂದಿರುವ ಈ ಲಿಂಗ ಅಸಮಾನತೆಯ ಕಾರಣಗಳಿಂದ ಭಾಷೆಯು ಅಸಮಾನತೆಯಿಂದ ಕೂಡಿದೆ. ಮಹಿಳೆ ಭಾಷಾ ಬಳಕೆಗೆ ತೊಡಕನ್ನು ಒದಗಿಸಿಕೊಡುತ್ತದೆ. ಭಾಷಾ ಬಳಕೆಗೆ ಸಂಬಂದಿಸಿದಂತೆ ಮಹಿಳೆಗೆ ತೊಡಕಾಗಿರುವ ಕೆಲವು ಸಂದರ್ಭಗಳನ್ನು ಕೆಳಗಿನಂತೆ ಗುರುತಿಸಲಾಗಿದೆ.

ಗಂಡಸರು ಮತ್ತು ಮಹಿಳೆ ಬೇರೆಯದೇ ನಡವಳಿಕೆಗಳನ್ನು ರೂಢಿಸಿಕೊಂಡಿರುವವರು. ಮಹಿಳೆಯನ್ನು ಬಲಿಪಶುವನ್ನಾಗಿ ಮಾಡುವುದು, ತಮಾಷೆ ಮಾಡುವುದು, ಇತ್ಯಾದಿಗಳು ಎಲ್ಲಾ ಪುರುಷ ಗುಂಪುಗಳಲ್ಲಿ ಎದ್ದು ಕಾಣುವ ಅಂಶಗಳು. ಪುರುಷರ ಗುಂಪಿನಲ್ಲಿ ಬರುವ ಮೂರನೆಯ ಒಂದರ ಹೇಳಿಕೆಗಳು ಇಡೀ ಗುಂಪಿನ ಹೇಳುವಂಥವುಗಳಿದ್ದು ಪರಸ್ಪರ ಆತ್ಮೀಯತೆಯನ್ನು ಸೃಷ್ಟಿಸದಂತೆ ಅವುಗಳಿರುತ್ತವೆ(ತಮಗೆ ಬೇಕಾದ ಆತ್ಮೀಯತೆ ಗಂಡಸರ ಗುಂಪಿನಲ್ಲಿ ಸಿಗುವುದಿಲ್ಲವೆಂದು ಗಂಡಸರು ಹೇಳುತ್ತಾರೆ). ಎಲ್ಲಾ ಸ್ತ್ರೀ ಗುಂಪುಗಳು ಸ್ವೀಕಾರ ಭಾವನೆ, ಕುಟುಂಬ ಸ್ಪರ್ದೆ ಮತ್ತು ಮುಂಧಾಳತ್ವದ ಬಗ್ಗೆ ದ್ವಂದ್ವ ಸಂಬಂಧಗಳ ಮೇಲೆ ಹೆಚ್ಚಿನ ಭಾವನಾತ್ಮಕವಾಗಿ ಮಹಿಳೆಯರ ಗುಂಪುಗಳು ಒಳಗೊಂಡಿರುತ್ತವೆ.

ಎರಡು ಲಿಂಗಗಳೂ ಸೇರಿದ ಗುಂಪುಗಳಲ್ಲಿ ಗಂಡಸರು ಹೆಚ್ಚು ಗಂಭೀರವಾಗಿ ಮತ್ತು ಜಾಗೃತಿಯಲ್ಲಿರುತ್ತಾರೆ. ಆಕ್ರಮಣವನ್ನು ಕುರಿತು ಹೆಚ್ಚು ಮಾತನಾಡುವುದಿಲ್ಲ. ಕಡಿಮೆ ತಮಾಷೆ ಮಾಡುತ್ತಾರೆ ಎರಡೂ ಲಿಂಗಗಳವರು ತಮ್ಮ ಬಗ್ಗೆ ಹೇಳುತ್ತಾ ಸಂವೇದನೆಗಳ ಕುರಿತು ಮಾತನಾಡುತ್ತಾರೆ.

ಆದರೆ ಹೆಂಗಸರು ಗಂಡಸರಿಗಿಂತ ಸಾಕಷ್ಟು ಪ್ರಮಾಣದಲ್ಲಿ ಕಡಿಮೆ ಮಾತನಾಡುತ್ತಾರೆ. ಗುಂಪಿನಲ್ಲಿ ಇರುವಷ್ಟು ಹೊತ್ತು ಮಾತನಾಡುವ ಸಮಯವನ್ನು ಎರಡು ಮೂರಂಶದ ಭಾಗವನ್ನು ಗಂಡಸರು ತೆಗೆದುಕೊಂಡರೆ ಹೆಂಗಸರು ಒಂದು ಮೂರಂಶ ಭಾಗವನ್ನಷ್ಟೇ ಪಡೆಯುತ್ತಾರೆ.

ತಮ್ಮ ವಿರುದ್ಧ ಲಿಂಗದವರ ಬಗ್ಗೆ ಕಳಕಳಿ ತೋರಿಸುತ್ತಾರೆ. ಮತ್ತು ಅವರ ಗಮನ ಸೆಳೆಯಲು ಪ್ರಯತ್ನಿಸುತ್ತಾರೆ. ಇಂತಹ ಗುಂಪುಗಳಲ್ಲಿನ ಸಂಭಾಷಣೆಗಳನ್ನು ಮುದ್ರಿಸಿಕೊಂಡಾಗ ಕಂಡು ಬಂದುದ್ದೇನೆಂದರೆ ಮಾತಿನ ಮಧ್ಯೆ ಪ್ರವೇಶ ಮಾಡುವುದರಲ್ಲಿ ೯೮% ಪುರುಷರೇ ಆಗಿರುತ್ತಾರೆ. ಮಾತಿಗೆ ಮಾತು ಬೆಳೆಸುವುದರಲ್ಲಿ ೧೦೦% ಗಂಡಸರೇ ಎಂದು ತಿಳಿದುಬಂದಿದೆ. ಹೆಂಗಸರೇ ಇರುವ ಒಬ್ಬ ಗುಂಪಿನಲ್ಲಿ ಗಂಡಸರಿದ್ದರೆ ಅಂತಹ ಗುಂಪಿನ ಕೇಂದ್ರ ಬಿಂದು ಅವನೇ ಆಗಿರುತ್ತಾನೆ. ಗುಂಪಿನಿಂದ ಪ್ರತ್ಯೇಕವಾಗಿದ್ದು, ಗೌರವಿಸಲ್ಪಡುತ್ತಾನೆ. ಆದರೆ ಗಂಡಸರೇ ಹೆಚ್ಚಾಗಿರುವ ಗುಂಪಿನಲ್ಲಿ ಕಡಿಮೆ ಸಂಖ್ಯೆಯಲ್ಲಿ ಹೆಂಗಸರಿದ್ದರೆ ಅವರು ಪರಕೀಯಗೊಳಿಸಲ್ಪಟ್ಟು ಮೂಲೆ ಗುಂಪಾಗಿರುತ್ತಾರೆ. ಈ ಗುಂಪಿನಲ್ಲಿ ಇರುವ ಮಹಿಳೆಯರು ಮೂಕರಂತೆ ಮೌನವಾಗಿಯೇ ಉಳಿಯುತ್ತಾರೆ.

ಗುಂಪಿನಲ್ಲಿ ಸ್ತ್ರೀಯರ ಸಂಖ್ಯೆ ಹೆಚ್ಚಿದ್ದರೆ ಹೆಂಗಸರು ತಮ್ಮ ಅಭಿವ್ಯಕ್ತಿ ಸುಗಮವಾಗಿ ಮಾಡುತ್ತಾರೆ. ಒಂದು ಗುಂಪಿನಲ್ಲಿ ಒಬ್ಬಳೆ ಹೆಂಗಸಿದ್ದರೆ ಆಕೆ ಮೌನಿಯಾಗುತ್ತಾಳೆ. ಬಿಚ್ಚು ಮನಸ್ಸಿನಿಂದ ಭಾಗವಹಿಸುವುದಿಲ್ಲ. ಏಕೆಂದರೆ ಅಲ್ಲಿ ಆಗ ಅವರು ಗೌಣವಾಗಿರುವ ಪರಕೀಯಳಾಗಿರುವ ಬೆಂಬಲವಿಲ್ಲದವಳಂತಿರುವ ಸಂಭವವೇ ಹೆಚ್ಚು.

ಸಮಾಜದಲ್ಲಿ ಪರಂಪರಾಗತವಾಗಿ ಬಂದಿರುವಂತಹ ನೀತಿ ನಿರ್ದೇಶನಗಳ ಕಾರಣಕ್ಕಾಗಿ ಭಾಷೆಯಲ್ಲಿ ಈ ಬಗೆಯ ಹಲವು ತೊಡಕುಗಳು ಬರುತ್ತಿವೆ. ಮಹಿಳೆಯ ಸಮಸ್ಯೆ ಒಂದಾದರೆ ಪುರುಷನ ವಿಚಾರ ಮತ್ತೊಂದು ಬಗೆ. ಸಾಮಾಜಿಕ ಲಿಂಗ ಸಮಾನತೆಯಿಂದಾಗಿ ಪರಸ್ಪರ ವಿರುದ್ದ ಲಿಂಗದವರೂ ತಮ್ಮ ವ್ಯಕ್ತಿತ್ವದಲ್ಲಿ ದಕ್ಕೆ ಬರುವಂತಹ ಸಂಗತಿಗಳು ಎದುರಾದರೆ, ಪುರುಷ ಅವಮಾನ ಎಂದು ಪರಿಗಣಿಸುತ್ತಾನೆ. ಆ ಬಗೆಯ ಸಂದರ್ಭ ಒಂದು ಗಮನಿಸುವುದಾದರೆ, ಇಬ್ಬರು ಹುಡುಗರು ಮಾತನಾಡುತ್ತೀರೊ ವಿಷಯ ಹೀಗಿತ್ತು.

'ಯಾಕೋ ಅಷ್ಟೋತ್ತಿಂದ ನಾನೊಬ್ನೇ ಮಾತಾಡ್ತಿದೀನಿ ನೀನೇನು ಹೇಳ್ತಾನೆ ಇಲ್ಲ.'

ಅಯ್ಯೋ! ಮಾತು ಯಾರಿಗೆ ಬೇಕಾಗಿದೆ?

'ಯಾಕೋ ಏನಾಯ್ತು?

'ಇವತ್ತು ಆಫೀಸಿನಲ್ಲಿ ಮುಖಕ್ಕೆ ಮಂಗಳಾರತಿ ಆಯ್ತು'

'ಸರಿಯಾಗಿ ಹೇಳು ಏನಾಯ್ತು ಅಂತ'

ಯಾವುದೋ ಗ್ಯಾನದಲ್ಲಿ ಕೂಡಿಸೋದ್ರಲ್ಲಿ ತಪ್ಪು ಮಾಡ್ಬಿಟ್ಟಿದ್ದೆ. ಅಷ್ಟಕ್ಕೆ ನಂ ಬಾಸು ಆ ಅಕೌಂಟ್ ಸೆಕ್ಷನ್ ಹುಡುಗೀರ್ಮುಂದೆ ಹಿಗ್ಗಾಮುಗ್ಗಾ ಬೈದು ಬಿಟ್ರು. ಎಷ್ಟ್ ಅವಮಾನ ಆಯ್ತು ಗೊತ್ತಾ? ಬೇರೆಯವರ ಎದ್ರಿಗೆ ಹೊಡದಿದ್ರೂ ಇಷ್ಟ್ ಬೇಜಾರು ಆಗ್ತಿರಲ್ಲಿಲ್ಲ.

ಅವರಿಬ್ಬರ ಮಾತುಗಳಲ್ಲಿ ತಪ್ಪಿಗೆ ಶಿಕ್ಷೆ ಆಯ್ತಲ್ಲ ಅಂತ ಬೇಜಾರಿಲ್ಲ. ಅಥವಾ ತಪ್ಪು ಮಾಡಿದರೆ ಅವಮಾನ ಅಲ್ಲ. ಮಹಿಳೆಯ ಎದುರು ಬೈಯಿಸಿಕೊಳ್ಳುವುದು ಅವಮಾನ! ಇದೆಂಥ ರೀತಿಯ ಮನೋಭಾವ. ಇದಕ್ಕೆ ಕಾರಣವೇನೆಂದರೆ ತಾನು ಗಂಡಸು ಎಂಬ ಕಾರಣಕ್ಕಾಗಿ ತಾನು ಯಾವಾತ್ತಿಗೂ ಸರಿ ಎಂದು ಮಹಿಳೆ ಎದುರು ತೋರಿಸಿಕೊಡುವುದೇ ಮುಖ್ಯ ದೃಷ್ಟಿ.

ಇವೆಲ್ಲಕ್ಕಿಂತ ಮುಖ್ಯವಾದ ಸಂಗತಿ ಇನ್ನೊಂದಿದೆ. ಮದುವೆ ವಯಸ್ಸಿನ ಹುಡುಗರು ಎಷ್ಟು ವಧುಗಳನ್ನು ಬೇಡ ಎಂದರೆ ಯಾವುದೇ ಸಮಸ್ಯೆ ಇಲ್ಲ. ಹುಡುಗಿ ಒಂದು ವೇಳೆ ವರನನ್ನು ನಿರಾಕರಿಸಿದರೆ ಆ ಹುಡುಗಿಯ ವಿಷಯದಲ್ಲಿ ಹುಷಾರಾಗಿರಿ ಎನ್ನುವ ಎಚ್ಚರಿಕೆ ಮಾತು ಕೇಳಿಬರುತ್ತದೆ. ಅವಳು ಬಂದ ವರಗಳನ್ನೆಲ್ಲ ನಿರಕಾರಿಸುತ್ತಾಳೆ ಅವಳಿಗೆ ಎಂಥ ಸೊಕ್ಕು. ಪಾಪ! ಹುಡುಗನಿಗೆ ಅವಮಾನ ಆಯ್ತು ಎನ್ನುವ ಮಾತು ಧಾರಾಳಾವಾಗಿ ಆಕಡೆ ಈಕಡೆಯವರ (ಸಮಾಜ) ಬಾಯಿಗೆ ಆಹಾರವಾಗುತ್ತದೆ.

ಮಹಿಳೆ/ಹುಡುಗಿಯರ ಎದುರಿಗೆ ಪುರುಷ/ಹುಡುಗ ಬೈಸಿಕೊಳ್ಳುವುದು, ಆಕೆಯಿಂದ ನಿರಾಕರಣೆಗೆ ಒಳಗಾಗುವುದು, ಅವಮಾನವೆಂಬ ಭಾವನೆ ಪರಂಪರೆಯಿಂದ ಬೆಳೆದುಬಂದಿವೆ. ಮಹಿಳೆ ಪುರುಷನಿಂದ ಬೈಸಿಕೊಂಡರೆ, ಅವಮಾನಕ್ಕೆ ಒಳಗಾದರೆ, ಪುರುಷನಿಗೆ ಅದು ದೊಡ್ಡ ವಿಷಯವಲ್ಲ. ಅದು ಪುರುಷನ ಹಕ್ಕು. ಅವಳು ಅವಮಾನಿತಳಾದಳು ಎನ್ನುವುದು ಗಂಡಿಗೆ ಮುಖ್ಯವಾಗುವುದೇ ಇಲ್ಲ. ಗಂಡು ಹೆಣ್ಣುಗಳು ಸಹಜೀವಿಗಳಾಗಿ ಕುಟುಂಬದಲ್ಲಿ ಸಮಾಜದಲ್ಲಿ ಬದುಕುತ್ತಿದ್ದರೂ ಯಾಕೆ ಇಂಥ ಮನೋಭಾವದಡಿ ಕಾಣುತ್ತಿದ್ದಾರೆ? ತಾನು ತಪ್ಪು ಮಾಡಿದಾಗ ಪುರುಷನೆದುರು ಬೈದರೆ ತನಗೆ ಅವಮಾನವೆಂದು ಮಹಿಳೆ ಯಾವತ್ತು ಭಾವಿಸುವುದಿಲ್ಲ. ಅವಳನ್ನು ಅವಮಾನಿಸುವುದು, ದಂಡಿಸುವುದು, ತನ್ನ ಅಧಿಕಾರವೆಂದು ಪುರುಷ ಭಾವಿಸಿಕೊಂಡಿದ್ದಾನೆ. ತನಗೆ ಅವಮಾನ ಆಗುತ್ತಿದೆ ಎಂದು ಅವಳು ಯೋಚಿಸಲು ಸಾಧ್ಯ ಇಲ್ಲ. ಇತಿಹಾಸದುದ್ದಕ್ಕೂ ಮಹಿಳೆ ಗಂಡಿನಿಂದ ಎಷ್ಟು ಅವಮಾನಿತಳಾಗುತ್ತ ಬಂದಿದ್ದಾಳೆ? ಇದರಿಂದ ಅವಳು ಉಂಡ ನೋವೆಷ್ಟು ಎನ್ನುವುದನ್ನು ಸಮಾಜ ಯಾವತ್ತೂ ಗಮನಿಸಿದಂತೆ ಕಾಣುವುದಿಲ್ಲ.

ಪ್ರತಿಯೊಂದು ಹಂತದಲ್ಲಿಯೂ ಮಹಿಳೆ ಮತ್ತು ಪುರುಷ ಎನ್ನುವ ಲಿಂಗಾಧಾರಿತ ಮನೋಧರ್ಮ ವ್ಯಾಪಿಸಿದೆ. ಪಿತೃ ಪ್ರಧಾನತೆ ಹೆಣ್ಣನ್ನು ನಿಕೃಷ್ಟವಾಗಿ ಕಾಣುತ್ತ ಬಂದಿದೆ. ಆಕೆಯ ಮಾತನ್ನು ಮಾನ್ಯ ಮಾಡುವುದು ಗಂಡಸ್ತನಕ್ಕೆ ಕುಂದು ಎಂದು ಸಮಾಜ ಭಾವಿಸಿದೆ. ಮಹಿಳೆ ಪುರುಷ ಎನ್ನುವ ಲಿಂಗಭೇದ ಇದ್ದಾಗ ಹೀಗಾಗುವುದು ಸಹಜ. ಹೆಣ್ಣು ಗಂಡು ಪರಸ್ಪರ ಪೂರಕರೇ ವಿನಾಃ ಸ್ಪರ್ದಿಗಳಲ್ಲ ಎನ್ನುವುದನ್ನು ಅರ್ಥ ಮಾಡಿಕೊಳ್ಳಬೇಕು. ಆಗ ಮಾತ್ರ ಈ ಬಗೆಯ ಮನೋಧರ್ಮ ತಾನಾಗಿ ಅಳಿಸಿ ಹೋಗುತ್ತದೆ. ಸರಿತಪ್ಪುಗಳ ನಿರ್ಧಾರ ತಿದ್ದುವಿಕೆಗಳನ್ನು ಲಿಂಗಾತೀತ ನೆಲೆಯಲ್ಲಿ ಗ್ರಹಿಸಲು ಸಾಧ್ಯವಾಗುತ್ತದೆ.

ಸಾಂಸ್ಕೃತಿಕವಾಗಿ ಲಿಂಗ ತಾರತಮ್ಯತೆಯಿಂದ ಕೂಡಿದೆ. ಭಾಷೆಯೊಳಗಡೆ ಪದದ ಹಂತದಲ್ಲಿ ಈ ಬಗೆಯ ತಾರತಮ್ಯಗಳು ಇವೆ. ಇವು ಲಿಂಗವನ್ನು ಪ್ರತ್ಯೇಕಿಸಿ ನೀನು ಹೀಗೆ ಎಂಬುದನ್ನು ಗುರುತಿಸುವುದಕ್ಕೆ ಹುಟ್ಟಿಕೊಂಡಿರುವ ಪದಗಳು

"ನಮ್ಮ ಸಾಂಸ್ಕೃತಿಕ ಪದಕೋಶದಲ್ಲಿ ಭಾಷಾ ಬಳಕೆಯಲ್ಲಿ ಹಲವು ಬಗೆಯ ಲಿಂಗತಾರತಮ್ಯ ಜರುಗಿದೆ. ಪುರುಷ ಮದುವೆ ಆಗಿದ್ದರೂ, ಮದುವೆ ಆಗಿಲ್ಲದಿದ್ದರೂ ಶ್ರೀ ಎಂದು ಬಳಕೆ ಮಾಡುತ್ತಿದ್ದೇವೆ. ಆದರೆ ಮಹಿಳೆ ವಿವಾಹವಾಗಿದ್ದರೆ ಶ್ರೀಮತಿ ಎಂತಲು, ವಿವಾಹವಾಗಿಲ್ಲದಿದ್ದರೆ ಕುಮಾರಿ ಎಂದು ಬಳಕೆ ಮಾಡುತ್ತೇವೆ. ಆದರೆ ಮಹಿಳೆ ವಿವಾಹವಾಗಿದ್ದರೆ ಒಂದು ರೀತಿ, ಗಂಡ ತೀರಿ ಕೊಂಡಿರುವವಳಿಗೆ ವಿಧವೆ ಎಂಬ ಭಾಷಾ ಸೂಚಕದಿಂದ ಗುರುತಿಸಲಾಗಿದೆ. ಹೆಂಡತಿ ಕಳೆದುಕೊಂಡವನಿಗೆ ವಿಧುರ ಎಂದು ಅಲ್ಲಲ್ಲಿ ಬಳಕೆ ಮಾಡುತ್ತಿದ್ದೇವೆ ಆದರೆ ಚರಿತ್ರೆಯಲ್ಲಿ ಅಧಿಕೃತವಾಗಿ ದಾಖಲೆ ಆಗಿಲ್ಲ"[೧೪] ಹಾಗೆ ಬಂಜೆಯೆಂಬ ಪದ ಸಹ ಪರಂಪರೆಯಲ್ಲಿ ಮಹಿಳೆಗೆ ಸೀಮಿತವಾಗಿರುವಂತಹದು. ಈ ಪದಕ್ಕೆ ಪ್ರತಿಯೊಂದು ಪದ ಪುರುಷನಿಗೆ ಇಲ್ಲ.

ಪಾರಂಪರಿಕವಾದ ಈ ಸಾಂಸ್ಕೃತಿಕ ಮನೋಭಾವದೊಳಗಡೆ ಆಳದಲ್ಲಿ ಬೇರೂರಿರುವುದರಿಂದ ಮಹಿಳೆ ಅಪ್ರಜ್ಞಾಪೂರಕವಾಗಿಯೇ ಈ ನೀತಿ-ನಿರೂಪಣೆಗಳನ್ನು ತನ್ನೊಳಗೆ ಅಳವಡಿಸಿಕೊಂಡು ಬಿಟ್ಟಿದ್ದಾಳೆ.

"ಅವನೊಬ್ಬ ಹೆಣ್ಣಿಗ, ಹೆಂಗಸಿನಂತೆ ಅಳ್ತಿಯಲ್ಲೋ"

"ನನ್ನ ಗಂಡ ಏನು ಬಳೆ ತೊಟ್ಟಿಲ್ಲ"

ಎಂಬಂತಹ ಪುರುಷವಾದಿ ನುಡಿಗಟ್ಟನ್ನು ಮಹಿಳೆಯರೂ ಎಗ್ಗಿಲ್ಲದೆ ಬಳಸುತ್ತಿರುತ್ತಾರೆ. ಅವರಿಗೆ ತಮ್ಮ ಭಾಷೆಯಲ್ಲಿ ನಮ್ಮನ್ನೇ ಕೀಳುಗಳೆವ ಅಂಶಗಳಿವೆ ಎಂಬ ಪ್ರಜ್ಞೆ ಮಹಿಳೆಯರಲ್ಲಿ ಇಲ್ಲ. ನಮ್ಮ ಸಮಾಜದಲ್ಲಿ ಈ ಬಗೆಯ ವೈದೃಶ್ಯಾತ್ಮಕ ಅಂಶಗಳನ್ನು ಕಾಣಬಹುದು.

ಬೈಗುಳದ ಸಂದರ್ಭದಲ್ಲಿ ಈ ಬಗೆಯ ವೈರುದ್ಯದ ಮಾತುಗಳು ಮಹಿಳೆಯ ಭಾಷೆ ಬಳಕೆಯೊಳಗೆ ಹೆಚ್ಚಾಗಿ ಕಂಡುಬರುತ್ತವೆ.

ತಾಯಿ ತನ್ನ ಮಗನನ್ನೆ ತಾನು ಬೈಯುವಂತಹ ಸಂದರ್ಭಗಳು

೧. ಮಿಂಡ್ರಿಗ್ ಹುಟ್ಟದವನು.

೨. ಕಳ್ ಸೂಳೆಮಗ

೩. ಎಷ್ಟ ಮಂದಿಗೆ ಹುಟ್ಟಿದಿಯ ಕಳ್ ಮುಂಡೆಮಗ ಇತ್ಯಾದಿ

ಮಹಿಳೆ ತನಗೆ ತಾನೆ ಬೈದುಕೊಳ್ಳುವ ಸಂದರ್ಭಗಳಲ್ಲಿ ಈ ಮಾದರಿಯ ಭಾಷೆ ಮಹಿಳೆಯ ಬಳಕೆಯ ಭಾಷೆಯಲ್ಲಿ ಕಂಡುಬರುತ್ತವೆ.

ಉದಾಹರಣೆ

- ನಾನೇನು ಕಡಿಮೆ ಸೂಳೆಯಲ್ಲ.
- ನನಗೆ ಸಿಟ್ಟ್ ಬಂತ್ ಅಂದ್ರ ಯಾರು ಮಾತ್ ಕೇಳು ಸೂಳೆಯಲ್ಲ.
- ನಾನು ಗನ ಸೊಕ್ಕಿನಸೂಳೆ
- ನನ್ನ ನಾಲಿಗೆ ಬಿದ್ದೋಗಲಿ
- ನನ್ನ ಕೈ ಸೇದೋಗಲಿ

ಹೀಗೆ ಪಾರಂಪರಿಕವಾಗಿ ಬಂದಿರೊ ಮಹಿಳೆಯ ಮೇಲೆ ಹೇರಲ್ಪಟ್ಟ ಈ ಬಗೆಯ ಸಂಗತಿಗಳ ಒಳಗಡೆ ಶತಮಾನಗಳಿಂದ ಬದುಕುತ್ತಿದ್ದಾರೆ. ಮಹಿಳೆ ತನ್ನ ವ್ಯಕ್ತಿತ್ವವನ್ನೇ ಕಳೆದುಕೊಂಡಿರುವುದು ಅರಿವಿಲ್ಲದಿರುವ ಪರಿಸ್ಥಿತಿ ಕಂಡುಬರುತ್ತದೆ. ಈ ಎಲ್ಲಾ ಅಂಶಗಳು ಭಾಷೆಯಲ್ಲಿ ಸಿಗುತ್ತವೆ.

ನಮ್ಮ ಸಮಾಜದಲ್ಲಿನ ಹೆಣ್ಣು ಮತ್ತು ಗಂಡುಗಳ ಬಗ್ಗೆ ಇರುವ ಕೆಲವು ಅಭಿಪ್ರಾಯಗಳು ಗೊತ್ತಾಗುತ್ತವೆ. ಅವರಿಗೆ ಸಮಾಜವು ಮೀರುವ ಹಲವು ನಿರ್ದೇಶನಗಳು ಹಾಗೂ ಅವರನ್ನು ಕುರಿತು ಸಮಾಜವು ವ್ಯಕ್ತಪಡಿಸುವ ನಿರ್ವಚನಗಳು ನಮ್ಮ ಭಾಷೆಯಲ್ಲಿ ಸಹಜವಾಗಿ ಕಾಣುತ್ತಿವೆ. ಸಮಾಜದ ಈ ಅಭಿಪ್ರಾಯ ನಿರ್ವಚನ ನಿರ್ದೇಶನಗಳನ್ನು ಹೆಣ್ಣು ಗಂಡುಗಳು ತಮ್ಮ ದೈನಂದಿನ ನಡಾವಳಿಗಳಲ್ಲಿ ಸ್ವೀಕರಿಸಿದ್ದಾರೆ. ಹಾಗೂ ತಮ್ಮದೇ ಆದ ಪಾತ್ರಗಳನ್ನು ನಿರ್ವಹಿಸುತ್ತಿದ್ದಾರೆ. ಅವರು ಬಳಸುವ ಭಾಷೆಯಲ್ಲಿ ಇವುಗಳು ಸ್ಪಷ್ಟವಾಗಿ ಕಂಡುಬರುತ್ತವೆ.

ಇಷ್ಟೆಲ್ಲ ಪಾರಂಪಾರಿಕವಾದ ನೀತಿನಿರ್ದೇಶನಗಳಿದ್ದರೂ ಮಹಿಳೆ ತನ್ನ ವ್ಯಕ್ತಿತ್ವವನ್ನು, ತನ್ನ ಅಭಿವ್ಯಕ್ತಿಯಲ್ಲಿ ಪ್ರಕಟಿಸುತ್ತಿರುತ್ತಾಳೆ. ಹೀಗಿದ್ದರೂ ಮಹಿಳೆ ತನ್ನ ಭಾಷೆಯೊಳಗೆ ಅನೇಕ ಪ್ರತಿರೋಧವನ್ನು ಒಡ್ಡುತ್ತಿದ್ದಾಳೆ. ಚುಚ್ಚುವಿಕೆ ಸುತ್ತಿ ಬಳಸಿ ಹಂಗಿಸುವ ಹೆಂಗಸರ ದಾಟಿ ಕೆಳದನಿಯಲ್ಲಿಯೇ ಪ್ರಶ್ನೆಗಳನ್ನು ಎಸೆಯುವ ಈ ನುಡಿವರಸೆ ಹೆಣ್ಣಿನ ರೂಢಿಯ ಮಾತಿನ ವರಸೆಯು ಹೌದು. ಸ್ಥಾಪಿತ ಭಾಷೆಗೆ ತತ್ವದ ಅರಿವನ್ನು ತರ್ಜುಮೆ ಮಾಡಲು ಆ ಪರಂಪರೆಯ ಒಪ್ಪಿತ ಮಾದರಿಗಳನ್ನು ಬುಡಮೇಲು ಮಾಡುತ್ತಿದ್ದಾರೆ. ಸಾಂಪ್ರದಾಯಿಕ ಚಿಂತನೆ, ನಂಬಿಕೆಗಳನ್ನು ಪಲ್ಲಟಗೊಳಿಸುವ ಮಾದರಿಯ ಭಾಷೆ ಬಳಕೆಯನ್ನು ಮಹಿಳೆಯಲ್ಲಿ ಕಂಡುಬರುತ್ತಿದೆ. ಪರಂಪರೆಯ ನೀತಿ ನಿರ್ದೇಶಕ ತತ್ವಗಳ ಫಲವಾಗಿ ಸಮಾಜದಲ್ಲಿನ ಹೆಣ್ಣು ಗಂಡುಗಳು ಅನುಭವಿಸುತ್ತಿರುವ ಪಾತ್ರಗಳು ಬದಲಾಗುತ್ತಿವೆ. ಆಸಮಾನತೆಯಿಂದ ಕೂಡಿರುವ ಸಮಾಜ ಆನಾರೋಗ್ಯದಿಂದ ಒಳಗೊಂಡಿರುವ ರೋಗಗ್ರಸ್ಥ ಗ್ರಹಿಕೆಗಳು ಮಹಿಳೆಯನ್ನು ದಮನಿತಳಾಗಿ ಮಾಡಿರುವ ಪುರುಷ ಪ್ರಧಾನ ನಂಬಿಕೆಗಳು ಸುಳ್ಳಾಗುತ್ತಿವೆ. ಸಮಾಜದ ನಿರ್ದೇಶನಗಳು, ನಿರ್ಬಂಧಗಳು ಭಾಷೆಯಲ್ಲಿ ಎಲ್ಲವೂ ಬಯಲಾಗಿವೆ. ಈ ಅಂಶಗಳನ್ನು ಗ್ರಹಿಸಿಕೊಂಡ ಮಹಿಳೆಯರು ಜಾಗೃತರಾಗಿದ್ದಾರೆ.

ಈ ಬಗೆಯ ಲಿಂಗ ಅಸಮಾನತೆಯನ್ನು ಒಳಗೊಂಡ ಪಾರಂಪರಿಕ ಸಮಾಜದ ನೀತಿ-ನಿರ್ದೇಶನ ತತ್ವಗಳಿಂದ ಹೆಚ್ಚು ದಮನಕ್ಕೆ ಒಳಾಗಾಗಿರುವಂತಹವಳು ಮಹಿಳೆಯೇ. ಅವಳ ಭಾಷೆ ಇದನ್ನು ತೋರಿಸಿಕೊಡುತ್ತದೆ. ಸಮಾಜ ಅವಳ ಕುರಿತಾದ ಧೋರಣೆಯೂ ಸಮಾಜದ ಹಲವು ನಿರೂಪಣೆಗಳಲ್ಲಿ ಕಂಡುಬರುತ್ತದೆ.

ಅಂದರೆ ಸಮಾಜದ ನಿರೂಪಣೆಯಲ್ಲಿಯೇ ಅಸಮಾನತೆ ಇದೆ. ಇದನ್ನು ಹೋಗಲಾಡಿಸಿದರೆ ಬಹುಶಃ ಮಹಿಳೆ ಹುಡುಕುತ್ತಿರುವ ತನ್ನತನ ಅಥವಾ ಸಮಾಜದಲ್ಲಿ ಸಮಾನತೆ ಸಿಗಬಹುದು ಜೊತೆಗೆ ಲಿಂಗತಟಸ್ಥವಾಗಿರುವ ಆರೋಗ್ಯಕರ ಭಾಷೆಯ ಬಳಕೆ ಅವಳದಾಗಬಹುದು.

**ಅಡಿಟಿಪ್ಪಣಿ**

೧. ಮಹಿಳೆ ಚರಿತ್ರೆ ಪುರಾಣ, ಡಾ। ರಾಮಲಿಂಗಪ್ಪ.ಟಿ., ಪು. ೬೩-೨೦೦೪

೨. ಹೆಣ್ಣು ಮತ್ತು ಭಾಷೆ (ಸಂ) ಎಚ್.ಎಸ್.ಶ್ರೀಮತಿ., ಪು.೧೧೫. ೨೦೦೭

೩. ನಾರೀ ನುಡಿ ವರಸೆಯ ಕಟ್ಟೋಣದತ್ತ-೫ ಬಿ.ಎನ್.ಸುಮಿತ್ರಾಬಾಯಿ., ಪ್ರಜಾವಾಣಿ ಸಾಹಿತ್ಯ ಪುರವಣಿ. ೭/೧೦/೧೨. ಪು.೮

೪. ನಾರೀ ನುಡಿವರಸೆಯ ಕಟ್ಬೋಣದತ್ತ-೫, ಬಿ.ಎನ್.ಸಮಿತ್ರಾಬಾಯಿ., ಪು.೮. ೦೭/೧೦/೨೦೧೨ ಪ್ರಜಾವಾಣಿ ಸಾಹಿತ್ಯ ಪುರವಣಿ

೫. ಹೆಣ್ಣು ಮತ್ತು ಭಾಷೆ, ಶ್ರೀಮತಿ ಎಚ್.ಎಸ್., ಪು.೧೧೬.೨೦೦೭

೬. ಭಾಷೆಯೊಂದಿಗೆ ಗುದ್ದಾಟ, ಮೀನಾ, ಪ್ರಜಾವಾಣಿ ಸಾಹಿತ್ಯ ಪುರವಣಿ, ೩/೬/೧೨. ಪು.೮

೭. ಮಹಿಳಾ ಕಥಾ, ಸಾಹಿತ್ಯ ತಾತ್ವಿಕ ಸ್ವರೂಪ, ಶಕೀಲಾ, ಪು ೧೦೪. ೨೦೦೮-೦೯

೮. ಸ್ತ್ರೀವಾದ ಅನ್ವಯಿಕತೆ, ಶ್ರೀಮತಿ ಎಚ್.ಎಸ್., ಪು.೩೭.೨೦೧೨

೯. ಸ್ತ್ರೀವಾದ ಅನ್ವಯಿಕತೆ, ಶ್ರೀಮತಿ ಎಚ್.ಎಸ್., ಪು.೩೮.೨೦೧೨

೧೦. ಮಾತು ಮಾತು ಮಾತು, ಚಿದನಾಂದ ಸಾಲಿ ಸಾಪ್ತಹಿಕ ಪುರವಣಿ, ಪು.೪.೨೭/೧/೧೨

೧೧. ಹೆಣ್ಣು ಮತ್ತು ಭಾಷೆ, ಶಿವಾನಂದ ಎಸ್.ವಿರಕ್ತ ಮಠ(ಸಂ) ಶ್ರೀಮತಿ ಎಚ್.ಎಸ್., ಪು.೧೧೭, ೨೦೦೭

೧೨. ಸ್ತ್ರೀವಾದ ತಾತ್ವಿಕತೆ, ಶ್ರೀಮತಿ ಎಚ್.ಎಸ್., ಪು.೪೨೭-೪೨೮, ೨೦೧೨

೧೩. ಮಹಿಳೆ ಶೋಷಣೆ- ಸವಾಲುಗಳು(ಸಂ)., ಡಾ.ವಿಜಯಶ್ರೀ ಸಬರದ, ಜನಪದ ಮಹಿಳೆ ಮತ್ತು ನೋವಿನ ನೆಲೆಗಳು ಡಾ.ಶೈಲಜ ಹೀರೆಮಠ. ಪು.೫೦, ೨೦೦೫

೧೪. ಹೆಣ್ಣು ಮತ್ತು ಭಾಷೆ: ಭಾಷಾ ಬಳಕೆಯಲ್ಲಿ ವ್ಯತ್ಯಾಸ ಡಾ.ಪಿ.ಮಹಾದೇವಯ್ಯ .ಪು.೧೪-೨೦೦೭

# ಅಧ್ಯಾಯ – ೪

## ಮಹಿಳೆಯ ಭಾಷಾ ಬಳಕೆ: ಮಾತಿನ ನೆಲೆ

೪.೧. ಸಾಮಾಜಿಕ ಸಂರಚನೆ ಹಿನ್ನೆಲೆಯಲ್ಲಿ ಭಿನ್ನ (ಜಾತಿ, ವರ್ಗ, ಶ್ರೇಣಿ, ಅಂತಸ್ತು)

೪.೨. ನಿಷೇಧ ನಿರ್ಬಂಧ ನೆಲೆಗಳು

೪.೩. ಮುಕ್ತತೆ ಮತ್ತು ಸ್ವತಂತ್ರತೆಯ ನೆಲೆಗಳು

# ಅಧ್ಯಾಯ – ೪

## ಮಹಿಳೆಯ ಭಾಷಾ ಬಳಕೆ: ಮಾತಿನ ನೆಲೆ

ಸಮಾಜದಲ್ಲಿ ಮಹಿಳೆ ಭಾಷೆಯನ್ನು ಬಳಸಬೇಕಾದರೆ ಹಲವಾರು ಸಮಸ್ಯೆಗಳು ಎದುರಾಗುತ್ತವೆ. ಜೊತೆಗೆ ಸಾಮಾಜಿಕವಾಗಿ ಮಾತಿನ ಬಳಕೆಗೆ ಕೆಲವು ತಾರತಮ್ಯತೆಗಳಿವೆ. ಹೆಣ್ಣು ಮತ್ತು ಗಂಡಿನ ಭಾಷೆಯ ರಾಚನಿಕ ಅಧ್ಯಯನ ಮಹತ್ತರವಾದದ್ದು. ಹೆಣ್ಣು ತಾನು ವಾಸಿಸುವ ಸಾಮಾಜಿಕ ಸಂದರ್ಭದಲ್ಲಿ ವ್ಯವಹಾರ ಮಾಡಬೇಕಾದರೆ ಭಾಷೆಯನ್ನು ಬಳಸಬೇಕಾಗುತ್ತದೆ. ಅಂತಹ ಸಂಬಂಧದಲ್ಲಿ ಲಿಂಗ, ಜಾತಿ, ವರ್ಗ, ಶ್ರೇಣೀಕರಣಗಳಿಗೆ ಆಧಾರವಾಗಿ ಹಲವು ಭಿನ್ನತೆಗಳು ಕಾಣಿಸಿಕೊಳ್ಳುತ್ತಿದೆ. ಈ ಭಿನ್ನತೆಗಳು ಬಳಕೆಯ ಭಾಷೆಯಲ್ಲಿ ಕಾಣಿಸಿಕೊಳುತ್ತಿವೆ. ಇದಕ್ಕೆ ಮುಖ್ಯವಾದ ಕಾರಣ ಸಾಮಾಜಿಕ ಸಂರಚನೆಯಾಗಿದೆ. ಒಂದೇ ಸಮಾಜದ ಒಳಗಡೆ ಒಂದೇ ಭಾಷೆಯನ್ನು ಮಾತಾಡುವಂತಹವರ ನಡುವೆ ಇರುವಂತಹ ಈ ಭಿನ್ನವಾದ ಭಾಷಾ ಬಳಕೆ ಇದೆ. ಸಮಾಜದ ನಿಯಂತ್ರಣ ಮತ್ತು ಸಮಾಜದ ಸಂರಚನೆಯಲ್ಲಿ ಇರುವಂತಹ ತಾರತಮ್ಯತೆಯ ಕಾರಣಕ್ಕಾಗಿ ಹೀಗಾಗುತ್ತಿದೆ. ಸಾಮಾಜಿಕ ಸಂರಚನೆಯಲ್ಲಾಗುವ ಬದಲಾವಣೆ ಭಾಷಿಕ ರಚನೆಯಲ್ಲಿ ಕಾಣಿಸಿಕೊಳ್ಳುತ್ತದೆ.

ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ಹೆಣ್ಣಿನ ಮಾತಿಗೆ ಬಹಳ ಸೀಮಿತವಾದ ಅವಕಾಶಗಳಿವೆ. ಹಾಗಾಗಿ ಮಹಿಳೆ ಭಾಷಾ ಬಳಕೆಯ ನೆಲೆಗಳು ಸೀಮಿತವಾಗಿವೆ. ಸಾಮಾಜಿಕ ರಚನೆಯಲ್ಲಿ ಕುಟುಂಬದ ಪಾತ್ರ ಮಹತ್ತರವಾದದ್ದು. ಅಂತಹ ಕುಟುಂಬದಲ್ಲಿ ಹೆಣ್ಣಿನ ಮಾತು ಲೆಕ್ಕಕ್ಕೆ ಬಾರದಾಗಿದೆ. ಅಂದರೆ ಕುಟುಂಬದೊಳಗೆ ಹೆಣ್ಣಿನ ಮಾತಿಗೆ ಮನ್ನಣೆ ಇಲ್ಲ. ಆಕೆ ಇನ್ನೊಬ್ಬರ ಮಾತಿನ ನೆರಳಿನಲ್ಲಿ ಬದುಕುತ್ತಿದ್ದಾಳೆ. ಕುಟುಂಬದಲ್ಲಿನ ವ್ಯವಹಾರಗಳನ್ನು ನೋಡಿಕೊಳ್ಳಲು, ನಿರ್ಧಾರಗಳನ್ನು ತೆಗೆದುಕೊಳ್ಳಲು, ಆದೇಶಗಳನ್ನು ಹೊರಡಿಸುವುದು ಪುರುಷನ ಕೆಲಸವೇ ಆಗಿದೆ. ಇವು ಪುರುಷನ ಸಂಭಾಷಣೆ ಮತ್ತು ಮಾತುಕತೆಗಳ ಸೂಚಕಗಳಾಗಿ ಪರಿಗಣಿಸಲಾಗಿದೆ.

ಸಂಭಾಷಣೆಯು ಹೆಣ್ಣು–ಹೆಣ್ಣು, ಗಂಡು–ಗಂಡು ಅಥವಾ ಹೆಣ್ಣು–ಗಂಡುಗಳಲ್ಲಿ ನಡೆಯುವಾಗ ಬೇರೆ ಬೇರೆ ಸ್ವಭಾವಗಳನ್ನೇ ತೋರುತ್ತದೆ. ವ್ಯಕ್ತಿ ವ್ಯಕ್ತಿಗಳಲ್ಲಿ ಅಥವಾ ಸಮೂಹಗಳಲ್ಲಿ ನಡೆಯುವ

ಸಂಭಾಷಣೆಗಳು ವಿಶಿಷ್ಟ ಲಕ್ಷಣಗಳನ್ನು ಪಡೆಯುತ್ತವೆ. ಈ ಅಧ್ಯಾಯವನ್ನು ಜಾತಿ, ವರ್ಗ, ಶ್ರೇಣಿ ಮುಂತಾದ ಅಂಶಗಳನ್ನು ಇಟ್ಟುಕೊಂಡು ಅಧ್ಯಯನ ಮಾಡಲಾಗಿದೆ.

ಇದುವರೆಗೂ ಭಾಷೆಯ ಬಳಕೆಯನ್ನು ಗಮನಿಸಿರುವಂತೆ ಬಳಕೆಯ ಭಾಷೆ ಹಲವು ನೆಲೆಗಳಲ್ಲಿ ಹರಡಿಕೊಂಡಿದೆ. ಅಧಿಕಾರಸ್ಥ, ಅಧೀನತೆಯ ಮೌನ, ಒಪ್ಪಿಕೊಳ್ಳುವ, ಒಪ್ಪಿಸುವ ಮನೋಭಾವ ಹೀಗೆ ಹಲವು ನೆಲೆಯಲ್ಲಿ ಹರಡಿಕೊಂಡಿದೆ. ಸಾಮಾಜಿಕ ಸಂವಹನಕ್ಕೆ ವಿವಿಧ ಆಕರಗಳನ್ನು ರೂಪಿಸಿಕೊಳ್ಳಲಾಗಿದೆ. ಹಾಗೆಯೇ ಸಂವಹನದಲ್ಲಿ ಪಾಲ್ಗೊಳ್ಳುವ ಸಾಮಾಜಿಕರ ವಿವಿಧ ಸ್ಥಾನಮಾನ ಲಿಂಗ, ವಯಸ್ಸು, ಜಾತಿ, ವರ್ಗ, ಶ್ರೇಣಿ ಮುಂತಾದ ಸ್ಥಳಗಳಿಗೆ ಅನುಗುಣವಾಗಿ ಯಾರಿಗೆ ಯಾವ ಮಾದರಿ ಎಂಬ ಒಂದು ಪಾರಂಪರಿಕವಾಗಿ ಬೆಳೆದುಬಂದಿದೆ. ಅಭಿಪ್ರಾಯ, ಕಟ್ಟು, ನಿಯಮ ನಿರ್ಬಂಧನೆಗಳು ಸಹ ರೂಪಗೊಂಡಿವೆ. ಆರ್ಥಿಕತೆ ರಾಜಕೀಯ ಕಾರಣಗಳಿಂದಾಗಿ ಲಭಿಸುವ ಸಾಮಾಜಿಕ ಸ್ಥಾನಮಾನಗಳಂತಹ ಅಂಶಗಳು ನಿರ್ಧೀಷ್ಟವಾಗಿ ವರ್ಗೀಕೃತವಾಗಿವೆ. ವ್ಯಕ್ತಿ, ವರ್ಗ ಆಧಾರಿತವಾಗಿ ವ್ಯಕ್ತಿಗಳು ಒಂದು ಸ್ಥಿತಿಯಿಂದ ಮತ್ತೊಂದು ಸ್ಥಿತಿಗೆ ಬದಲಾಗುವ ಅವಕಾಶಗಳಿವೆ. ಆದರೆ ಈ ಸಮಾಜದಲ್ಲಿ ಬಹಳ ಮುಖ್ಯವಾಗಿ ಜಾತಿ ಮತ್ತು ಲಿಂಗಾಧಾರಿತ ಸ್ಥಾನಮಾನಗಳಿಗೆ ಒಂದು ಬಗೆಯ ಸ್ಥಿರಗೊಂಡ ಅಥವಾ ಜಡವಾದ ಅವಸ್ಥೆಯಿದೆ. ಇವರು ಬಳಸಬೇಕಾದ ಸಂವಹನ ಮಾದರಿಗಳು ಸಂವಹನ ವರ್ತನೆಗಳೂ ಸಾಮಾಜಿಕವಾಗಿ ನಿರ್ಧರಿಸಲ್ಪಟ್ಟಿವೆ. ಇವುಗಳ ಉಲ್ಲಂಘನೆಯಾದಲ್ಲಿ ಅದೊಂದು ಸಾಮಾಜಿಕ ನೈತಿಕ ಅಪರಾಧವಾಗಿ ಪರಿಗಣಿಸಲ್ಪಡುತ್ತದೆ.

ಉದಾ: ಶ್ರೇಣಿಯಲ್ಲಿ ಮೇಲಿನ ಜಾತಿಯ ಹಿರಿ-ಕಿರಿಯರಿಗೆ ಕೆಳ ಜಾತಿಯ ಹಿರಿ-ಕಿರಿಯರೆಲ್ಲರೂ ಭಾಷಿಕ ಸಂವಾಹನದಲ್ಲಿ ಬಹುವಚನ ರೂಪಗಳನ್ನು ಮಾತ್ರ ಬಳಸಬೇಕು. ಅದೇ ಮೇಲಿನ ಜಾತಿಯ ಕಿರಿಯರೂ ಕೆಳಜಾತಿಯ ಹಿರಿಯರಿಗೂ ಏಕವಚನದಲ್ಲಿ ಸಂಬೋಧಿಸುತ್ತಾರೆ. ವಯಸ್ಸಿನಿಂದ ಕಿರಿಯ ವ್ಯಕ್ತಿ ಹಿರಿಯರಿಗೆ ದೊರೆತಿರುವ ಸ್ಥಾನಮಾಗಳನ್ನು ಅಪೇಕ್ಷಿಸಿದ್ದಲ್ಲಿ ಕನಿಷ್ಟ ವಯಸ್ಕನಾದ ನಂತರ ಆ ಗೌರವಗಳನ್ನು ಪಡೆಯಬಲ್ಲ.

ಸಾಮಾಜಿಕ ಸಂವಹನಕ್ಕಾಗಿ ಭಾಷೆ, ನಡವಳಿಕೆ, ಉಡುಪು, ಆಂಗಿಕ ಅಭಿವ್ಯಕ್ತಿ ಮುಂತಾದ ಸಂವಹನ ಆಕರಗಳನ್ನು ಸಮಾಜ ರೂಪಿಸಿದೆ. ಈ ಆಕರಗಳ ಮೂಲಕ ಸಂವಹನ ನಡೆಸಬೇಕಾದರೆ ಲಿಂಗಾಧಾರಿತವಾಗಿ ವಿವಿಧ ಮಾದರಿಗಳನ್ನು ವಿವಿಧ ಆಕರಗಳಲ್ಲಿ ರೂಪಿಸಿದೆ. ಇವುಗಳಲ್ಲಿ ಕೆಲವು ಜೈವಿಕ ಭಿನ್ನತೆಯ ಕಾರಣಕ್ಕಾಗಿ ಭಿನ್ನವಾಗಿ ರೂಪಿತವಾಗಿದ್ದರೆ, ಕೆಲವು ಸಾಮಾಜಿಕ ಸ್ಥಾನಮಾನ ಸಾಮಾಜಿಕ ಸಂರಚನೆಯ ಸ್ವರೂಪವನ್ನು ಆಧರಿಸಿ ರೂಪುಗೊಂಡಿವೆ.

ಜಾತಿ, ವರ್ಣ ವರ್ಗಗಳೆಂಬ ಭೇದಗಳು ಮಾನವರು ನಿರ್ಮಿಸಿದ ಸಮಾಜ ರಚನೆಯಲ್ಲಿ ಕೃತಕ ನಿರ್ಮಾಣಗಳು. ಹೀಗಾಗಿ ಭಾಷೆಯೂ ಬೇರೆ ಬೇರೆಯಾಗಿ ಬಳಕೆಗೊಳ್ಳುತ್ತಿದೆ. ಏಕೆಂದರೆ

ಸಮಾಜದಲ್ಲಿ ಕನ್ನಡ ಭಾಷೆ. ಭಾಷೆ ಒಳಗಡೆ ಈ ಸಾಮಾಜಿಕ ತಾರತಮ್ಯತೆಯ ಅಂಶಗಳು ಒಳಗೊಂಡಿವೆ. ಹೆಂಗಸರ ಭಾಷೆ ಎಂಬುದು ಒಂದು ಬಗೆ. ಅದರಲ್ಲಿ ಹಲವು ಬಗೆಗಳಿವೆ. ಹೆಂಗಸರಲ್ಲೇ ಇರುವ ಸಾಮಾಜಿಕ ಒಳಗುಂಪುಗಳ ಚಹರೆಗಳಿಗೆ ತಕ್ಕಂತೆ ಈ ಬಗೆಯ ಬೇರೆ ಬೇರೆ ಬಗೆಗಳು ಮೈದಳೆದಿವೆ.

ಭಾಷೆ ಮತ್ತು ಸಮಾಜಗಳನ್ನು ಬೇರೆ ಬೇರೆಯಾಗಿ ಹಾಗೂ ಸ್ಥಿರವಾಗಿ ಇರುವ ವ್ಯವಸ್ಥೆಗಳೆಂದು ತಿಳಿಯಬಹುದು. ಇವೆರಡೂ ಪ್ರತಿದಿನ ಹೊಸದಾಗಿ ರಚನೆಯಾಗುವುದು. ಒಂದು ಇನ್ನೊಂದರೊಡನೆ ಸಂಬಂಧ ಹೊಂದಿದೆ ಎಂದು, ಒಂದು ಇನ್ನೊಂದನ್ನು ಬದಲಿಸಬಲ್ಲದು ಎಂಬುದು ಸತ್ಯ. ನಮ್ಮ ನಿಲುವನ್ನು ಮಂಡಿಸಲು ವಿಷಯಗಳ ಹರಿವನ್ನು ನಿಯಂತ್ರಿಸಲು ಭಾಷೆ ನೆರವಾಗುತ್ತದೆ. ಧ್ವನಿಯ ಏರಿಳಿತ, ಶ್ರುತಿ, ಪದಗಳ ಆಯ್ಕೆ, ಉಚ್ಚಾರಣೆಗಳು, ವ್ಯಾಕರಣ ನಿಯಮಗಳು–ಇವೆಲ್ಲ ಮಾತಾಡುತ್ತಿರುವವರು ತಮ್ಮನ್ನು ತಾವು ಮಂಡಿಸಿಕೊಳ್ಳುವ ಬಗೆಯಲ್ಲಿ ಅಡಕಗೊಂಡ ಸಾಮಾಜಿಕ ಸಂರಚನೆ ನಿಯಮಗಳಲ್ಲಿ ಇವೆ.

**೪.೧. ಸಾಮಾಜಿಕ ಸಂರಚನೆ ಹಿನ್ನೆಲೆಯಲ್ಲಿ ಭಿನ್ನತೆ (ಜಾತಿ, ವರ್ಗ, ಶ್ರೇಣಿ, ಅಂತಸ್ತು)**

ಮಹಿಳೆ, ಹೆಣ್ಣು, ಹೆಂಗಸು, ಸ್ತ್ರೀ ಈ ಪದಗಳ ಕುರಿತಂತೆ ಈಗಾಗಲೇ ಪ್ರಕಟಗೊಂಡ ನಿಘಂಟು ವಿಶ್ವಕೋಶ ಪಾರಿಭಾಷಿಕ ಪದಕೋಶದಲ್ಲಿ ಭಿನ್ನ ಅರ್ಥಗಳಿವೆ. ಅದರಲ್ಲಿಯೂ ಗೊಂದಲಗಳಿವೆ. ಅವುಗಳನ್ನು ಹೀಗೆ ಅರ್ಥೈಸಬಹುದು.

ಕನ್ನಡದ 'ಮಹಿಳೆ' ಪದಕ್ಕೆ ಇಂಗ್ಲೀಷನಲ್ಲಿ Women Lady ಎನ್ನುವ ಪದಗಳನ್ನು ಬಳಸಲಾಗುತ್ತದೆ. ಮೈಸೂರು ವಿಶ್ವವಿದ್ಯಾಲಯ ಪ್ರಸಾರಾಂಗದಿಂದ ಪ್ರಕಟವಾಗಿರುವ ಇಂಗೀಷ್ ಕನ್ನಡ ನಿಘಂಟುವಿನಲ್ಲಿ Womanಗೆ ಮಹಿಳೆ, ವನಿತೆ, ಸಾಮಾನ್ಯ ಸ್ತ್ರೀ, ಸ್ತ್ರೀಜಾತಿ ಯಾವುದೇ ಹೆಣ್ಣುಮಗಳು, ಸಾಮಾನ್ಯ How does differ from man ಎಂದರೆ ಮಹಿಳೆ ಎಂದು ವಿವರಿಸಿದ್ದಾರೆ. ಸರ್ವೇಸಾಮಾನ್ಯವಾಗಿ ಹೆಣ್ಣು ಎಂದರೆ ಗಂಡಿಗಿಂತ ಹೇಗೆ ಭಿನ್ನಳು ಎಂಬುದಾಗಿ ವಿವರಿಸುವರು ಎಂದರೆ ಸಂಭೋಗದಲ್ಲಿನ ಸ್ತ್ರೀಸಂಗಾತಿ, ಕೆಲಸದವಳು, ಕಸಮುಸರೆಯ ಹೆಂಗಸು, ಸ್ತ್ರೀತ್ವ ಹೆಂಗಸದ್ದೆಂದು ರೂಢಿಯಲ್ಲಿ ಭಾವಿಸಿರುವ ಅತೀ ಹೆಚ್ಚು ಭಾವನಾಜೀವಿ ಹೀಗೆ ಹೆಂಗಸು ಮುಂತಾದ ರೂಢಿಗತವಾದ ಅರ್ಥದಲ್ಲಿ ಬಳಸುತ್ತಾರೆ. ಎಫ್.ಕಿಟೆಲ್ ಅವರ ಕನ್ನಡ–ಇಂಗ್ಲೀಷ್ ಡಿಕ್ಷನರಿ(AES ೨೮.೨೦)ಯಲ್ಲಿ ಮಹಿಳೆಗೆ mahile A woman ಎಂದು ದಾಖಲಾಗಿದೆ. ಪ್ರೊ.ವೆಂಕಟಸುಬ್ಬಯ್ಯ ಅವರ ಕನ್ನಡ ಇಂಗ್ಲೀಷ್ ಡಿಕ್ಷನರಿಯಲ್ಲಿ ಮಹಿಳೆಗೆ (ಮಹಿಳಾ)(ನಾ) ಹೆಂಗಸು ಸ್ತ್ರೀ (ಟಿ) woman,lady ಎಂದು ಹೇಳಲಾಗಿದೆ. H.W Foler ಅವರ ಸಂಪಾದಕತ್ವದ The Oxford Dictionary ಯಲ್ಲಿ Women/Women-Aadult human Female The Female sex, any or aver-

age woman, wife or Female sexval partner A Female domestic help emotions or character. stics traditionally associated with women (p.p.1409)ಎಂದು ನಮೂದಿಸಲಾಗಿದೆ.

ಸಿಮೋನ್ ದ ಬೂವಾ ಅವರ ಪ್ರಕಾರ ಹೆಣ್ಣು-ಗಂಡುಗಳ ನಡುವೆ ವಿಕಾಸದ ನೆಲೆಯಲ್ಲಿಯೆ ಒಂದು ನೈಸರ್ಗಿಕ ತಾರತಮ್ಯವಿದೆ ಎಂಬ ವಾದವನ್ನು ನಿರಾಕರಿಸುವ ಆಕೆ "ಹೆಣ್ಣಾಗಿ ಯಾರೂ ಹುಟ್ಟುವುದಿಲ್ಲ. ಅವಳನ್ನು ಸಮಾಜ ಮತ್ತು ಸಂಸ್ಕೃತಿ ಸಂರಚಿಸುತ್ತದೆ ಅಥವಾ ಕಟ್ಟುತ್ತದೆ"[೧](She Is not Born But she is made) ಎನ್ನುತ್ತಾಳೆ. ಅಂದರೆ ಹೆಣ್ಣು ಎಂಬ ಪರಿಕಲ್ಪನೆ ಜೈವಿಕವಾಗಿ ಹುಟ್ಟುವುದಿಲ್ಲ. ಸಮಾಜ ರೂಪಿಸಿದ ಪರಿಕಲ್ಪನೆ, ಅವಳಿಗೆ ಆರೋಪಿಸಿರುವ ಗುಣಗಳು ಸಮಾಜ ಹೇರಲ್ಪಟ್ಟಿದ್ದು ಎಂದು ಹೇಳುತ್ತಾಳೆ. ಇಲ್ಲಿಯೂ ಮಹಿಳೆಯನ್ನು ಜೈವಿಕ ಸ್ಥಿತಿ ಅಂತ ನಿರ್ವಚಿಸದೆ ಅದು ಒಂದು ಸಾಮಾಜಿಕ ಸ್ಥಿತಿ ಅಂತ ಪರಿಭಾವಿಸಬಹುದು.

**ಜಾತಿ, ಶ್ರೇಣೀಕರಣ ಪರಿಕಲ್ಪನೆ**

ಈ ಪರಿಕಲ್ಪನೆಯಲ್ಲಿ ಎರಡು ಪದಗಳಿವೆ. ಒಂದು ಜಾತಿ ಮತ್ತೊಂದು ಶ್ರೇಣೀಕರಣ ಜಾತಿ ಎನ್ನುವ ಪದವನ್ನು ಇಂಗ್ಲೀಷನ'Caste'ಎನ್ನುವ ಪದಕ್ಕೆ ಸಂವಾದಿಯಾಗಿ ಬಳಸಲಾಗುತ್ತಲಿದೆ. 'Caste' ಪದವು ಸ್ಪ್ಯಾನಿಷ್ ಮತ್ತು ಪೋರ್ಚುಗೀಸ್ ಭಾಷೆಯಿಂದ ನಿಷ್ಪನ್ನಗೊಂಡಿದೆ. ಅದರ ಪ್ರಕಾರ Caste ಅಂದರೆ ವಂಶ ಅಥವಾ ಜನಾಂಗ ಎಂದರ್ಥ. ಲ್ಯಾಟಿನ್ ಪದವಾದ Caste ಸಹ ಬಳಕೆಯಲ್ಲಿದೆ. ಅದರ ಅರ್ಥ 'ಶುದ್ಧ' ಎಂದು. ಆದರೆ ಭಾರತದಲ್ಲಿ ಜಾತಿ ಪದದ ಬಳಕೆ ಪೋರ್ಚುಗೀಸ್ ಅರ್ಥವನ್ನು ಪ್ರತಿನಿಧಿಸುತ್ತದೆ.[೨] Hirarchy ಎನ್ನುವ ಇಂಗ್ಲಿಷ್ ಪದಕ್ಕೆ ಸಂವಾದಿಯಾಗಿ ಕನ್ನಡದಲ್ಲಿ ಶ್ರೇಣಿಕರಣ ಎನ್ನುವ ಪದವನ್ನು ಬಳಸಲಾಗುತ್ತದೆ. ಶ್ರೇಣಿಗರಣ ಎಂದರೆ "ಕ್ರಮಗತವಾಗಿ ಸ್ಥಾನ-ಮಾನಗಳು ನಿಗದಿಯಾಗಿರುತ್ತವೆ."[೩]

ಈ ಎರಡು ಪದಗಳನ್ನು ಸಂಯೋಜಿಸಿ 'Caste Hierachy' ಎಂಬ ಇಂಗ್ಲಿಷ್ ಪದಕ್ಕೆ ಸಮಾನಾರ್ಥ ಪದವಾಗಿ 'ಜಾತಿ ಶ್ರೇಣಿಕರಣ' ಎಂಬ ಕನ್ನಡ ಪದವನ್ನು ಬಳಸಲಾಗುತ್ತದೆ. ಹೀಗೆಂದರೆ ಹುಟ್ಟು ಆ ಜನಾಂಗದವರ ಬದುಕು ಕ್ರಮಾಗತವಾಗಿದೆ. ಅಂದರೆ ಇಳಿಕೆಯ ಕ್ರಮದಲ್ಲಿದೆ. ಲಂಬಾತ್ಮಕವಾಗಿದೆ. ತಾನು ಮೇಲು-ಉಳಿದವರು ಕೀಳು ಎಂಬ ಮನೋಬಾವ ಅಧಿಕವಾಗಿದೆ ಎಂದು ಅರ್ಥೈಸಬಹುದು. ಇವುಗಳ ಕುರಿತು ದಾಖಲೆಗಳು ಗೊಂದಲಗಳಿಂದ ಕೂಡಿವೆ.

ಮೈಸೂರು ವಿ.ವಿ ಪ್ರಸಾರಾಂಗದಿಂದ ಪ್ರಕಟವಾಗಿರುವ ಇಂಗ್ಲಿಷ-ಕನ್ನಡ ನಿಘಂಟುವಿನಲ್ಲಿ 'Caste' ಕಾಸ್ಟ್ (ನಾ) (ಭಾರತದಲ್ಲಿ ಜಾತಿ, ಕೋಮು, ವರ್ಣ, ಕಡೆಗಳಲ್ಲಿ ಅನುವಂಶಿಕವೂ, ಇತರರೊಡನೆ ಬೇರೆಯಾದ ಅದೆ ಪಂಗಡ, ಗುಂಪು; ಪ್ರತ್ಯೇಕ ಪಂಗಡ ಪದ್ಧತಿ; ಜಾತಿ ವ್ಯವಸ್ಥೆ;

ಜಾತಿ ಯಿಂದ ಬರುವ ಸ್ಥಾನಮಾನ ಪ್ರತಿಷ್ಠೆ ಮುಂತಾದ ರೂಢಿಗತವಾದ ಅರ್ಥದಲ್ಲಿ ಬಳಕೆಯಲ್ಲಿದೆ. ಎಫ್. ಕಿಟೆಲ್ ಅವರ ಕನ್ನಡ-ಇಂಗ್ಲಿಷ್ ಡಿಕ್ಷನರಿಯಲ್ಲಿ ಜಾತಿಗೆ-ಜಾಜಿ, Birth, Production, ಹುಟ್ಟು ಸಂತತಿ ಎಂದು ದಾಖಲಾಗಿದೆ. ಪ್ರೊ. ವೆಂಕಟಸುಬ್ಬಯ್ಯ ಅವರ ಕನ್ನಡ-ಇಂಗ್ಲಿಷ್ ಡಿಕ್ಷನರಿಯಲ್ಲಿ ಜಾತಿ(ಸಂ)(ನಂ)-ಹುಟ್ಟು, ಜನನ, ಹುಟ್ಟಿದ ಕುಲ, ವಂಶ, ಜಾತಿ ಚತುರ್ವರ್ಣ ಶ್ರೇಣೀ (ಸಂ)(ನಾ) ಪಂಕ್ತಿ, ಸಾಲು ಗುಂಪುಗಳ ಸಮೂಹ ಎಂಬ ರೂಪ ಭೇದಗಳನ್ನು ನೀಡಲಾಗಿದೆ. ಪ್ರೂ.ಎಲ್.ಎಸ್. ಶೇಷಗಿರಿರಾವ್ ಅವರ ಕನ್ನಡ-ಕನ್ನಡ ಇಂಗ್ಲೀಷ್ ನಿಘಂಟುವಿನಲ್ಲಿ ಜಾತಿ (ನಾ-ಹಿಂದೂಗಳ ನಾಲ್ಕು ಮುಖ್ಯ ಕುಲಗಳಲ್ಲಿ ಒಂದು ಹುಟ್ಟಿದ ವಂಶ ಎಂಬ ಅರ್ಥ ಕೊಡಲಾಗಿದೆ. ಜೊತೆಗೆ ಜಾತಿ ಪದ್ಧತಿ(ನಾ)ಯನ್ನು-ಜಾತಿಗಳಾಗಿ ವರ್ಗೀಕರಿಸುವ ಪದ್ಧತಿ ಎಂದು ಶ್ರೇಣೀಕರಣವನ್ನು ಮೆಟ್ಟಿಲು ಮೆಟ್ಟಲಾಗಿ ಜೋಡಣೆ ಹಂತಗಳಾಗಿ ವಿಂಗಡಣೆ ಎಂಬ ಅರ್ಥಗಳನ್ನು ಕೊಡಲಾಗಿದೆ. ಬಿ.ಎಸ್ ಚಂದ್ರಶೇರ್ ಅವರ ಸಮಾಜ ವಿಜ್ಞಾನಗಳ ಪಾರಿಭಾಷಿಕ ಪದಕೋಶದಲ್ಲಿ Cast ಜಾತಿ ಸದಸ್ಯರ ಸ್ಥಾನಮಾನ ಉದ್ಯೋಗ ವಾಸ್ತವ್ಯದ ಜಾಗ, ಸಾಮಾಜಿಕ ಸಂಬಂಧ ಇವೆಲ್ಲವುಗಳನ್ನು ವಂಶ ಪಾರಂಪರಿಕವಾಗಿ ಅಥವಾ ಹುಟ್ಟಿನಿಂದ ನಿರ್ಧರಿಸುವ ಮುಚ್ಚಿದ ಸಾಮಾಜಿಕ ವರ್ಗ ಎಂದು ಹೇಳಾಲಾಗಿದೆ. Caste Hirachyಯನ್ನು ಜಾತಿ ಸ್ತರವಿನ್ಯಾಸ ಜಾತಿ ಏಣಿ-ಶ್ರೇಣಿ ಜಾತಿ ವ್ಯವಸ್ಥೆಯಲ್ಲಿ ಕಂಡುಬರುವ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರ ಎಂಬ ಲಂಬಾತ್ಮಕ ಸ್ಥಾನಭೇದ ಎಂದು ಅರ್ಥೈಸಲಾಗಿದೆ.

ಊ. W. Fowler The Oxeford Dictionary Caste any of the hindu hereditary clases whoses members have no Social Contact With Other Classes am more or less exlcusiye social Class system of such classes Hirarchy-a system in wich gradeor classes of status or authority are rank one obove the others the hirarchial sytem each of the three division Of angles ಎಂದು ನಮೂದಿಸಲಾಗಿದೆ.

"ಶೂದ್ರ ಸಮಸ್ಯೆ...... ಹಿಂದೂ ಆರ್ಯರ ಸಾಮಾಜಿಕ ವ್ಯವಸ್ಥೆ ಚಾತುರ್ವರ್ಣ ತತ್ವದ ಮೇಲೆ ಆಧಾರಿತವಾಗಿದೆ. ಚಾತುರ್ವರ್ಣ ಎಂದರೆ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರ ಎಂಬ ಸಾಮಾಜಿಕ ವಿಭಜನೆ ಎನ್ನುವ ಸಾಮಾನ್ಯ ಅಭಿಪ್ರಾಯ ಇದೆ. ಇದು ಶೂದ್ರ ಸಮಸ್ಯೆಯ ನಿಜವಾದ ಸ್ವರೂಪವನ್ನಾಗಲಿ ಅಥವಾ ಅದರ ವಿಸ್ತಾರವನ್ನಾಗಲಿ ತೋರಿಸುವುದಿಲ್ಲ. ಸಮಾಜವನ್ನು ಕೇವಲ ನಾಲ್ಕು ವರ್ಣಗಳನ್ನಾಗಿ ವಿಭಜಿಸುವುದೇ ಆಗಿದ್ದರೆ ಚಾತುರ್ವರ್ಣ ತೀರಾ ಸಾಮಾನ್ಯ ತತ್ವವಾಗಿ ಬಿಡುತ್ತಿತ್ತು. ಆದ್ದರಿಂದ ಚಾತುರ್ವರ್ಣ ತತ್ವ ಇದಕ್ಕಿಂತಲೂ ಹೆಚ್ಚಿನದನ್ನು ಒಳಗೊಂಡಿದೆ.

ಸಮಾಜವನ್ನು ನಾಲ್ಕು ವರ್ಗಗಳನ್ನಾಗಿ ವಿಂಗಡಿಸುವುದರ ಜೊತೆಗೆ ಈ ನಾಲ್ಕು ವರ್ಣಗಳ ನಡುವಣ ಸಾಂಘಿಕ ಜೀವನದ ನೀತಿಯನ್ನು ನಿರ್ಧರಿಸಲು ಶ್ರೇಣೀಕೃತ ಅಸಮಾನತೆಯ ತತ್ವವಾಗಿ ಮಾಡುವ ತನಕ ಈ ತತ್ವ ಹೋಗುತ್ತದೆ. ಮತ್ತು ಶ್ರೇಣೀಕೃತ ಅಸಮಾನತೆಯ ಈ ವ್ಯವಸ್ಥೆ ಕೇವಲ ಕಾಲ್ಪನಿಕವಲ್ಲ. ಅದು ಶಾಸನೀಯ, ದಂಡನೀಯ. ಚಾತುವರ್ಣ ಪದ್ಧತಿಯಲ್ಲಿ ಶೂದ್ರರನ್ನು ಕೆಳದರ್ಜೆಯಲ್ಲಿ ಇಡುವುದಷ್ಟೆಯಲ್ಲದೆ, ಧರ್ಮ ನಿರ್ಧರಿಸಿರುವ ಸ್ಥಿತಿಯಿಂದ ಮೇಲೇಳದಂತೆ ಅವರನ್ನು ತಡೆಗಟ್ಟಲೂ ಅಸಂಖ್ಯಾತ ಅಪರಾಧಗಳಿಗೂ, ಅನರ್ಹತೆಗಳಿಗೂ ಅವರನ್ನು ಅಧಿನಗೋಳಿಸಲಾಗಿದೆ"[೪] ಇದು ವರ್ಣಗಳ ನಡುವೆ ಲಂಭಾತ್ಮಕ ಅಂತರವನ್ನು ಕಾಯ್ದಿರಿಸಿರುವುದನ್ನು ಖಚಿತಪಡಿಸಿತು ಜೊತೆಗೆ ನಂತರ ಭಾರತದಲ್ಲಿ ಬಂದ ಜಾತಿ ವ್ಯವಸ್ಥೆಗಳಿಗೂ ಶ್ರೇಣೀಕರಣ ವ್ಯವಸ್ಥೆಯನ್ನು ಆವರಿಸಿತು ಎನ್ನಬಹುದು.

ಭಾರತೀಯ ಜಾತಿ ಪದ್ಧತಿಯಂತಹ ಶ್ರೇಣಿಕೃತ ವ್ಯವಸ್ಥೆಯಲ್ಲಿ ಮಹಿಳೆ ಒಂದು ಸಾಮಾಜಿಕ ಘಟಕವಾಗಿಲ್ಲ. ಅತ್ಯಂತ ಶ್ರೇಷ್ಠ ಮಹಿಳೆ, ಅತೀ ಶ್ರೇಷ್ಠ ಮಹಿಳೆ, ಕನಿಷ್ಠ ಮಹಿಳೆ, ಅತೀ ಕನಿಷ್ಠ ಮಹಿಳೆ, ಅತ್ಯಂತ ಕನಿಷ್ಠ ಮಹಿಳೆ ಎನ್ನುವ ವರ್ಗೀಕರಣವಿದೆ. ಮಹಿಳೆಯಾಗಿಯೂ ಪರಿಭಾವಿಸಿಕೊಂಡು ಮಾತಿನ ನೆಲೆಯಲ್ಲಿ ಮಹಿಳೆಯ ಸ್ಥಾನಮಾನವನ್ನು ಅರ್ಥೈಸಿಕೊಳ್ಳಲು ಅನುವಾಗುವಂತೆ ಪ್ರಸ್ತುತ ಅಧ್ಯಾಯವನ್ನು ರೂಪಿಸಿಲಾಗಿದೆ.

ಭಾರತ ಹಲವು ಜಾತಿ, ಧರ್ಮ, ಭಾಷೆ, ಸಂಸ್ಕೃತಿ, ಸಮುದಾಯಗಳಿಂದ ಕೂಡಿದೆ. ತನ್ನದೆ ಆದ ಪ್ರಾಚೀನತೆಯನ್ನು ಒಳಗೊಂಡಿದೆ. ಅದರಲ್ಲಿ ಮಹಿಳೆಯರ ಬದುಕು ಪುರುಷ ಸಂಸ್ಕೃತಿಯ ವರ್ಗ, ಜಾತಿ, ವರ್ಣವ್ಯವಸ್ಥೆಯ ಅಧೀನತೆಗೆ ಒಳಪಟ್ಟಿದೆ.

ಗಂಡಿನ ಪ್ರಾಧಾನ್ಯತೆ ಬಹುವಾಗಿದ್ದ ಈ ಸಮಾಜದಲ್ಲಿ ಹೆಣ್ಣು ಪರಾವಲಂಬನೆ ದಾಸ್ಯದ ಅಂಚಿಗೆ ನೂಕಲ್ಪಟ್ಟಿದ್ದಾಳೆ. "ಹೆಣ್ಣಾದವಳೂ ಬಾಲ್ಯದಲ್ಲಿ ತಂದೆಯ ಪೋಷಣೆಯಲ್ಲಿ, ವಯಸ್ಕಳಾದಾಗ ಪತಿಯ ಪೋಷಣೆಯಲ್ಲಿ ಮತ್ತು ವೃದ್ಧಳಾದಾಗ ಮಗನ ಆಶ್ರಯದಲ್ಲಿ ಬದುಕಬೇಕೆಂದು ಭಾರತೀಯ ಸಮಾಜ ಒಪ್ಪಿಕೊಂಡಿದೆ. "ನ ಸ್ತ್ರೀ ಸ್ವಾತಂತ್ರ್ಯಮರ್ಹತಿ"[೫] ಎಂದು ಘೋಷಿಸಿದ ಮನುವಿನ ಮಾತಿನ ಧೋರಣೆ ಹಲವಾರು ಶತಮಾನಗಳವರೆಗೆ ಉಳಿದುಕೊಂಡಿದ್ದು ಇಂದಿಗೂ ಮುಂದುವರೆಯುತ್ತಿದೆ. ಹೆಣ್ಣಿಗೆ "ಪತಿಯೇ ಪರದೈವ" ಆಗಿರುವಾಗ ಮಹಿಳೆಯರ ಪರಿಸ್ಥಿತಿ ಅವರ ಯಾವ ವರ್ಗಕ್ಕೆ ಸೇರಿದವರು ಎಂಬ ಅಂಶದ ಆಧಾರದ ಮೇರೆಗೆ ನಿಗದಿಗೊಂಡಿತು.

ಸಮಾಜದ ಭಾಗವಾದ ಮಹಿಳೆಯರ ಮೇಲೆ ನಿಯಂತ್ರಣ ಹೇರುವ ಮೂಲಕ ಪುರುಷ ನಿರ್ಬಂಧದ ಪ್ರಶ್ನೆಗಳನ್ನು ಎತ್ತದೆ, ಹೇಗೆ ಅತ್ಯಂತ ವ್ಯವಸ್ಥಿತವಾಗಿ ಚಾತುವರ್ಣವನ್ನು ಜಾತೀಯತೆಯನ್ನು ಅದರಲ್ಲಿನ ಶ್ರೇಣೀಕರಣ ಮೌಲ್ಯಗಳನ್ನು ಉಳಿಸಿಕೊಂಡರು. ಜಾತಿಗಳ ವರ್ಣಗಳ ನಡುವಿನ

ಮಹಿಳೆಯ ಚಲನೆ(ಲೈಂಗಿಕ ಚಲನೆ)ಯನ್ನು ಉಗ್ರವಾದ ಶಾಸನಗಳ ಮೂಲಕ ನಿಯಂತ್ರಿಸಿದರು. ವೈದಿಕ ಸಮಾಜದ ಎಲ್ಲ ಹಿಡಿತವನ್ನು ಉಳಿಸಿಕೊಳ್ಳುವುದರ ಜೊತೆಗೆ ಬಲಪಡಿಸಿಕೊಂಡಿದೆ. ಬ್ರಾಹ್ಮಣ ಮಹಿಳೆಯರನ್ನು ಒಳಗೊಂಡಂತೆ ಸಮಾಜದ ಎಲ್ಲ ವರ್ಗದ ಮಹಿಳೆಯರನ್ನು ಅದು ನಿಯಂತ್ರಿಸುತ್ತಿದೆ. ಮಹಿಳೆಯರ ವಿವಾಹಬಾಹಿರ ಜಾತಿಬಾಹಿರ ಸಂಬಂಧಗಳನ್ನು ಘೋರ ಅಪರಾಧ ಎಂದು ಪರಿಗಣಿಸಲಾಗುವುದು. ಅಲ್ಲದೆ ಇದಕ್ಕೆ ಮಹಿಳೆ ಮಾತ್ರ ಉಗ್ರ ಶಿಕ್ಷೆಗೆ ಗುರಿಯಾಗುತ್ತಾಳೆ. ಜಾತಿ ವ್ಯವಸ್ಥೆಯಿಂದಾಗಿ ಪುರುಷ ಸಮಾಜದ ಶ್ರೇಷ್ಠತೆಯನ್ನು ಆಚರಣೆಯ ಮೂಲಕ ಎತ್ತಿ ಹಿಡಿಯುತ್ತಿದ್ದಾರೆ. (ಸತಿ, ವಿಧವಾ) ಪುರುಷರು ಮಾತ್ರ ಎಲ್ಲ ಸ್ವಚ್ಛಂದ ಮೂಲಕವೇ ತನ್ನ ಶ್ರೇಷ್ಠತೆಯನ್ನು ತೋರಿಸುತ್ತಿದಾರೆ.

ಇದರಲ್ಲಿ ಎಲ್ಲ ವರ್ಗದ ಮಹಿಳೆಯರು ಮತ್ತು ಕೆಳಜಾತಿಯ ಪುರುಷರು ಜಾತಿ ಶ್ರೇಣೀಕರಣದಲ್ಲಿ ದಾಸ್ಯಕ್ಕೆ ಒಳಪಟ್ಟಿದ್ದಾರೆ. ಭಾರತೀಯ ಅಥವಾ ಕನ್ನಡ ಸಮಾಜ ಏಕರೂಪಿ ಸಾಮಾಜಿಕ ಸಾಂಸ್ಕೃತಿಕ ಬದುಕನ್ನುಳ್ಳದ್ದು. ಇಲ್ಲಿ ಎಲ್ಲರೂ ಸಮಾನರಲ್ಲ. ವಿಭಿನ್ನ ಜಾತಿ ವರ್ಗ ವರ್ಣಗಳನ್ನು ಹೊಂದಿದ ದೇಶವಾಗಿದೆ. ಹೀಗಾಗಿ ಭಾರತೀಯ ಮಹಿಳೆಯ ಸಮಸ್ಯೆಗಳನ್ನು ವಿಶ್ವಾತ್ಮಕ ನೆಲೆಯಲ್ಲಾಗಲೀ ರಾಷ್ಟ್ರೀಯ ನೆಲೆಯಲ್ಲಾಗಲೀ ವಿಶ್ಲೇಷಿಸುವುದು ಕಷ್ಟಸಾಧ್ಯ. ಆಯಾ ಕಾಲದ ನಿರ್ದಿಷ್ಟ ಸಾಮಾಜಿಕ ಹಿನ್ನೆಲೆಯುಳ್ಳ ಪ್ರದೇಶದಲ್ಲಿ ಹುಟ್ಟಿಕೊಂಡು ಸಾಮಾಜಿಕ ಪರಿಸ್ಥಿತಿಯ ಮೂಲಕ ಅವರಲ್ಲಿ ಇರುವ ಆಚರಣೆ ನಡವಳಿಕೆ ವ್ಯತ್ಯಾಸಗಳ ಮೂಲಕ ಕಂಡುಕೊಳ್ಳಬಹುದು.

ಬ್ರಾಹ್ಮಣ ಮತ್ತು ಬ್ರಾಹ್ಮಣೇತರರ ಭಾಷೆಗಳಲ್ಲಿ ವ್ಯತ್ಯಾಸವನ್ನು ಗುರುತಿಸುವುದು ಸಾಧ್ಯ. ಭಾಷೆ ಕೇಳಿದೊಡನೆ ಅವರೂ ಬ್ರಾಹ್ಮಣರೂ ಬ್ರಾಹ್ಮಣೇತರರೂ ಎಂಬುದು ತಿಳಿಯುತ್ತದೆ. ಧ್ವನಿನ್ಯೂತ್ಮ ನೆಲೆಗಳಲ್ಲಿ ಅಧ್ಯಯನ ಮಾಡಬಹುದಾಗಿದೆ. ಧ್ವನಿನ್ಯುತ್ಮ ನೆಲೆಯಲ್ಲಿ ಪ್ರತ್ಯಯಗಳ ಬಳಕೆಯಲ್ಲಿ ಪದಗಳ ಬಳಕೆಯಲ್ಲಿ, ಮತ್ತು ಮಾತಿನ ರಾಗದ ಆಧಾರದಲ್ಲಿ ವಿಶಿಷ್ಟತೆಯನ್ನು ಗುರುತಿಸಲು ಸಾಧ್ಯವಾಗಿದೆ. ಉದಾಹರಣೆಗೆ:

ದಲಿತರ ಕನ್ನಡ ಪದಗಳು – ಯವ್ವ, ಯಪ್ಪೇ, ಯುಕ್ಕ, ಯಣ

ದಲಿತೇತರ ಮೇಲೆ ಜಾತಿ – ಅಮ್ಮ ,ಅಪ್ಪ, ಅಕ್ಕ, ಅಣ್ಣ

ಪ್ರತಿಯೊಂದು ಭಾಷೆಯು ನಮ್ಮ ಮನಸ್ಸಿನ ಪ್ರತಿಬಿಂಬ. ಮನಸ್ಸಿನ ಆಲೋಚನೆಯ ಸಂಕೇತಗಳನ್ನು ರೂಪಿಸಿರುತ್ತದೆ. ಆದ್ದರಿಂದಲೇ ಅರ್ಥಗಳು ಸಂವಹನವಾಗುವುದು. ಭಾಷೆಯ ಪ್ರತಿ ಪದವೂ ಅದರ ಎಲ್ಲ ರೀತಿನೀತಿಗಳು ವ್ಯಕ್ತಿಯ ಮನಸ್ಸು ಮತ್ತು ಸಮಾಜದ ಮನಸ್ಸುಗಳ ಅಳತೆಗಳಿಗೆ ಅನುಗುಣವಾಗಿಯೇ ವಿಕಾಸವಾಗಿರುವುದು. ಜಾತಿ ಮತ್ತು ಲಿಂಗ ತಾರತಮ್ಯ ಪ್ರಜ್ಞೆಯ ಮನಸ್ಸಿನ ತಳದಲ್ಲಿ ಕ್ರಿಯಶೀಲವಾಗಿರುತ್ತದೆ. ಆದ್ದರಿಂದಲೇ ಅರ್ಥ ಮತ್ತು ಆ ಅರ್ಥದ ಗ್ರಹಿಕೆಯು

ಪೂರ್ವಾಗ್ರಹದಿಂದಲೇ ಸಂವಹನ ಮಾಡುವುದು. ಸಂವಹನದ ವೇಳೆ ಯಾವ ವ್ಯಕ್ತಿ, ಯಾವ ವಸ್ತು ವಿಷಯದ ಬಗ್ಗೆ ಅಭಿವ್ಯಕ್ತಿಯನ್ನು ಹೇಗೆ ಅನುಸಂಧಾನ ಮಾಡುತ್ತಿದ್ದಾನೆ ಎಂಬುದು ಮುಖ್ಯವೇ ವಿನಃ ಆ ಭಾಷೆಯ ಭೌತಿಕ ರಚನೆಯ ಎಲ್ಲವೂ ಅಲ್ಲ. ಭಾಷೆಯ ಒಟ್ಟು ರಚನೆಯಲ್ಲಿ ಅರ್ಥ ಸಂವಹನವಾಗುವುದು. ಅವರವರ ಅಸ್ತಿತ್ವ ಕಾರಣವಾಗಿಯೆ ಭಾಷೆಯ ಗ್ರಹಿಕೆಯಲ್ಲಿ ಪೂರ್ವಾಗ್ರಹವಿದ್ದಾಗ ಅರ್ಥವೂ ಪೂರ್ವಾಗ್ರಹದ ಪ್ರತೀಕವೇ ಆಗಿರುತ್ತದೆ.

- **ಸಂಭೋದನೆ:** ಸಮಾಜದಲ್ಲಿ ಪರಸ್ಪರರನ್ನು ಸಂಭೋದಿಸುವ ರೀತಿ ಎಂದು ನಪುಂಸಕ ಲಿಂಗವಾಚಿಯಾಗಿ ಮಾತಾಡುವುದು. ಶ್ರೇಣೀಕರಣದ ರಚನೆಯನ್ನು ತಿಳಿಯಲು ಸಹಾಯಕವಾಗುತ್ತದೆ. ಮಹಿಳೆಯನ್ನು ಸೂಚಿಸುವಾಗ 'ಅದು' 'ಅವು' ಎಂದು ನಪುಂಸಕ ಲಿಂಗವಾಚಿಯಾಗಿ ಮಾತಾಡುವುದು, ಅವರನ್ನು ಕೆಳದರ್ಜೆಗಿಳಿಸಿ ಮಾತಾಡುವ ಕ್ರಮವಾಗಿದೆ. ಸ್ವತಂತ್ರ ವಿಚಾರ ಹೊಂದಿರದವರು, ನಮ್ಮ ಸಮಕ್ಕೆ ನಿರ್ಲಕ್ಷಿತರಾದವರು ಎಂಬರ್ಥ ಹೊರಹೊಮ್ಮುವುದನ್ನು ಇಲ್ಲಿ ಕಾಣಬಹುದು.

- **ಬಳಕೆಯಲ್ಲಿ ವ್ಯತ್ಯಾಸ:** ಉಪಭೋಗಿ ಯಾರು ಅನ್ನುವುದರ ಆಧಾರದ ಮೇಲೆ ವಸ್ತು ಅಥವಾ ಸಂಗತಿಗಿರುವ ಪದ ಬಳಕೆ ಸಂದರ್ಭಾನುಸಾರವಾಗಿ ಮಾತ್ರವಲ್ಲ ಶ್ರೇಣೀಕೃತ ನೆಲೆಯಲ್ಲಿ ಬದಲಾಗುತ್ತದೆ. ಪದ ಬಳಕೆ ಮತ್ತು ಉಚ್ಚಾರಣೆಯಲ್ಲಿನ ವ್ಯತ್ಯಾಸ ಸಾಮಾಜಿಕ ವಿಭಜನೆಯ ಸೂಚಕಗಳಾಗಿವೆ. ನಿರ್ಧಿಷ್ಟ ಜಾತಿ ಸಮುದಾಯದೊಳಗಷ್ಟೆ ಬಳಕೆಯಾಗುವ ವಿಶಿಷ್ಟ ಪದಗಳಿರುತ್ತವೆ. ಪದ ಬಳಕೆ ಮತ್ತು ಉಚ್ಚಾರಣೇಯಲ್ಲಿನ ವ್ಯತ್ಯಾಸ ಸಾಮಾಜಿಕ ವಿಭಜನೆಯ ಸೂಚಕಗಳಾಗಿವೆ. ನಿರ್ದಿಷ್ಟ ಜಾತಿ ಸಮುದಾಯದೊಳಗಷ್ಟೆ ಬಳಕೆಯಾಗುವ ವಿಶಿಷ್ಟ ಪದಗಳಿರುತ್ತವೆ. ಉದಾಹರಣೆಗೆ ಅಕ್ಕಿ ಬೇಯಿಸಿ ಮಾಡಿದ ಅನ್ನ ದೇವರಿಗೆ ಅರ್ಪಿಸಿದರೆ ನೈವೇಧ್ಯವಾಗುತ್ತದೆ. ಮೇಲ್ವರ್ಗದವರು ಅದರಲ್ಲೂ ಬ್ರಾಹ್ಮಣರು 'ಅನ್ನ' ಉಣ್ಣುತ್ತಾರೆ. ಉಳಿದ ಸಮುದಾಯದವರು ಅದನ್ನು 'ಕೂಳ್' ಎನ್ನುತ್ತಾರೆ. "ಸಂವೇಧನೆ ಮತ್ತು ಸಂವಹನದ ನಿಷೇಧಿತ ಆವರಣದಲ್ಲಿ ಬದುಕುವ ದಲಿತ ಸಮುದಾಯಗಳು ಸಂವಹನದ ಪರರ ಅರ್ಥಗಳನ್ನೆ ತನ್ನ ಅರ್ಥವೆಂದು ಒಪ್ಪಿಕೊಳ್ಳಬೇಕಾದ ಸ್ಥಿತಿಯಲ್ಲಿರುತ್ತಾರೆ. ದಲಿತರು ಭಾಷೆಯ ಮೂಲಕ ಕಂಡುಕೊಳ್ಳುವುದು ಸಂಬಂಧಗಳನ್ನೆ ಹೊರತು, ಕೇವಲ ಅರ್ಥಗಳನ್ನಲ್ಲ. ಮಾತಿನ ಅರ್ಥಕ್ಕಿಂತಲೂ ಆ ಮಾತು ಯಾವ ಬಗೆಯ ಸಂಬಂಧವನ್ನು ಸ್ಥಾಪಿಸುತ್ತದೆ. ಹಾಗೂ ಅದರಿಂದ ತನ್ನ ಬದುಕಿನ ಯಾವ ರೀತಿಯ ಅಸ್ತಿತ್ವ ಹೊಂದಲು ಸಾಧ್ಯವಾಗುತ್ತದೆ ಎಂಬುದು ದಲಿತರ ಗ್ರಹಿಕೆಯ ರೀತಿ ನೀತಿಯಾಗಿರುತ್ತದೆ.

- ಒಂದು ಉದಾಹರಣೆಯಿಂದ ಈ ಮಾತಿನ ಸಂಬಂಧವನ್ನು ಪರಿಶೀಲಿಸಬಹುದು. 'ಅನ್ನ' ಎಂಬ ಪದಕ್ಕೆ ಅರ್ಥಕೋಶದಲ್ಲಿ ಸಿದ್ಧವಾದ ಅರ್ಥವಿದೆ. ಭಾಷಾ ವಿಜ್ಞಾನಿಯು ಈ ಪದದ

ಅರ್ಥವನ್ನು ಗ್ರಹಿಸುವುದು ಈಗಾಗಲೇ ತೀರ್ಮಾನಿಸಲ್ಪಟ್ಟಿರುವ ಭಾಷಿಕ ನಂಬಿಕೆಗಳಿಂದಲೆ. 'ಅನ್ನ' ಎಂಬ ಒಂದೇ ಶಬ್ದವು ಅರ್ಥ ಪ್ರಭೇದಗಳನ್ನು ನಿರ್ಮಿಸುವುದಿದ್ದರೂ ಇಲ್ಲಿ ಅರ್ಥವನ್ನು ವಸ್ತುವಿನ ಆಕೃತಿಯ ಮೂಲಕವೆ ಭಾವಿಸುವುದಿದೆ. 'ಅನ್ನ' ಎಂದ ಕೂಡಲೆ ದಲಿತ ಕುಟುಂಬಗಳಲ್ಲಿ ಅನೇಕಬಗೆಯ ಭಾವನೆಗಳನ್ನು ಉಂಟುಮಾಡುತ್ತದೆ. ಬದುಕಿನ ನೆನಪುಗಳನ್ನು ತೆರೆಯುತ್ತದೆ. ಅನ್ನದ ಜೊತೆಗಿನ ಸಂಬಂಧಗಳನ್ನು ಬೆಸೆಯುತ್ತದೆ. ಅನ್ನದ ಅರ್ಥಹೊಟ್ಟೆ ತುಂಬಿದ ಸಮಾಜದ ಭಾವನೆಗಳಿಗೆ ಕಂಡ ರೀತಿಯಂತೆಯೆ ಹಸಿದ ಹೊಟ್ಟೆಯ ದಲಿತರಿಗೆ ಕಾಣಲು ಸಾಧ್ಯವಿಲ್ಲ"

- **ಬೈಗುಳಗಳು:** ಬೈಗುಳಗಳ ಕುರಿತು ಪ್ರತ್ಯೇಕ ಅಧ್ಯಯನವನ್ನೇ ಮಾಡಬಹುದು. ಇಲ್ಲಿ ಶ್ರೇಣೀಕರಣ ಮತ್ತು ಭಾಷೆಯನ್ನು ಜೋತೆಗೆ ಲಿಂಗ ತಾರತಮ್ಯತೆಯನ್ನು ಇಟ್ಟುಕೊಂಡು ಚರ್ಚೆ ಮಡುವಾಗ ಬೈಗುಳಗಳು ಬಹಳ ಮುಖ್ಯವಾಗುತ್ತವೆ. ಬೈಗುಳಗಳು ಮತ್ತು ಹೆಣ್ಣನ್ನು ನೋಡುವ ಬಗೆಯನ್ನು ಮುಂದಿನ ಭಾಗದಲ್ಲಿ ಚರ್ಚಿಸಲಾಗಿದೆ, ಇಲ್ಲಿ ಜಾತಿ ಆಧಾರಿತ ತಾರತಮ್ಯ ಭಾವದ ನೆಲೆಯಿಂದಷ್ಟೇ ಗಮನಿಸಲಾಗಿದೆ. ಶ್ರೇಣಿಯಲ್ಲಿ ಮೇಲೆ ಇರುವ ಸಮುದಾಯಗಳು ತಮಗಿಂತ ಕೆಳಗಿರುವವರ ಹೆಸರನ್ನು ಕ್ಷುಲ್ಲಕವಾಗಿ ಪರಿಗಣಿಸುವುದು ಬೈಯುವ ಸಂದರ್ಭದಲ್ಲಿ ಬಳಸುವುದು ಸಾಮಾನ್ಯ ಸಂಗತಿ.

  **ಉದಾಹರಣೆ:** ೧. ಮಾದರಾವನೆ ೨. ಹೊಲೆ ಮುಂಡೆಮಗನೆ ೩. ಹೊಗೇರಿ ನನ್‌ಮಗನೆ, ಮಾದ್ರಿಗೆ ಹುಟ್ಟಿದವನು, ಮಾದ್ರ ಸೂಳೆಮಗನೆ, ಇತ್ಯಾದಿ. ಈ ಬಗೆಯ ಬೈಗುಳಗಳು ಜಾತಿಯನ್ನು ಕಡೆಗಣಿಸಿ ನಿಂದಿಸುವಂತಹುವುಗಳು. ಮೇಲಿನ ವರ್ಗದವರ ಈ ಬಗೆಯ ಭಾವನೆಗಳು ಅನೇಕ ಭಾವನೆಗಳು ಅನೇಕ ನಿರೂಪಣೆಗಳಲ್ಲಿ ಪ್ರತಿಪಾದಿಸಿದೆ. ಇಲ್ಲಿ ಜಾತಿಯ ಜೊತೆಗೆ ಅತ್ಯಂತ ಹೀನಾಯವಾಗಿ ಹೇಳುತ್ತಿರುವುದು. ಆ ಜಾತಿಯಲ್ಲಿ ರೂಪ ಮಹಿಳೆಯನ್ನು ಉದ್ದೇಶಿಸಿ ಎಂಬುದು ಇಲ್ಲಿ ಗಮನಿಸಬೇಕಾದ ಸಂಗತಿ. ಹೀಗೆ ಮಹಿಳೆ ಕನಿಷ್ಠತೆಯಿಂದ ಕನಿಷ್ಠತೆಗೆ ಇಳಿದಿರುವುದನ್ನು ಗಮನಿಸಬಹುದು.

- **ಅಸ್ಮಿತೆಯನ್ನು ಸ್ಥಾಪಿಸಿಕೊಳ್ಳುವ ದಾರಿಯಲ್ಲಿ ಮಿತ್‌ಗಳ ರಚನೆ:** ಶ್ರೇಣೀಕರಣದ ಭಿನ್ನ ಹಂತಗಳಲ್ಲಿ ಸಮುದಾಯಗಳು ಕತೆಗಳನ್ನು ಕಟ್ಟುವುದರ ಮೂಲಕ ತಮ್ಮ ಈಗಿನ ನೆಲೆಯನ್ನು ಸಮರ್ಥಿಸಿಕೊಳ್ಳುವ ಜೊತೆಗೆ ಶ್ರೇಷ್ಠತೆಯನ್ನು ಸ್ಥಾಪಿಸಿಕೊಳ್ಳುತ್ತವೆ. ವಾಸ್ತವದಲ್ಲಿ ಇಲ್ಲದ ಸ್ಥಾನ ಮತ್ತು ನಿಕಟತೆಯನ್ನು ಇವರು ಭಾಷಿಕವಾಗಿ ಕತೆಗಳ ಮೂಲಕ ಸ್ಥಾಪಿಸಿಕೊಳ್ಳುವ ಬಗೆ ಭಾಷೆ ಮತ್ತು ಸಂಸ್ಕೃತಿ ನಡುವಣ ಸಂಬಂಧದ ದೃಷ್ಟಿಯಿಂದ ಕುತೂಹಲಕರವಾದ ಸಂಗತಿಗಳನ್ನು ಹೊಂದಿದೆ. ಹೀಗೆ ಪ್ರತಿಯೊಂದು ಜಾತಿಗೂ ಅದರದ್ದೇ ಆದ ನಂಬಿಕೆ ಆಚಾರ-ವಿಚಾರ ಇರುವುದನ್ನು ಗಮನಿಸಬಹುದು. ಬ್ರಾಹ್ಮಣರ ಶಾಪ ತಟ್ಟುತ್ತದೆ. ಅವರಾಡಿದ ಮಾತು ನಿಜವಾಗುತ್ತದೆ ಎಂಬ

ಭಾವನೆ ಜನರಲ್ಲಿ ಎದ್ದು ಕಾಣುತ್ತದೆ. ಹೀಗೆ ಈ ಕತೆಗಳು ಹಿಂದೊಮ್ಮೆ ಇದ್ದ ಶ್ರೇಷ್ಠತನವನ್ನು ಹೇಳುತ್ತಲೇ ಇಂದು ಸಾಮಾಜಿಕವಾಗಿ ಅವರು ಕೆಳಗೆ ಬರುವುದಕ್ಕೆ ಕಾರಣವಾದ ಸಂಗತಿಗಳನ್ನು ತಮ್ಮೊಳಗೆ ಇಟ್ಟುಕೊಂಡಿರುತ್ತವೆ. ಇವು ಏಕಕಾಲಕ್ಕೆ ಅಸ್ಮಿತೆಯನು ಸ್ಥಾಪಿಸಿಕೊಳ್ಳುತ್ತಿರುವ ಮತ್ತು ಈಗ ಇರುವ ಶ್ರೇಣೀಕರಣವನ್ನು ಸಮರ್ಥಿಸಿಕೊಳ್ಳುತ್ತಿರುವುದು ಸ್ಪಷ್ಟವಾಗಿ ಕಾಣುತ್ತವೆ. ಕತೆಗಳಲ್ಲಿನ ಈ ವೈರುಧ್ಯಗಳಿಂದಾಗಿ ಈ ಬಗ್ಗೆ ಸರಳ ತೀರ್ಮಾನಕ್ಕೆ ಬರುವುದು ಕಷ್ಟವಾಗುತ್ತದೆ. ಹಿಂದೆ ಆ ಜಾತಿಯವರಿಗಿದ್ದ ಉನ್ನತ ಸ್ಥಾನವನ್ನು ಸಾರುವ ಮೂಲಕ ವರ್ತಮಾನದಲ್ಲಿ ಅವರು ಸ್ವಾಭಿಮಾನ ಗಳಿಸಿಕೊಳ್ಳುವಲ್ಲಿ ಪ್ರಮುಖ ಪಾತ್ರವಹಿಸುತ್ತದೆ.

- **ಭಾಷೆ ಮತು ಪ್ರತಿಷ್ಠತೆಯ ಪ್ರಶ್ನೆ:** ಪ್ರತಿಯೊಂದು ಭಾಷಿಕ ಸಮುದಾಯಕ್ಕೂ ತನ್ನ ಭಾಷೆ ಮತ್ತು ಸುತ್ತಲಿನ ಇತರ ಭಾಷೆಗಳ ಬಗ್ಗೆ ಶ್ರೇಷ್ಠ–ಕನಿಷ್ಠ ಎಂಬ ತಾರತಮ್ಯ ಭಾವವಿರುತ್ತದೆ. ಆಡುನುಡಿಗಳ ಸಂದರ್ಭದಲ್ಲಿ ಶಿಷ್ಟ ಭಾಷೆ; ಗ್ರಾಮ್ಯ ಭಾಷೆಯ ಪರಿಕಲ್ಪನೆಯೇ ಈ ತಾರತಮ್ಯ ಭಾವದ ಆಧಾರದಲ್ಲಿ ರೂಪಿತವಾಗಿದೆ. ವರ್ಗ ಆಧಾರಿತವಾಗಿಯೂ ಈ ಬಗೆಯ ಅಭಿಪ್ರಾಯವಿದೆ. ಆರ್ಥಿಕವಾಗಿ ಮೇಲಿರುವ ತಳಸಮುದಾಯವಿದ್ದರೂ, ಭಾಷೆಯ ಶ್ರೇಷ್ಠ–ಕನಿಷ್ಠ ಎಂಬ ಅಭಿಪ್ರಾಯ ಕಂಡುಬರುತ್ತದೆ. ಪ್ರಮಾಣ ಕನ್ನಡವೇ 'ಶುದ್ಧ' ಕನ್ನಡ ಎಂದು ಭಾವಿಸುವುದು ಕಾಣುತ್ತದೆ. ಪ್ರಮಾಣ ಕನ್ನಡವನ್ನು ಮಾನದಂಡವಾಗಿಸಿಕೊಂಡು ಶುದ್ಧ ಅಶುದ್ಧ ಕಲ್ಪನೆಗಳು ಹುಟ್ಟಿಕೊಳ್ಳುತ್ತವೆ. ಈ ಶುದ್ಧ ಅಶುದ್ಧ ಎನ್ನುವ ಭಾವನೆ ಒಳನುಡಿ ಆಡುವ ಎಲ್ಲರಲ್ಲೂ ಇರುವ ಭಾವನೆಯೇ ಆದರೂ ಮೇಲ್‌ಜಾತಿಯವರ ಭಾಷೆ ಪ್ರಮಾಣಕ್ಕೆ ಹೆಚ್ಚು ಹತ್ತಿರವಾಗಿರುತ್ತದೆ ಎಂಬ ಮನೋಭಾವ ಹೆಚ್ಚಿನ ಮಟ್ಟಿಗೆ ಅದು ಸತ್ಯ. ಏಕೆಂದರೆ ಪ್ರಮಾಣಿತ ಎಂದು ಮಾಡಿರುವುದರಲ್ಲಿ ಇರುವ ರಾಜಕೀಯದಿಂದಾಗಿ ಎಂದರೆ ಪ್ರಮಾಣಿತ ಭಾಷೆಯನ್ನು ರೂಪಿಸುವವರು ಅವರೇ ಆಗಿರುವುದರಿಂದ ಅದರ ಚರ್ಚೆಯನ್ನು ಇಲ್ಲಿ ಮಾಡುವ ಅಗತ್ಯವಿಲ್ಲ.

**ಜಾತಿ ವ್ಯವಸ್ಥೆಯಲ್ಲಿ ಹೆಣ್ಣಿನ ಭಾಷಿಕ ಚಹರೆಗಳು**

ಸಮಾಜದಲ್ಲಿ ಇರುವಂತಹ ಜಾತಿ, ಶ್ರೇಣಿ, ವರ್ಗ ಆಧಾರಿತ ಅಸಮಾನತೆ ಕಾರಣದಿಂದಾಗಿಯೂ ಮಹಿಳೆ ಶೋಷಣೆಗೆ ಒಳಗಾಗುತ್ತಿದ್ದಾಳೆ. ಜಾತಿ ವ್ಯವಸ್ಥೆಯಲ್ಲಿ ಕಂಡುಬರುವಂತಹ ತಳಸ್ಥರದಲ್ಲಿ ಅಂದರೆ ಸಮಾಜದಲ್ಲಿ ಮಹಿಳೆ ಶೂದ್ರನಿಗಿಂತ ಅತ್ಯಂತ ಶೂದ್ರಳಾಗಿದ್ದಾಳೆ.

ಮಹಿಳೆ ತಳಸ್ಥರದಲ್ಲಿ ಇದ್ದಾಳೆ. ಮಹಿಳೆಯರನ್ನು ಸಮಾಜದಲ್ಲಿ ಅತ್ಯಂತ ನಿಕೃಷ್ಟ ರೀತಿಯಲ್ಲಿ ಕಾಣುತ್ತಾರೆ. ಹಾಗಿದ್ದರೂ ಎಲ್ಲ ಮಹಿಳೆಯರಿಗೆ ಒಂದೇ ಬಗೆಯ ಸಮಸ್ಯೆ ಇದೆ ಎಂದಲ್ಲ. ಎಲ್ಲ ವರ್ಗದ ಮಹಿಳೆಯರನ್ನು ಒಂದೇ ತಕ್ಕಡಿಯಲ್ಲಿಟ್ಟು ತೂಗುವುದಕ್ಕೆ ಆಗುವುದಿಲ್ಲ. ವರ್ಗ, ಜಾತಿ, ಆಧಾರಿತವಾದ ಭಿನ್ನ ಸಮಸ್ಯೆಗಳಿಂದ ಕೂಡಿದೆ. ಜೊತೆಗೆ ಮಹಿಳೆಯರ ಒಳಗಡೆನೇ ಈ ಜಾತಿ ವರ್ಗ ಆಧಾರಿತ ಭಿನ್ನತೆಯನ್ನು ಕಾಣಬಹುದು.

ಮಹಿಳೆಯರ ಒಳಗಡೆಯಿರುವಂತಹ ಜಾತಿ, ವರ್ಗ, ಶ್ರೇಣಿ ಅಸಮಾನತೆಯ ಕುರುಹುಗಳು ಭಾಷೆಯಲ್ಲಿ ಸಿಗುತ್ತವೆ. ಈ ಅಂಶವನ್ನು ಕಂಡುಕೊಳ್ಳುವಂತಹ ಪ್ರಕ್ರಿಯೆಗಳು ಈಗಾಗಲೇ ನಡೆದಿವೆ. ಕನ್ನಡ ಸಂದರ್ಭದಲ್ಲಿ ಒಂದು ಪರಿಸರದ ಮಹಿಳೆಯರೊಳಗಡೆ ಭಾಷೆಯ ಬಳಕೆಯೊಳಗಡೆ ಭಿನ್ನತೆಯನ್ನು ಗುರುತಿಸಿದ್ದಾರೆ. ಡಾ. ಡಿ. ಪಾಂಡುರಂಗಬಾಬು ಅವರು (೧೯೮೫) 'ಹುಣಸೂರು ತಾಲೂಕಿನ ಆದಿಜಾಂಬವ ಕನ್ನಡ: ಒಂದು ವಿವರಣಾತ್ಮಕ ಅಧ್ಯಯನ' ಎಂಬ ಪ್ರಬಂಧದಲ್ಲಿ ಹುಣಸೂರಿನ ಸುತ್ತಮುತ್ತಲ ಪ್ರದೇಶದ ಆದಿಜಾಂಬವರು ಮಾತನಾಡುವ ಕನ್ನಡ ರಚನೆಯನ್ನು ವಿವರಿಸಿದ್ದಾರೆ. ವಿಶೇಷವಾಗಿ ಇವರು ಸಂಭೋದನೆ ಮಾಡುವ ಸಂದರ್ಭದಲ್ಲಿ ಣೇ.ಮೀ.ಲೇ ಎಂಬ ರೂಪಗಳು ಮಹಿಳೆಯರ ಸಂಬೋಧನೆಯಲ್ಲಿ ವಿಶಿಷ್ಟವಾಗಿ ಬಳಕೆಯಾಗುವುದನ್ನು ವಿವರಿಸಿದ್ದಾರೆ.

೧) **ಣೇ:** ಇದೊಂದು ಸ್ತ್ರೀ ಸಂಬೋಧನಾ ರೂಪ. ಈ ರೂಪವು ಹೊಲೆಯ, ಈಡಿಗ, ಪುರುಷ, ಕುಂಬಾರ, ಹಜಾಮ, ತೋರೆರು, ನಾಯಕ, ಉಪ್ಪಾರ, ಅಗಸ ಈ ಜನವರ್ಗಗಳಲ್ಲಿ ಮಾತ್ರ ಬಳಕೆಯಲ್ಲಿದೆ ಎಂದಿದ್ದಾರೆ.

ಉದಾ: ಕಳೇಗ್ ಬಂದೀಣೆ (ಕಳೆತೆಗೆಯಲು ಬರುವೆಯೇನೇ)

ಬಾಣೇ–(ಬಾರೇ)

**ಮೀ:** ಈ ಸ್ತ್ರೀ ಸಂಭೊಧನಾ ರೂಪವು ಹೆಚ್ಚಾಗಿ ಮಾದಿಗ ಜನರಲ್ಲಿ ಕಂಡುಬರುತ್ತದೆ. ಅಲ್ಲದೆ ಮಧ್ಯಮ ಜಾತಿಗಳಾದ ತೋರೆರಲ್ಲಿಯೂ ಕೆಲ ವೇಳೆ ಕಂಡು ಬರುತ್ತದೆ ಎಂದು ಗುರುತಿಸಿದ್ದಾರೆ.

ಉದಾ: ಕೆಲ್ಸಕ್ ಬಂದೀಯಮ್ಮಿ? (ಕೆಲಸಕ್ಕೆ ಬರುವೆಯೇನೆ?)

ಮೀ ಒಳೀಕ್ಕೋಗು (ಲೇ ಒಳಗಡೆ ಹೊಗು)

೨) **ಲೇ :** ಇದೊಂದು ಸ್ತ್ರೀ ಸಂಬೋಧನಾ ರೂಪ. ಈ ಸಂಭೋಧನಾ ರೂಪವು ಮೇಲ್ಜಾತಿಯ ಜನವರ್ಗಗಳಲ್ಲಿ ಮಾತ್ರ ಹೆಚ್ಚಾಗಿ ಕಂಡುಬರುತ್ತದೆ.

ಉದಾ: ಲೇ ಬಾ ಇಲ್ಲಿ

ಹೋಗಲೇ[೭]

ಈ ಬಗೆಯ ಸಂಭೊಧನ ವ್ಯತ್ಯಾಸಗಳು ಪ್ರಾದೇಶಿಕವಾಗಿ ಬೇರೆ ಬೇರೆ ಕಂಡುಬರುತ್ತದೆ. ಹೈದ್ರಾಬಾದ್ ಕರ್ನಾಟಕ ಪ್ರದೇಶದ ಮಹಿಳೆಯ ಭಾಷೆ ಬಳಕೆ ಒಳಗಡೆಯೊ ಜಾತಿ ತಾರತಮ್ಯತೆ ಕಂಡುಬರುತ್ತದೆ. ಅಥವಾ ಬೇರೆ ಬೇರೆ ಜಾತಿಯ ಮಹಿಳೆಯರು ಬಳಕೆಯ ಭಾಷೆಯಲ್ಲಿ ಭಿನ್ನತೆ ಇರುವುದು ಕಂಡುಬರುತ್ತದೆ.

ಉದಾಹರಣೆಗೆ: ತಳಸಮುದಾಯದ ಮಹಿಳೆಯರೂ ತಮ್ಮತಮ್ಮ ಒಳಗಡೆ ಮಾತನಾಡುತ್ತಿರುವಾಗ ಇಕ್ಕ್ಯಮ್ಮ ಎಂಬ ಸಂಭೋಧನ ರೂಪವನ್ನು ಬಳಸುತ್ತಾರೆ.

ಪ್ರಯ್ಯಗ– ಇಲ್ಲಿ ಬಾಯಿಕ್ಯಮ, ಇದುನೋಡಯ್ಯಿಕ್ಯಮ್ಮ

ಮೇಲ ವರ್ಗದ ಕೆಲ ಪ್ರಾದೇಶಿಕವಾರು 'ಸೆ' ಎಂಬ ರೂಪ ಕಂಡುಬರುತ್ತದೆ.

ಪ್ರಯೊಗದ– ಎನ್‌ಸೇ, ಹೊಗಸೇ

ಕೆಲವು ಪ್ರದೇಶಗಳಲ್ಲಿ ಲೇ ಎಂಬ ಸಂಭೋದನ ರೂಪವೂ ಇದೆ.

ಮಹಿಳೆಯರ ಭಾಷೆ ಒಳಗಡೇನೂ ಸಾಮಾಜಿಕ ಸಂರಚನೆಯ ಹಲವು ಸ್ಥರಗಳು ಗೋಚರವಾಗುತ್ತವೆ. ಇಲ್ಲಿಯು ಅಧಿಕಾರಸ್ತ ಧ್ವನಿ ಕಂಡುಬರುತ್ತದೆ. ತಳಸಮುದಾಯದ ಮಹಿಳೆ ಬಳಕೆಯ ಭಾಷೆಯು ಅಧೀನ ನೆಲೆಯಲ್ಲಿ ಕಂಡುಬರುತ್ತದೆ.

ಎರಡು ಸಮುದಾಯದ ಮಹಿಳೆಯರ ಮಾತುಕತೆ ಆತ್ಮಿಯತೆಯಿಂದ ಕೂಡಿದ್ದರೂ ಅಲ್ಲಿ ಒಂದು ಬಗೆಯ ಬೇಯ ಯಜಮನ್ಯ ಮತ್ತು ಅಧಿನನೆಲೆಯ ಭಾಷಾ ಬಳಕೆ, ಧ್ವನಿ ತಾವಾಗುತ್ತಿರುತ್ತದೆ.

ಭಾಷೆಯ ಬಳಕೆಯ ರೂಪ ಒಂದೆ ಆಗಿದ್ದರೂ ಅಲ್ಲಿನ ಭಾವನ ವಲಯ ಭಾಷೆಯ ರಾಗ, ಮಾತನಾಡುತ್ತಿರುವಾಗ ಮಾತಿನ ಏರಿಳಿತಗಳು ಅಧಿಕಾರಸ್ತ ಮತ್ತು ಅಧೀನ ಯೊಚನೆಗಳು ಅಲ್ಲಿ ಪ್ರತಿಫಲಿಸುತ್ತಿರುತ್ತದೆ.

ಅಧೀನ ಮಹಿಳೆ ಎಷ್ಟೇ ಬುದ್ದಿವಂತೆಯಾಗಿದ್ದರೂ, ಮೇಲ್ವರ್ಗದ ಮಹಿಳೆಗೆ ಸಲಹೆ ಸೂಚನೆಗಳನ್ನು ಕೊಡಕೊಡದು ಅಥವಾ ಕೊಡುವಷ್ಟು ಸಲುಗೆ ಇರುವುದಿಲ್ಲ. ಏಕೆಂದರೆ ಮೇಲ್ವರ್ಗದವರು ಮಾತ್ರ ಸಲಹೆ ಸೂಚನೆಗಳನ್ನು ಕೊಡಬೇಕು. ಅಧೀನ ನೆಲೆಯಲ್ಲಿರುವವರು ತನಗೆ ತಿಳಿದಿದ್ದರೂ ಏನೂ ತಿಳಿಯದ ರೀತಿಯಲ್ಲಿ ಇರಬೇಕು. ಮೇಲಿನವರ ಸಲಹೆ ಸೂಚನೆಗಳನ್ನು ಪಾಲಿಸಬೇಕು. ಈ ಸಲಹೆಗಳು ನಿರ್ದೇಶಿಸುವ ರೀತಿಯಲ್ಲೆ ಬಳಕೆಯಾಗುತ್ತಿರುತ್ತವೆ. ಸಂಜ್ಞಾ ಸಂಕೇತಗಳ ಮೂಲಕ ಪ್ರತಿಭಟಿಸುತ್ತಾರೆ. ಜನಪದ ಕತೆಗಳ ಮೂಲಕ ಗಮನಿಸಬಹುದು. ಉದಾಹರಣೆಗೆ– ಜನಪದ ಕಥೆಗಳಲ್ಲಿ ಮಹಿಳೆಯನ್ನು ಕುರಿತಾಗಿ ಕಂಡುಬರುವ ಭಾಷೆ ಹೆಳವರ ಕಥೆಯೊಂದರಲ್ಲಿ ಏಳು ಜನ ಸೋದರರಿಗೆ ಒಬ್ಬಳೇ ತಂಗಿ. ಆಕೆ ನದಿ ತೀರದಲ್ಲಿ ಕೂದಲನ್ನು ಆರಿಸಿಕೊಳ್ಳುತ್ತಾ ಕುಳಿತಿದ್ದಾಗ ಇದ್ದಕ್ಕಿದಂತೆ ಬಿಳಿಯ ಕುದುರೆಯೊಂದು ಓಡಿ ಹೋಗುತ್ತದೆ. ಪ್ರಖರವಾದ ಅದರ ಬೆಳಕಿಗೆ ಮೂರ್ಛೆ ಹೋಗುತ್ತಾಳೆ. ಆನಂತರ ಆಕೆ ಗರ್ಭವತಿಯಾಗಿರುತ್ತಾಳೆ. ಅವಳ ಸಹೋದರರು ಆಕೆಯನ್ನು ಬೇರೆ ಊರಿಗೆ ಕರೆದುಕೊಂಡು ಹೋಗುತ್ತಾರೆ. ಅವಳಿಗೆ ಹುಟ್ಟುವ ಮಗುವನ್ನು ಅಧಿಕಾರಕ್ಕೆ ತರಲು ಹೋರಾಡುತ್ತಾರೆ. ಕುದುರೆ, ಹಾವು, ಆನೆ, ಕೋಣ, ಗೂಳಿ, ಹಣ್ಣಿನ ಪ್ರಸಾದ

ಎಲ್ಲವೂ ಸಂಕೇತಗಳು ಮಾತ್ರ ಹೇಳಲಾಗದ ಸತ್ಯವನ್ನು ಸಂಕೇತಿಕ ಭಾಷೆಯಲ್ಲಿ ಹೇಳಿಕೊಳುತ್ತಾರೆ. ಮೇಲ್ವರ್ಗದ ಜನರಿಂದ ನಡೆಯುತ್ತಿದ್ದ ಶೊಷಣೆ, ಅತ್ಯಾಚಾರ ಯಾವುದನ್ನು ವಿರೋಧೀಸುವ ಶಕ್ತಿ ಅವರಿಗಿರಲಿಲ್ಲ. ಹಾಗೆಂದು ಆ ಸಮಾಜ ಅವಳನ್ನು ಬಹಿಷ್ಕರಿಸದೆ ಪವಾಡ ಕಥೆಯ ಮೂಲಕ ಇಂತಹ ಹುಟ್ಟಿಗೊಂದು ಸಾಮಾಜಿಕ ಮನ್ನಣೆಯನ್ನು ಸೃಷ್ಟಿಸಬೇಕಾಗುತ್ತಿತ್ತು. ಕೆಳವರ್ಗದ ಸಮಾಜಕ್ಕೆ ಕಾಡಿದ್ದು 'ಪಾವಿತ್ರ್ಯದ ಪ್ರಶ್ನೆಗಿಂತ ಉಳಿವಿನ ಪ್ರಶ್ನೆ. (Qnstion of Suvival)

## ೪.೨. ನಿಷೇಧ ನಿರ್ಬಂಧದ ನೆಲೆಗಳು

ಪಿತೃಪ್ರಧಾನ ಕೃಷಿಕ ಸಮಾಜದಲ್ಲಿ ಭೂಮಿಯ ಒಡೆತನ ರಾಜ್ಯದ ಒಡೆತನದ ಪ್ರಶ್ನೆ ಆರಂಭವಾದಾಗ ಪಿತೃಪ್ರಧಾನ ಸಮಾಜದ ಕೇಂದ್ರ ಆಸಕ್ತಿಯಾಯಿತು. ಆ ಸಮಾಜದ ಎಲ್ಲಾ ವಿಚಾರಗಳು ಇದರ ಸುತ್ತಲೇ ಗಿರಕಿ ಹೊಡೆಯಲಾರಂಭಿಸಿತು. ಗಂಡಿನ ಶ್ರೇಷ್ಠತೆ ಸ್ವೀಕೃತವಾದಂತೆ ಹೆಣ್ಣು ಗಂಡಿನ ನೆರಳಾದಳು. ಇದು ಎಲ್ಲಿಯವರೆಗೆ ಹೋಯಿತೆಂದರೆ ಹೆಣ್ಣು ಅಭಿವ್ಯಕ್ತಿ, ಅಭಿಪ್ರಾಯದ ಸ್ವಾತಂತ್ರ್ಯವನ್ನು ಕಳೆದುಕೊಂಡಳು. ಚಿಂತನೆಯ ಶಕ್ತಿಯನ್ನು ಕಳೆದುಕೊಂಡು ವಿಕಾಸಗೊಳ್ಳುತ್ತಿದ್ದ ಮನುಕುಲದಲ್ಲಿ ಎರಡನೆಯ ದರ್ಜೆಯ ಜೀವಿಯಾಗಿ ಕಾಣಿಸಿಕೊಂಡಳು. ಆದ್ದರಿಂದಲೇ ಆಕೆ ಸ್ವತಂತ್ರ್ಯಕ್ಕೆ ಅರ್ಹಳಲ್ಲ, ಪುರುಷನ ಕಾಲಿಗೆ ಸಮಾನ, ವಿದ್ಯೆ ಕಲಿಕೆಗೆ ಅರ್ಹಳಲ್ಲ, ಮೋಕ್ಷ ಅವಳಿಗೆ ಇಲ್ಲ ಇಂತಹ ಮೌಲ್ಯಗಳು ತಲೆದೊರಿದವು.

ಪುರುಷ ಮಹಿಳೆಯನ್ನು ಪ್ರತಿ ಹಂತದಲ್ಲೂ ತಡೆ ಒಡ್ಡುತ್ತಿರುತ್ತಾನೆ. ಮಹಿಳೆಯ ಮೇಲೆ ನಿರ್ಬಂಧಗಳನ್ನು ಹೇರುತ್ತಿರುತ್ತಾನೆ. ಪಿತೃಪ್ರಧಾನ ಸಮಾಜ ವ್ಯವಸ್ಥೆ ಮಹಿಳೆಗೆಂದು ಕಟ್ಟಿಕೊಟಂತಹ ಮೌಲ್ಯಗಳನ್ನು ರಕ್ಷಿಸಿಕೊಂಡು ಬರಲೂ ಮಹಿಳೆಗೆ ತಡೆ ಹೇರುತ್ತಾನೆ. ಆದರ್ಶ ಮೌಲ್ಯಗಳಿಗೆ ದಕ್ಕೆ ಬರದ ರೀತಿಯಲ್ಲಿ ಮಹಿಳೆ ನಡೆದುಕೊಳ್ಳಬೇಕು. ಮಹಿಳೆ ಆದರ್ಶ ಮೌಲ್ಯಗಳನ್ನು ದಾಟುವ ಪ್ರಯತ್ನ ಮಾಡಿದರೆ ಹಲವು ಸಾಮಾಜಿಕ ನಿಂದನೆಗೆ ಅಪಮಾನಕ್ಕೆ ಗುರಿಯಾಗಬೇಕಾಗುತ್ತದೆ. ಮತ್ತು ಸಮಾಜ ಅವಳನ್ನು ಬಹಿಷ್ಕರಿಸುತ್ತದೆ.

ಸಮಾಜದ ಈ ಬಗೆಯ ವರ್ತನೆಗಳು ಭಾಷೆಯಲ್ಲಿ ಪ್ರಕಟಗೊಳುತ್ತಿರುತ್ತದೆ. ಬಾಷೆಯೊಳಗಡೆಯೆ ಮಹಿಳೆಗೆ ಹಲವು ನಿರ್ಬಂಧಗಳಿವೆ ಆದರ್ಶ ಮೌಲ್ಯಗಳಿಗೆ ವ್ಯತಿರಿಕ್ತವಾಗಿ ಮಾತನಾಡುವ ಮಹಿಳೆಯನ್ನು ಸಮಾಜ ಒಪ್ಪುವುದಿಲ್ಲ. "ಭಾಷೆಯ ನಿರ್ಧಿಷ್ಟ ಘಟಕಗಳಿಗೆ ಬಳಕೆಯ ದೃಷ್ಟಿಯಿಂದ ಕೆಲವು ನಿಷೇಧ ನಿರ್ಬಂಧಗಳೂ ಪ್ರಾಪ್ತಿಯಾಗಿರುತ್ತವೆ. ಈ ನಿಷೇಧ ಅಥವಾ ನಿರ್ಬಂಧಗಳು ಆ ಭಾಷಿಕ ಸಮಾಜದ ಜೀವನ ಲೋಕದೃಷ್ಟಿ, ವಸ್ತು ವಿಷಯಗಳ ಬಗೆಗಿನ ಸಾಂಸ್ಕೃತಿಕ ಮೌಲ್ಯ ಮುಂತಾದವುಗಳನ್ನು ಆಧರಿಸಿರುತ್ತದೆ."[೮]

ಸಮಾಜದೊಳಗಡೆ ಕೆಲವು ಕ್ಷೇತ್ರಕ್ಕೆ ಮಹಿಳೆಯ ಪ್ರವೇಶ ನಿಷೇಧಿಸಲಾಗಿದೆ. ಈ ಕ್ಷೇತ್ರಗಳಿಗೆ ಮಹಿಳೆ ಬರದಂತೆ ತಡೆಯಲು ಈ ಬಗೆಯ ನಿಷೇಧ ನಿಬಂಧನೆಗಳನ್ನು ಹೇರಲಾಗಿದೆ. ಕೆಲವು ಪೂಜಾ ವಿಧಿ-ವಿಧಾನಗಳಿಗೆ ಮಹಿಳೆಯನ್ನು ದೂರ ಇಡಲಾಗಿದೆ. ಧಾರ್ಮಿಕ ಕಟ್ಟುಪಾಡುಗಳಿಂದ ಮಹಿಳೆಯನ್ನು ನಿರ್ಬಂಧಿಸಲಾಗಿದೆ. ಸಮಾಜದಲ್ಲಿರುವ ಈ ಬಗೆಯ ನಿಷೇಧಗಳ ಕಾರಣಕ್ಕಾಗಿ ಮಹಿಳೆ ಬಳಸುವ ಭಾಷೆಯಲ್ಲಿ ಕೆಲವು ನಿಷೇಧಗಳಿವೆ. ಏಕಪಕ್ಷೀಯವಾದ ಈ ಮೌಲ್ಯಗಳ (ಅಂದರೆ ಶೀಲ ಎನ್ನುವುದು ಕೇವಲ ಮಹಿಳೆಗೆ ಮಾತ್ರ ಎಂಬ ದೋರಣೆ ಸಮಾಜದಲ್ಲಿ ಇದೆ.) ನ್ಯಾಯ ಕಾರಣಕ್ಕಾಗಿ ಅಂದರೆ ಮಹಿಳೆಗೆ ಲೈಂಗಿಕ ವಿಷಯಕ್ಕೆ ಸಂಬಂಧಿಸಿದಂತಹ ಮಾತುಗಳನ್ನು ಆಡದಂತೆ ನಿಷೇಧಿಸಲಾಗಿದೆ. ಹಾಗೇನೆ ಘಟ್ಟಿಯಾದ ಧ್ವನಿಯಲ್ಲಿ ಮಾತಾಡೋ ಹಾಗಿಲ್ಲ ಅದನ್ನು ನಿಷೇದಿಸಲಾಗಿದೆ. ಪುರುಷನಿಗೆ ಎದುರಾಡುವುದನ್ನು ಗಂಡನಿಗೆ ಎದುರಾಗಿ ಮಾತನಾಡದಂತೆ ನಿಷೇಧಿಸಲಾಗಿದೆ.

ಸಮಾಜದಲ್ಲಿನ ಈ ಬಗೆಯ ನಿಷೇಧಗಳನ್ನು ಸಮಾಜದ ನಿರೂಪಣೆಗಳಿಂದ ಅವುಗಳನ್ನು ತಿಳಿಯಬಹುದು. ಈ ನಿಷೇಧಗಳನ್ನು ಮೀರಿರುವ ಮಹಿಳೆಯನ್ನು ಜನಪದ ಬೈಗುಳ, ಗಾದೆ, ಒಗಟ್ಟು, ಒಡಪು ನುಡಿಗಟ್ಟುಗಳಲ್ಲಿ ಇವುಗಳು ಗಮನಿಸಬಹುದು. ಒಂದೇ ಅರ್ಥದಲ್ಲಿ ಜನಪದರ ಈ ನಿರೂಪಣೆಗಳು ಸಮಾಜದಲ್ಲಿ ಮೌಲ್ಯಗಳನ್ನು ರಕ್ಷಿಸುವುದಕ್ಕೆ ಹುಟ್ಟಿಕೊಂಡಿವೆ. ಆಡು ನುಡಿಗಳ ಅಧ್ಯಯನದಲ್ಲಿ ಭಾಷೆಯನ್ನು ಸಂದರ್ಭದಿಂದ ಪ್ರತ್ಯೇಕಿಸಿ ನೋಡುವುದು ಸಾಧ್ಯವಾಗುವುದಿಲ್ಲ. ಒಂದು ಭಾಷೆಯನ್ನು ಆ ಭಾಷಿಕ ಸಮುದಾಯದ ಸಂಸ್ಕೃತಿಯ ಸಂದರ್ಭದಲ್ಲೇ ಅರ್ಥಮಾಡಿಕೊಳ್ಳಬೇಕಾಗುತ್ತದೆ. ಸಮಾಜ ಶ್ರೇಣೀಕೃತವಾಗಿ ನೆಲೆಗೊಂಡಿದೆ ಲಿಂಗಾಧಾರಿತವಾಗಿದೆ (ಲಿಂಗ ತಾರತಮ್ಯತೆಯಿಂದ). ಈ ಸ್ಥಿತ್ಯಂತರದಲ್ಲಿ ಸಾಮಾಜಿಕ ನೀತಿ-ನಿರ್ಬಂಧಗಳು ನಿಷೇಧಗಳು ಹೇಗೆ ಮರು ರಚನೆಗೊಂಡಿವೆ ಎಂಬುದಕ್ಕೆ ಪ್ರಸ್ತುತ ಅಧ್ಯಾಯದಲ್ಲಿ ಒತ್ತು ನೀಡಲಾಗಿದೆ.

ಭಾಷೆಯೊಳಗೆ ಎಲ್ಲ ಅರ್ಥಗಳು ನಿಹಿತವಾಗಿರುವುದಿಲ್ಲ. ಭಾಷೆ ಅದನ್ನಾಡುವ ಭಾಷಿಕ ಸಮುದಾಯದ ಎಲ್ಲರಲ್ಲಿ ತಿಳುವಳಿಕೆಯ ರೂಪದಲ್ಲಿ ಇದ್ದರೂ ಬಳಕೆಯ ಸಂದರ್ಭದಲ್ಲಿ ಅದು ಸದಾ ಒಂದೇ ರೂಪದಲ್ಲಿರುವುದಿಲ್ಲ. ಮಾತನಾಡುತ್ತಿರುವವರು ಯಾರು? ಸಮಾಜದಲ್ಲಿ ಅವರ ಸ್ಥಾವನೇನು? ಎನ್ನುವುದನ್ನು ಗಮನಿಸಬೇಕು. ಜೊತೆಗೆ ದೈನಂದಿನ ಚಟವಟಿಕೆಯ ಸಂದರ್ಭವೇ? ಸಂಭಾಷಣೆಯಲ್ಲಿ ಭಾಗವಹಿಸುವವರ ಪಾತ್ರ ಮತ್ತು ಅವರ ಸ್ಥಾನವನ್ನು ನಿರ್ಧರಿಸುತ್ತದೆ. ಹೀಗಾಗಿ ಭಾಷೆಯನ್ನು ದೇಶ ಕಾಲ ಸಂದರ್ಭಗಳಿಂದ ಬೇರ್ಪಡಿಸಿ ನೋಡುವುದು ಸಾಧ್ಯವಾಗುವುದಿಲ್ಲ.

ದೈನಂದಿನ ವ್ಯವಹಾರಗಳಲ್ಲಿ ಬಳಸಲಾಗುವ ಭಾಷೆಯ ಸ್ವರೂಪ ಒಂದು ಬಗೆಯದಾಗಿದೆ. ವಿಶೇಷ ಸಂದರ್ಭದ ಆಚರಣೆಗಳಲ್ಲಿ ಬಳಸುವ ಭಾಷೆಯ ಬಗೆಯೆ ಬೇರೆ ಸ್ವರೂಪದ್ದಾಗಿರುತ್ತದೆ.

ಇಲ್ಲಿ ಮಂತ್ರ, ಹಾಡು,  ಉದ್ಘೋಷಗಳು, ಉದ್ಗಾರ ಎಲ್ಲವು ಸಂವಹನದ ಭಾಗವಾಗಿರುತ್ತದೆ. ಅಲ್ಲದೆ, ಸಂವಹನದಲ್ಲಿ ಭಾಗವಹಿಸುವವರ ಪಾತ್ರಗಳು ಮತ್ತು ಸ್ಥಾನವೂ ವಿಶಿಷ್ಟವಾದುದಾಗಿರುತ್ತದೆ. ಹೀಗಾಗಿ ಪ್ರತಿ ಸಂವಹನ ಸಂದರ್ಭವೂ ಮತ್ತು ಸಮಾಜ ನಂಟಿನ ಸೂಚಕವಾಗಿದೆ.

ಸಮಾಜದ ಜನರು ಒಟ್ಟಾಗಿ ಇರುವಾಗ ಇವರೆಲ್ಲರೂ ಒಟ್ಟಾಗಿ ಕೆಲವು ಅಘೋಷಿತ ನಿಯಮಗಳನ್ನು ಸಂಭಾಷಣೆಯ ಸಂದರ್ಭದಲ್ಲಿ ಪಾಲಿಸುತ್ತಾರೆ. ಈ ನಿಯಮಗಳು ಅಲ್ಲಿನ ಸಾಮಾಜಿಕ ರಚನೆಗೆ ಅನುಸಾರವಾಗಿ ಇರುತ್ತದೆ.

ಉದಾ: ಆಚರಣೆಗಳಲ್ಲಿ ಯಾವ ಸಂದರ್ಭದಲ್ಲಿ ಏನನ್ನು ಹೇಳಬೇಕು. ಗಂಡಸರ ಗುಂಪಿನಲ್ಲಿ ಹೆಣ್ಣು ಮಾತಾಡಕೂಡದು. ಮೇಲುಜಾತಿಯವರೊಡನೆ ಮಾತಾಡುವಾಗ ಕೈಕಟ್ಟಿ ನಿಲ್ಲಬೇಕು. ಒಂದು ಸನ್ನಿವೇಶದಲ್ಲಿ ಮಾತುಕತೆ ನಡೆಯುತ್ತಿರುವ ಸಂದರ್ಭದಲ್ಲಿ ಅಲ್ಲಿ ಬಳಸುವ ಪದಗಳು, ವಾಕ್ಯಗಳು, ಬಳಕೆಯಾಗುತ್ತಿರುವ ವಿಧಾನ ಒಬ್ಬರಾದ ಬಳಿಕ ಒಬ್ಬರು ಮಾತಾಡುವ ರೀತಿ ಆ ಅಭಿವ್ಯಕ್ತಿಯನ್ನು ಅರ್ಥಮಾಡಿಕೊಳ್ಳುವಲ್ಲಿ ನೆರವಾಗುತ್ತದೆ. ಪ್ರಸ್ತುತ ಅಧ್ಯಾಯದಲ್ಲಿ ಸಮಾಜದಲ್ಲಿ ಮಹಿಳೆಯರು ದೈನಂದಿನ ಸಂದರ್ಭ ಮತ್ತು ವಿಶೇಷ ಸಂದರ್ಭಗಳಲ್ಲಿ ಬಳಸುವ ಭಾಷೆ ಮತ್ತು ಸಮಾಜದ ಸಂಬಂಧ ಕುರಿತಂತೆ ಏನನ್ನು ಸೂಚಿಸುತ್ತದೆ ಎಂಬುದನ್ನು ಚರ್ಚಿಸಲಾಗಿದೆ.

ಸಮಾಜ ಶ್ರೇಣೀಕೃತವಾಗಿ ವಿಂಗಡಣೆಗೊಂಡಿದೆ ಮತ್ತು ಲಿಂಗತಾರತಮ್ಯತೆಯಿಂದ ಕೂಡಿದೆ. ಹಾಗೂ ಈ ಶ್ರೇಣೀಕರಣ ಮತ್ತು ಲಿಂಗ ತಾರತಮ್ಯತೆಯಿಂದ ಕೂಡಿರುವ ಸಮಾಜದ ವರ್ತನೆ ಭಾಷಿಕ ವರ್ತನೆಯಲ್ಲಿ ಕಾಣುತ್ತದೆ. ಜಾತಿ, ವರ್ಗ, ಲಿಂಗ, ವಯಸ್ಸು ಶಿಕ್ಷಣ, ಪರಿಚಿತರೆ ಅಪರಿಚಿತರೇ ಈ ಮುಂತಾದ ಸಾಮಾಜಿಕ ಸಂಗತಿಗಳು ಸಂಭಾಷಣೆಯ ಸ್ವರೂಪವನ್ನು ನಿರ್ಧರಿಸುತ್ತವೆ 'ದೈನಂದಿನ ಭಾಷಿಕ ಕೊಡುಕೊಳೆಗಳು ಸಾಂಕೇತಿಕ ಅಧಿಕಾರ ಸಂಬಂಧಗಳನ್ನು ಸ್ಥಾಪಿಸುತ್ತವೆ' ಎಂದು ಫ್ರೆಂಚ್ ಸಮಾಜಶಾಸ್ತ್ರಜ್ಞ ಪಿಯರೆ ಬೋರ್ದೋ ಹೇಳುತ್ತಾನೆ.

ಕುಟುಂಬದೊಳಗೆ ಸಂವಹನ ನಡೆಯುವ ಸಂದರ್ಭವೂ ಸಾಂಪ್ರದಾಯಿಕ ಲಿಂಗ ತಾರತಮ್ಯತೆಯ ಸಂದರ್ಭವೇ ಆಗಿದೆ. ಕುಟುಂಬದೊಳಗೆ ಹಿರಿಯರು, ಕಿರಿಯರು, ಹೆಂಗಸರು ಮತ್ತು ಗಂಡಸರು ಎಂಬ ವಿಂಗಡಣೆ ಮುಖ್ಯವಾಗುತ್ತದೆ. ಮೇಲಿನ ಎಲ್ಲ ಸಂದರ್ಭಗಳಲ್ಲಿ ಮಾತುಕತೆಯಲ್ಲಿ ಭಾಗವಹಿಸುವಾಗ ಲಿಂಗ ನಿರ್ಧಾರಕ ಸಂಗತಿಯಾಗಿದೆ. ದೈನಂದಿನ ವ್ಯವಹಾರಗಳಲ್ಲಿ ಹೆಂಗಸರ ಭಾಷಿಕ ವಲಯ ಸ್ಪಷ್ಟವಾಗಿ ನಿಗದಿಯಾಗಿರುವುದು ಕಂಡುಬರುತ್ತದೆ. ಅವರ ಸೂಚನೆಯನ್ನು ಪಾಲಿಸುವುದಷ್ಟೆ ಹೆಂಗಸರ ಕೆಲಸ. ಅವರ ಕಾಡುಹರಟೆ ಬಿಚ್ಚಿಕೊಳ್ಳುವುದು ಒಳಸ್ತರದಲ್ಲಿ ಮತ್ತು ಮಹಿಳೆಯರ ಇರುವ ಕೆಲಸದ ವಲಯದಲ್ಲಿ ವ್ಯವಹಾರಕ್ಕೆ ಸಂಬಂಧಿಸಿದ ಸಂಗತಿಗಳಲ್ಲಿ ಹೆಂಗಸರ ಭಾಗವಹಿಸುವಿಕೆ ಪುರುಷರ ದೃಷ್ಟಿಯಲ್ಲಿ 'ಅಧಿಕ ಪ್ರಸಂಗತನ' ಎನಿಸಿಕೊಳ್ಳುವುದು ಸಾಮಾನ್ಯವಾಗಿ

ಕಾಣಿಸುವ ಸಂಗತಿ. ಹೆಂಗಸು ಗಂಡಸರೊಡನೆ ಕೂತು ಮಾತಾಡುವುದು ಹೆಂಗಸು ಇರಬೇಕಾದ ರೀತಿಗೆ ವಿರುದ್ಧ ನಡೆದುಕೊಂಡಂತೆ ಪತಿ ಪತ್ನಿಯರು ಹಿರಿಯರ ಎದುರಿಗೆ ಇರುವ ಸಂದರ್ಭದಲ್ಲಿ ಒಬ್ಬರೊಡನೆ ಒಬ್ಬರು ಸಲಿಗೆಯಿಂದ ಮಾತಾಡುವಂತಿಲ್ಲ.

ಲಿಂಗ ಮತ್ತು ಜಾತಿ ಹಾಗೆ ದಿನನಿತ್ಯದ ಸಂದರ್ಭಗಳಲ್ಲಿ ವಯಸ್ಸು ನಿರ್ಧಾರಕ ಸಂಗತಿಯಾಗಿದೆ. ಹಿರಿಯರೆದುರಿಗೆ ಮಹಿಳೆಯರು ಸರಿಸಮಾನಾಗಿ ನಿಂತು ಮಾತಾಡುವುದು ಈ ಸಮಾಜದಲ್ಲಿ ಉದ್ಧಟತನದ ಸಂಕೇತವಾಗಿದೆ. ಅವಿಭಕ್ತ ಕುಟುಂಬಗಳಲ್ಲಿ ಮನೆಯ ಯಜಮಾನನ ಮಾತಿಗೆ ಮಾನ್ಯತೆ 'ಯಜಮಾನನ' ಎದುರು ತಲೆಯೆತ್ತಿ ಗಟ್ಟಿಯಾಗಿ ಮಾತಾಡುವುದಾಗಲಿ, ಸಲಿಗೆಯಿಂದ ವರ್ತಿಸುವುದನ್ನು ನಿಷೇಧಿಸಿದೆ. ಅವನ ಮಾತು ಮೀರಿ ನಡೆಯುವುದು, ಮಾತಿಗೆ ಪ್ರತಿಯಾಡುವುದು ಇವು ಆಕ್ಷೇಪಾರ್ಹ ನಡವಳಿಕೆಗಳು.

**ಭಾಷಿಕ ವರ್ತನೆ ಕುರಿತು ಸಾಮಾನ್ಯ ತಿಳುವಳಿಕೆಗಳು**

ದೈನಂದಿನ ಸಂದರ್ಭದಲ್ಲಿ ಭಾಷೆಯ ಬಳಕೆಯ ಜೊತೆಗೆ ಭಾಷಿಕ ವರ್ತನೆಯ ಬಗೆಗೂ ನಿರ್ಧಿಷ್ಟ ನಿಯಮಗಳಿರುವುದು ಕಂಡುಬರುತ್ತದೆ.

**ನೆಲ ನೋಡಿಕೊಂಡು ಮಾತಾಡುವುದು:** ನೆಲ ನೋಡಿ ಮಾತಾಡುವುದು ಹೆಣ್ಣು ಮಕ್ಕಳ ವಿಷಯದಲ್ಲಿ ಲಜ್ಜೆಯ ಸಂಕೇತವಾದರೆ, ಗಂಡಸರು ಹಾಗೆ ಮಾತಾಡಿದರೆ ಅದು ಅಪ್ರಾಮಾಣಿಕತೆಯ ಸಂಕೇತ. ಮುಖ ನೋಡಿ ಎದುರಿಸಲು ಧೈರ್ಯವಿಲ್ಲದವ ನೆಲನೋಡಿ ಮಾತಾಡುತ್ತಾನೆ ಎಂಬುದು ಸಮಾಜದಲ್ಲಿ ಬೇರೂರಿರುವ ನಂಬಿಕೆ. ಮಹಿಳೆ ಪುರುಷನಿಗೆ ಮುಖಕ್ಕೆ ಮುಖ ಕೊಟ್ಟು ಮಾತನಾಡಬಾರದು. ಇದು ಸಾಮಾಜಿಕ ನಿಷೇಧ.

**ಕೈಬಾಯಿ ಸನ್ನೆ ಮಾಡಿ ಮಾತಾಡುವುದು**: ಪುರುಷರ ಎದುರು ಮಹಿಳೆಯರು ಕೈತೋರಿಸಿ ಹುಬ್ಬು ಹಾರಿಸಿ ಮಾತಾಡುವುದು ಉದ್ಧಟತನ, ಅಹಂಕಾರ, ವಾಚಾಳಿತನದ ಸಂಕೇತ. ಎದುರಿಗೆ ಗಂಡಸರು ಅಥವಾ ಹಿರಿಯರು ಇದ್ದಾಗ ಪರಿವೆ, ಇಲ್ಲದೆ ಅತಿಯಾದ ಆಂಗಿಕ ಅಭಿನಯದ ಮೂಲಕ ತನಗೆ ಎಲ್ಲ ತಿಳಿದಿದೆ ಎಂಬ ಹಮ್ಮಿನಿಂದ ಮಾತಾಡುವುದನ್ನು ಸಂಕೇತಿಸುತ್ತದೆ. ಸಮಾಜ ಮಹಿಳೆಯಿಂದ ಇಂತಹ ನಡವಳಿಕೆಯನ್ನು ವಿರೋಧಿಸುತ್ತದೆ. ಮಹಿಳೆ ತಗ್ಗಿಬಗ್ಗಿ ನಡೆದುಕೊಳ್ಳಬೇಕು ಮತ್ತು ಕೆಳದನಿಯಲ್ಲಿ ಮಾತನಾಡಬೇಕು.

**ಮುಟ್ಟಿ ಮಾತಾಡುವುದು:** ಸ್ಪಶ್ಯ ಅಸ್ಪಶ್ಯ ತಾರತಮ್ಯವಿರುವ ಸಮಾಜದಲ್ಲಿ ಭಾಷಿಕ ವರ್ತನೆಗಳಲ್ಲಿ ಸ್ಪರ್ಶ ಸಹಜವಲ್ಲ. ಮುಟ್ಟಿ ಮಾತಾಡುವುದು ಸಾಮಾನ್ಯವಾಗಿ ಕಂಡುಬರುವ ಸಂಗತಿಯಲ್ಲ. ಅದನ್ನು ಸಭ್ಯವರ್ತನೆ ಎಂದು ಪರಿಗಣಿಸಲಾಗುವುದಿಲ್ಲ. ಇನ್ನು ಹೆಣ್ಣು ಮಕ್ಕಳ ವಿಚಾರದಲ್ಲಂತೂ ಅದು ಅಸಭ್ಯತೆಯ ಪರಮಾವಧಿ ಎಂದೇ ಭಾವಿಸಲಾಗುತ್ತದೆ. ಒಂದು ವೇಳೆ ಪುರುಷನನ್ನು

ಮುಟ್ಟಿ ಮಾತನಾಡಿಸಿದರೆ ಅವಳ ನಡತೆ ಸರಿಯಿಲ್ಲ. ಅವಳು ಗಂಡಸರ ಮೈಮೇಲೆ ಹೇರಿ ಮಾತಾಡುತ್ತಾಳೆ ಎಂದು ನಿಂದಿಸುತ್ತಾರೆ.

**ಮಾತಿಗಿರುವ ಆಚರಣಾತ್ಮಕ ಮಹತ್ವ:** ಎಲ್ಲ ಆಚರಣೆಗಳಲ್ಲೂ ಹಾಡು, ಸಾಂದರ್ಭಿಕ ಪದ ಬಳಕೆಯಾಚೆಗೆ ಕಷ್ಟ ಸುಖಗಳಲ್ಲಿ, ಮಾತಾಡಿಸುವುದು ಕೂಡ ಆಚರಣೆಯ ಭಾಗವಾಗಿದೆ. ಹುಟ್ಟಿನ ಸಂದರ್ಭದಲ್ಲಿ 'ಮಗು ಮಾತಾಡ್ಸುದ್' ಬಯ್ಕಿ ಮದಿ ಸಂದರ್ಭದಲ್ಲಿ ಬಸ್ರಿ ಮಾತಾಡ್ಸುದ್ ಮತ್ತು ಸಾವಿನ ಸಂದರ್ಭದಲ್ಲಿ ಸತ್ತ ವ್ಯಕ್ತಿಯ ಮನೆಯವರನ್ನು ಸಂತೈಸುವ ಪ್ರಕ್ರಿಯೆಯಾಗಿ 'ಸಾವು ಮಾತಾಡ್ಸುದ್ ಇಲ್ಲೆಲ್ಲ ಮಾತಿಗೆ ವಿಶೇಷ ಸ್ಥಾನವಿದೆ. ಈ ಸಂದರ್ಭಗಳಲ್ಲಿ ಮಹಿಳೆಯರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಅವು ಕಥೆಗಳು, ಹಾಡುಗಳು, ಒಗಟುಗಳು, ಒಡಪುಗಳು ಈ ಮುಂತಾದ ಜಾನಪದೀಯ ರೂಪದಲ್ಲಿ ವ್ಯಕ್ತವಾಗುತ್ತವೆ.

**ಸಾಂದರ್ಭಿಕ ಪದಬಳಕೆ:** ವಿಶೇಷ ಸಂದರ್ಭಗಳಲ್ಲಿ ಮತ್ತು ಆಚರಣೆಗಳ ಸಂದರ್ಭದಲ್ಲಿ ಬಳಸುವ ಪದಗಳು ದೈನಂದಿನ ಸನ್ನಿವೇಶಗಳಲ್ಲಿ ಬಳಸುವ ಪದಗಳಿಗಿಂತ ವಿಶಿಷ್ಟವಾದುವಾಗಿರುತ್ತವೆ. ಉದಾ: ಮದುವೆ ಇನ್ನಿತರ ಕಾರ್ಯಕ್ರಮಗಳಲ್ಲಿ ಮುಂದಾಳತ್ವ ವಹಿಸಿ ಮಹಿಳೆ ಮಾತಾಡುವುದನ್ನು ನಿಷೇಧಿಸಲಾಗಿದೆ. ಅಂದರೆ ಮನೆಯ ಜವಾಬ್ದಾರಿ ತೆಗೆದುಕೊಳ್ಳುವ ಸಂದರ್ಭಗಳಲ್ಲಿ ಮಹಿಳೆಯರ ಮಾತಿಗೆ ಮನ್ನಣೆ ಇಲ್ಲ. ವ್ಯವಹಾರಿಕವಾಗಿ ಮನೆಯ ಎಲ್ಲ ಬಗೆಯ ನಿರ್ಣಯಗಳನ್ನು ಪುರುಷನೇ ತೆಗೆದುಕೊಳ್ಳಬೇಕು. ಮಹಿಳೆಯ ಅಭಿಪ್ರಾಯಕ್ಕೆ ಯಾವುದೇ ಮನ್ನಣೆಯಿರುವುದಿಲ್ಲ.

**ಧಾರ್ಮಿಕ ಸಂದರ್ಭದಲ್ಲಿ ಬಳಕೆಯಾಗುವ ಭಾಷೆ:** ಮಂತ್ರ, ಹಾಡು, ಹೇಳಿಕೆ, ಉಧ್ಘೋಷ ಮತ್ತು ಆಚರಣೆಗಳ ಸಂದರ್ಭದಲ್ಲಿ ಅದೃಶ್ಯ ಶಕ್ತಿಯೊಡನೆ ಮತ್ತು ಸಮೂಹ ಸಂವಹನ ಸಾಧಿಸುವಲ್ಲಿ ಗುಂಪಿನಲ್ಲಿ ಏಕತೆ ಸಾಧಿಸುವಲ್ಲಿ ದಿನನಿತ್ಯದ ಮಾತಿಗಿಂತ ಭಿನ್ನವಾದ ಭಾಷಿಕ ರೂಪಗಳು ಬಳಕೆಯಾಗುತ್ತವೆ. ಮಂತ್ರ, ಹಾಡುಗಳ ಸಂಧಿ, ಹೇಳಿಕೆ, ಉದ್ಗಾರಗಳು ಮುಂತಾದವನ್ನು ಇಲ್ಲಿ ಗಮನಿಸಲಾಗುತ್ತದೆ. ಈ ಬಗೆಯ ಕಾರ್ಯಕ್ರಮಗಳಲ್ಲಿ ಮಹಿಳೆ ಭಾಗವಹಿಸುವುದು ನಿಷೇಧಿಸಲಾಗಿದೆ. ಜೊತೆಗೆ ಮಹಿಳೆ ಕ್ಷೇತ್ರವು ಇದು ಆಗಿರುವಲ್ಲಿ ಪುರೋಹಿತ ಕಾರ್ಯದಲ್ಲಿ ಮಹಿಳೆಯನ್ನು ನಿಷೇಧಿಸಲಾಗಿದೆ. ಹಾಗಾಗಿ ಇಲ್ಲಿ ಬಳಸುವ ಭಾಷೆ ಮಹಿಳೆ ಸೀಮೆಯಿಂದ ಬೇರೆಯದೆ ಆಗಿದೆ.

ಋತುಮತಿ (ಹುಡುಗಿಯ ವ್ಯವಸ್ಥೆ) ಸಂಬಂಧಿತ ಮಹಿಳೆಯರ ವಿಚಾರಗಳು ಪುರುಷನಿಗೆ ತಿಳಿಯದಂತೆ ಮಾತನಾಡಿಕೊಳ್ಳುತ್ತಾರೆ. ಮಹಿಳೆ ತನ್ನ ನೈಸರ್ಗಿಕ ತಿಂಗಳ ಋತುಚಕ್ರ ಕುರಿತಂತೆ ಗಂಡಸರ ಜೊತೆಗೆ ಮಾತನಾಡುವುದಿಲ್ಲ. ಆ ವಿಷಯದ ಬಗೆಗಿನ ಯಾವುದೆ ಚರ್ಚೆ ಅವನ ಕಿವಿಗಳಿಗೆ ಬೀಳದಂತೆ ಈ ವಿಚಾರವನ್ನು ಗುಟ್ಟಾಗಿ ಮಾತಾನಾಡಿಕೊಳ್ಳುವಂತಹದು ಕಂಡುಬರುತ್ತದೆ. ತನ್ನ ನಡತೆ ಒಳಗಡೇನು ಸಹ ಈ ವಿಚಾರಗಳು ಗಂಡಸಿನ ಅರಿವಿಗೆ ಬರದಂತೆ ಎಚ್ಚರ

ವಹಿಸಿಕೊಳ್ಳುತ್ತಾಳೆ. ಟಿ.ವಿ. ಜಾಹಿರಾತಿನಲ್ಲಿ ಬರುವಂತಹ ಈ ಬಗೆಯ ಕಾರ್ಯಕ್ರಮಗಳನ್ನು ಮನೆಯ ಸದಸ್ಯರಾದ ಗಂಡಸರೊಟ್ಟಿಗೆ ಕೂತು ನೋಡದಂತಹ ಹಂತದವರೆಗೆ ಈ ವಿಚಾರ ಗೌಪ್ಯವಾಗಿ ನಡೆಯುತ್ತದೆ.

ಮಹಿಳೆಯರು ತಮ್ಮ ಒಳ ಒಡುಪುಗಳಿಗೆ ಸಂಬಂಧಿಸಿದಂತೆ ಘಟ್ಟಿಯಾದ ಧ್ವನಿಯಲ್ಲಿ ಮಾತನಾಡುವುದಿಲ್ಲ. ಮಹಿಳೆಯರು ತಮ್ಮ ವಲಯದ ಒಳಗೆ ಮಾತನಾಡಿಕೊಳ್ಳುವ ಸಂದರ್ಭ ಬಂದರೆ ಅವುಗಳಿಗೆ ಸಂಕೇತಗಳನ್ನು ಕೊಟ್ಟುಕೊಂಡು ಆ ಮೂಲಕ ಬಳಕೆ ಮಾಡುವುದು ರೂಢಿಯಲ್ಲಿದೆ.

ಮಹಿಳೆಯರು ತಮ್ಮ ಸ್ವಂತದ್ದು ಎನಿಸಿಕೊಂಡಿರುವಂತಹ ಯಾವ ವಿಚಾರವನ್ನು ಗಟ್ಟಿಯಾಗಿ ಮಾತಾಡಿ ಅದನ್ನು ಚರ್ಚಿಸುವುದಿಲ್ಲ. ಇಂತಹ ವಿಚಾರಗಳು ಗಂಡಸರ ಎದುರಿಗೆ ಮಾತನಾಡುವುದು ನಾಚಿಕೆಗೇಡಿನ ವಿಷಯ. ಇದಾವುದು ಪುರುಷನ ಕಿವಿಗಳಿಗೆ ತಲುಪದಂತೆ ತನ್ನ ಧ್ವನಿಯನ್ನು ಮೆದುವಾಗಿ ಮೆಲುವಾಗಿ ವ್ಯಕ್ತಪಡಿಸುತ್ತಾಳೆ. ಮಹಿಳೆಯ ಮಾತುಗಳಿಗೆ ಸಂಬಂಧಿಸಿದಂತೆ ಸಮಾಜದ ಜೊತೆಗೂ ಅಭಿಪ್ರಾಯವೂ ಕೂಡ ಇದೆ ಆಗಿದೆ. ಸಮಾಜ ಪೋಷಿಸುತ್ತಿರುವ ಅಥವಾ ನಿರ್ದೇಶಿಸುತ್ತಿರುವಂತಹ ಕೆಲವು ನಿರೂಪಣೆಗಳನ್ನು ಗಮನಿಸಿದಾಗ ಗಾದೆ, ಒಗಟು, ಒಡಪು, ಬೈಗುಳ ಅವುಗಳನ್ನು ಪೋಷಿಸುತ್ತವೆ. ಸಮಾಜದ ಮೌಲ್ಯಗಳನ್ನು ಕಾಲಮಾನಕ್ಕೆ ಅನುಗುಣವಾಗಿ ತಿಳಿಸುವಂತಹ ಜನಪದರ ಈ ನಿರೂಪಣೆಗಳನ್ನು ಕೆಳಗಿನಂತೆ ಗಮನಿಸಬಹುದಾಗಿದೆ.

**ಮಹಿಳೆಯ ಮಾತುಗಳನ್ನು ನಿಷೇಧಿಸುವಂತಹ ಗಾದೆಗಳು**

ಹಂಡೆ ಬಾಯಿ ಮುಚ್ಚಬಹುದು

ಮುಂಡೆಬಾಯಿ ಮುಚ್ಚಕಾಗಲ್ಲ.

"ಹೆಣ್ಣಿನ ಅಳು ಕಳ್ಳನ ನಗು"

ಮಾತು ಮನೆ ಕೆಡಿಸಿತು ತೂತು ಒಲೆಕೆಡಿಸಿತು.

ಹಾದರಗಿತ್ತೀ ಬಾಯಿ ಹಸೆ ಮುಂದೆ ನಿಲ್ಲದು

"ಮಂತ್ರಿ ಹೆಂಡತಿ ಎಂದಿದ್ದರೂ ಬಜಾರಿ"(ಆಧುನಿಕ ಗಾದೆ)

"ಗಂಡು ಕನ್ನಡ ಹೆಣ್ಣು ಕನ್ನಡ ಅಂತ ನಕ್ಕವನು ನಪುಂಸಕ!" (ಆಧುನಿಕ ಗಾದೆ)

"ಅಂಕೇಲಿರೋ ಹೆಣ್ಣು ಕೆಡೊಲ್ಲ

"ಮಜ್ಜಿಗೇಲಿರೋ ಬೆಣ್ಣೆ ಕೆಡೊಲ್ಲ."

"ಮಾತು ತಂದವಳು ಮಗಳಲ್ಲ

"ಕ್ಯಾತೆ ತಂದವಳು ಸೊಸಿಯಲ್ಲ"

"ಮಾವ ಹೇಳಿದಂಗ ಕೇಳೋ ಸೊಸೆ ಮುದ್ದು"

"ಹೆಣ್ಣಿನ ಬಾಯಿ ಹಿತ್ತಳೆ ಘಂಟೆ"

"ಹೆಣ್ಣಿನ ಬಾಯಿಯಲ್ಲಿ ಮಾತು ನಿಲ್ಲಲ್ಲ"

"ಮಾತೀಲೆ ಮನಿ ಸಾರ್ಸಿದ್ಧಂತ"

"ಹೆಣ್ಣು ಬಾಯಿ ತೆರೆದರೆ, ಮಣ್ಣು ಕೂಡ ಕೆಂಡವಾಗುತ್ತೆ"

**ಒಗಟುಗಳು**

"ಮಾತಾಡು ಮಾತಾಡು ಮಲ್ಲಿಗೆ ಮೊಗ್ಗೆ ಸೇವಂತಿಗೆ"

ಒಬ್ಬರನ್ನು ಕಟ್ಟಿದ್ದೆ,ಒಬ್ಬರನ್ನು ಬಿಟ್ಟಿದ್ದೆ'

ಒಬ್ಬರನ್ನು ಕರಕೊಂಡು ಬರುತಿದ್ದೆ ಮಲ್ಲಿಗೆ

ಯಾರನ್ನು ಕಟ್ಟಿದ್ದೆ? ಯಾರನ್ನು ಬಿಟ್ಟಿದ್ದೆ?

ಯಾರನ್ನು ಕರಕೊಂಡು ಬರುತ್ತಿದ್ದೆ ಮಲ್ಲಿಗೆ

ಹಸುವನ್ನು ಕಟ್ಟಿದ್ದೆ ಕರುವನ್ನು ಬಿಟ್ಟಿದ್ದೆ.

ಹಾಲನ್ನು ಕರಕೊಂಡು ಬರುತ್ತಿದ್ದೆ ಮಲ್ಲಿಗೆ

ಹರನ, ಹಾರನ ಆಹಾರನ ಸುತನ

ಮಿತ್ರನ ಭಾತೃವಿನ ಹೆಂಡತಿ

ನಿನಗೊಲಿದಳೋನನ ಗೊಲಿದಳೊ(ಪರಮೇಶ್ವರ, ಹಾವು, ಕುಂಭಕರ್ಣ ನಿದ್ದೆ

"ಚಟ್ ಪಟ್ ಲೇಡಿಗೆ ಒಂದೇ ಕಣ್ಣು"

"ಒಬ್ಬಳಿಗೊಂಬತ್ತು ಬಾಯಿ"

"ಮೂರು ಜನ ನಾರಿಯರು ಒಂದೆ ಬಾಯಲ್ಲಿ ಉಗುಳುತ್ತಾರೆ"

**ಒಡಪುಗಳು**

* ತಿದ್ದಿ ಮಾಡಿದ ಮಾತು ಮುಖ

ಮುದ್ದು ಮುದ್ದಾದ ಮಾತಿನ ಕಣಿ

ಬುದ್ದಿ ವಂತಿ.......ಬಾಳ್ವೆ ಮಾಡತಾಳ

* ಕೈಯಾಗ ಕೂಡಾ

ಸಣ್ಣನ್ನ ನಡಾ

ಬೈಲಿಯಾಕ ನಿಂತ್ರ

ಬಾಯಿ ಮುಚ್ಚುದಿಲ್ಲ ಗಡಾ.......

* ತಲ್ಯಾಗ ಇಲ್ಲ ಕೂದ್ಲ

ಮೈಯಾಗಿಲ್ಲ ರಕ್ತ

ಬಾಯಾಗ ಮಾತ್ರ ವಟವಟಾ......

* ಮಧುರ ಮಾತಕೇಳಿ

ಚದುರಿ ಮಬಸೋತ್ತಾಳ

ಇದರ‍್ಗೆ ನಿಂತ ಮಾತಾಡ್ತಳ.......

* ಮ್ಯಾಲ ಮ್ಯಾಲ ಬೆಳಕs

ಒಳಗ ಮಾತ್ರ ಹುಳಕs

ಬಾಯಿ ಮಾತ್ರ ಬಲು ಹರಕs.......

ಪೂಜಾಯ ಭಟ್ಟ

ಜುಟ್ಟ ಹಿಡಿಯುತನಕ

ಮಾತಾಡೋದಿಲ್ಲ

ಬಳಕೆಯ ಭಾಷೆಯೊಳಗಡೆ ಕೆಲವೊಂದು ರೂಪಗಳನ್ನು ಮಹಿಳೆ ಬಳಸದಂತೆ ನಿಷೇಧಿಸಲಾಗಿದೆ.

**ಸಂಭೋಧನ ರೂಪ:** ಗಂಡನನ್ನು ಮಾವನನ್ನು ಸಂಭೊಧಿಸುವಾಗ ಮಹಿಳೆ ಬಹುವಚನದಿಂದಲೇ ಸಂಭೋದಿಸಬೇಕು. ಗಂಡನನ್ನು ಹೆಸರಿನಿಂದ ಸಂಭೋದಿಸುವ ಹಾಗಿಲ್ಲ. ಇದನ್ನೆಲ್ಲ ಮಹಿಳೆಗೆ ನಿಷೇಧಿಸಲಾಗಿದೆ.

ಕನ್ನಡದ ನಿರೂಪಣೆಗಳಲ್ಲಿ ಮಹಿಳೆಯರು ತಮ್ಮ ಗಂಡನನ್ನು ಹೆಸರಿಡಿದು ಸಂಭೋದಿಸುವಂತಿಲ್ಲ ಎಂಬ ನಿಷೇದದಿಂದ ಆಗುವಂತ ತೊಂದರೆಗಳನ್ನು ತಮ್ಮ ಒಡಪುಗಳಲ್ಲಿ ವ್ಯಕ್ತಪಡಿಸುವಂತಹ ಕ್ರಮ ಹೀಗಿವೆ. ಇವು

೧. ನತ್ತ ಇಟ್ಕೊಂಡ ನಗಲಿಹ್ಯಾಂಗ

ಹಾದಿ ಮ್ಯಾಲ ಕುತ್ತಾನ ಹಾಯಲಿ ಹ್ಯಾಂಗ

ಕಚೇರ್‍ಯಾಗ ಕುತ್ತಾನ ಕರೀಲಿ ಹ್ಯಾಂಗ

೨. ಸರಪಳಿ ಇಟ್ಟನಿ, ಸಾಗಲಿ ಹ್ಯಾಂಗ

ಒಡ್ಯಾಣ ಇಟ್ಟವನಿ, ಬಾಗಲಿ ಹ್ಯಾಂಗ

ನತ್ತ ಇಟ್ಟನಿ ನಗಲಿ ಹ್ಯಾಂಗ

ಹತ್ತ ಮಂದ್ಯಾಗ ಕುತ್ತವರನ

ಕರೀಲಿ ಹ್ಯಾಂಗ

ಕನ್ನಡ ಭಾಷೆ ಬಳಕೆ ಸಂದರ್ಭದಲ್ಲಿ ಹೆಣ್ಣಿಗಾಗಿಯೇ ಕೆಲವು ಪದಗಳಿವೆ. ಹೆಣ್ಣಿಗೆ ಮಾತ್ರ ಸೀಮಿತಗೊಂಡಿರುವಂತಹ ಪದಗಳು ಅವು. ಸಮಾಜ ವ್ಯವಸ್ಥೆ ಒಳಗಡೆ ಪುರುಷನಿಗೆ ಪ್ರತಿಯಾಗಿ ಅಂತಹ ಪದಗಳಿಲ್ಲ.

**ಉದಾಹರಣೆಗೆ:** ಶ್ರೀಮತಿ, ಕುಮಾರಿ, ಮುತ್ತೈದೆ, ವಿಧವೆ, ರಂಡೆ ಮುಂಡೆ, ಬಂಜೆ, ಗೃಹಿಣಿ, ಗಯ್ಯಾಳಿ, ಬಜಾರಿ, ಗಂಡುಬೀರಿ, ಸುವರ್ಣ ಇತ್ಯಾದಿ.

ಸಮಾಜವು ಗಂಡು ಹೆಣ್ಣುಗಳ ವಿವಾಹದ ಹಂತದಲ್ಲಿ ತೋರುವ ತಾರತಮ್ಯದ ಅಂಶಗಳು ವ್ಯಕ್ತಿಯ ಹೆಸರುಗಳನ್ನು ಹೇಳುವಾಗ ಆಡುವ ಭಾಷೆಯಲ್ಲಿ ಸ್ಪಷ್ಟವಾಗಿ ಗೋಚರವಾಗುತ್ತದೆ. ಮದುವೆಯಾದ ಹೆಣ್ಣನ್ನು ಶ್ರೀಮತಿ ಎಂದು ಮದುವೆಯಾಗದ ಹೆಣ್ಣನ್ನು ಕುಮಾರಿ ಎಂದು ಗುರುತಿಸಲಾಗುತ್ತದೆ. ಆದರೆ ಗಂಡಸಿಗೆ ವಿವಾಹವಾಗಲಿ ಬಿಡಲಿ ಅವನು ಯಾವಾಗಲು ಶ್ರೀ ಯಾಗಿಯೇ ಉಳಿದಿರುತ್ತಾನೆ. ಕುಮಾರ ಎಂಬ ರೂಪವಿದ್ದರೂ ಅದು ಅಷ್ಟು ಮಹತ್ವ ಪಡೆದಿಲ್ಲ. ಅದನ್ನು ಹೆಚ್ಚಿಗೆ ಬಳಸುವುದಿಲ್ಲ. ಅವನು ವಿವಾಹಿತ ಅಥವಾ ಅವಿವಾಹಿತ ಎಂದು ಗುರುತಿಸುವ ಪ್ರತ್ಯೇಕ ಪದ ಭಾಷೆಯಲ್ಲಿ ಇದುವರೆಗೂ ರಚನೆಯಾಗಿಯೇ ಇಲ್ಲ. ಆದರೆ ಹೆಣ್ಣು ವಿವಾಹವಾಗುವವರೆಗೂ ಕುಮಾರಿಯಾಗಿದ್ದು, ವಿವಾಹದ ನಂತರ ಶ್ರೀಮತಿಯಾಗುತ್ತಾಳೆ. ಒಂದು ಹಂತದವರೆಗೆ ಕುಮಾರಿಯಾಗಿದ್ದು ಕುಮಾರಿ ಎನ್ನುವ ಪದದ ಬಳಕೆ ಸರಿಯೇನೋ. ಆದರೆ ಒಂದು ಹಂತವನ್ನು ದಾಟಿದ ಮೇಲೆ ಈ ಪದವೇ ಹೆಣ್ಣಿಗೆ ಅಪಮಾನಕ್ಕೆ ಮಾನಸಿಕ ಹಿಂಸೆಗೆ ಕಾರಣವಾಗುತ್ತದೆ. ಹೇಗೆಂದರೆ ಹೆಣ್ಣು ಅವಿವಾಹಿತಳಾಗಿಯೇ ಇದ್ದರೆ ಆಕೆಯನ್ನು 'ಕುಮಾರಿ' ಎಂದು ಕರೆಯುವ ಮೂಲಕ ನಗೆಗೆ ಅಥವಾ ಹಾಸ್ಯಕ್ಕೆ ಗುರಿಮಾಡಲಾಗುತ್ತದೆ. ಹಾಗೆಯೇ 'ಋತುಮತಿ'ಯಾಗದ ಹುಡುಗಿಯನ್ನು 'ಸುವರ್ಣ' ಎಂದು ಗುರುತಿಸಲಾಗುತ್ತದೆ.

ಇಷ್ಟೆ ಅಲ್ಲದೇ ವಿವಾಹವಾದ ನಂತರ ಗಂಡ ಇರುವ ಹೆಣ್ಣಿಗೆ 'ಮುತ್ತೈದೆ' ಎಂದೂ ಗಂಡ ಸತ್ತ ಹೆಣ್ಣಿಗೆ ವಿಧವೆ, ರಂಡೆ, ಮುಂಡೆ ಎಂದೂ ಕರೆಯಲಾಗುತ್ತದೆ. ಹೆಂಡತಿ ಸತ್ತ ಗಂಡಸಿಗೆ 'ವಿಧುರ' ಎಂಬ ಪದವಿದ್ದರೂ ಅದರ ಬಳಕೆ ಕಡಿಮೆ. ಅವನು ಮತ್ತೊಂದು ವಿವಾಹವಾಗಲು ಯಾವುದೇ ನಿರ್ಬಂಧವಿಲ್ಲದ ಕಾರಣ ಅದು ಸಮಾಜದಲ್ಲಿ ಅಷ್ಟೊಂದು ಪರಿಣಾಮಕಾರಿಯಾಗಿ ಬಳಕೆಯಲ್ಲಿಲ್ಲ. ಹಾಗೆಯೇ ಮಕ್ಕಳಾಗದ ಹೆಣ್ಣಿಗೆ 'ಬಂಜೆ' ಎನ್ನುವ ಪದವಿದೆ. ಮಕ್ಕಳಾಗದಿರುವಿಕೆಗೆ ಹೆಣ್ಣು-ಗಂಡು ಯಾರು ಬೇಕಾದರೂ ಕಾರಣರಾಗಿರಬಹುದು. ಆದರೆ ಸಮಾಜ ಹೆಣ್ಣನ್ನು 'ಬಂಜೆ' ಎಂದು ಕರೆಯುವ ಮೂಲಕ ಮಕ್ಕಳಾಗದಿರುವಿಕೆಗೆ ಆಕೆಯನ್ನು ಮಾತ್ರ ಹೊಣೆಗಾರಳನ್ನಾಗಿಸುತ್ತದೆ. ಸಾರ್ವತ್ರಿಕವಾಗಿ ವ್ಯಕ್ತಪಡಿಸಲು ಮತ್ತು ಕೇಳುಗ ಆಡುಗರಿಬ್ಬರಿಗೂ ಮುಜುಗರ ಉಂಟು ಮಾಡುವ ಅನೇಕ ವಿಷಯಗಳು ಇವೆ. ಇವುಗಳ ನಿರ್ವಹಣೆಗೆ ಭಾಷೆಯಲ್ಲಿ ಸಾಮಾಜಿಕರು ನಿವಾರಣಾತ್ಮಕ ರೂಪಗಳ ಮೂಲಕ ಅಥವಾ ಬೇರೊಂದು ಭಾಷೆಯ ಪದಗಳ ಮೂಲಕ ಸಂದರ್ಭವನ್ನು ನಿರ್ವಹಿಸುತ್ತಾರೆ. ಉದಾಹರಣೆಗೆ: ಬಹುಪಾಲು ಲೈಂಗಿಕ ಆವಯವ ಕ್ರಿಯೆಗಳ ಹೆಸರುಗಳನ್ನು ಔಪಚಾರಿಕ ಬರೆಹ ಮಾತಿನ ಬಳಕೆಯಲ್ಲಾಗಲಿ ಸಾಮಾನ್ಯವಾಗಿ ಪರ್ಯಾಯ ಇಂಗ್ಲಿಷ್ ಅಥವಾ ಸಂಸ್ಕೃತ ರೂಪಗಳನ್ನು ಬಳಸುತ್ತಾರೆ. ಇವುಗಳ ಮೂಲಕ ನೆಡ್ನ ಪದಗಳನ್ನು ಬಯ್ಗುಳದ ಸಂದರ್ಭದಲ್ಲಿ ಮತ್ತು ಅನೌಪಚಾರಿಕ ಆಪ್ತ ವಲಯದ ಮಾತುಗಳಲ್ಲಿ ಬಳಸುತ್ತಾರೆ. ವಿವರಣಾತ್ಮಕ ಪರ್ಯಾಯ ರೂಪದ ಪದಗಳನ್ನು ಬಳಸುವುದರಿಂದ ಆ ಪದದ ಮೂಲ ರೂಪ, ವಿಷಯ ಬಳಕೆಯಿಂದ ಉಂಟಾಗುವ ಮುಜುಗರವನ್ನು ತಪ್ಪಿಸಲಾಗುತ್ತದೆ.

ಉದಾಹರಣೆಗೆ:

ಋತುಮತಿ ಮೈನೆರೆ, ದೊಡ್ಡವಳಾಗು, ವಯಸ್ಸಿಗೆ ಬಾ

ಮುಟ್ಟುಮೆನ್ಸಸ್, ಹೊರಗಾಗು, ರಜವಾಗು

ಮಲ-ವಿಸರ್ಜನೆಗೆ ಬಾತ್‌ರೂಮಿಗೆ ಹೋಗು, ಚೆಂಬುತಗೊಂಡ ಹೋಗು, ದೊಡ್ಡಿಗೆ ಹೋಗು ಇತ್ಯಾದಿ.

ಮೂತ್ರ ವಿಸರ್ಜನೆ-ಕಾಲಮಡಿಯಲು, ವಂದಕ್ಕೆ, ರೀಸಿಸ್‌ಗೆ

ಮೇಲಿನ ಉದಾಹರಣೆ ಸಮಾಜಕರಲ್ಲಿ ಸರ್ವಸಾಮಾನ್ಯವಾಗಿ ಬಳಕೆಯಲ್ಲಿದ್ದರೆ ಇವುಗಳನ್ನು ಮಹಿಳೆಯರೂ ಗುಟ್ಟಾಗಿ ಬಳಸುವುದು ಕಂಡುಬರುತ್ತದೆ.

ಇದೇ ವಿಚಾರವನ್ನು ಮಾತನಾಡುವಾಗಲು ಮಹಿಳೆ ಮೇಲುಧ್ವನಿಯಲ್ಲಿ ಇವುಗಳ ಬಗ್ಗೆ ಮಾತನಾಡುತ್ತಾಳೆ. ಗಂಡಸರ ಎದುರಿಗೆ ಮಾತನಾಡಿದರೆ ಅಥವಾ ಇವುಗಳ ಬಗ್ಗೆ ಯಾವುದೇ ಮುಜುಗರ ವ್ಯಕ್ತಪಡಿಸದೆ ಸಲೀಸಾಗಿ ಮಾತನಾಡಿದರೆ ಅಂತಹ ಮಹಿಳೆಯನ್ನು 'ಬಜಾರಿ' ಗಂಡುಬೀರಿ

ಎಂದು ಸಮಾಜ ಅವಳನ್ನು ನಿಂದಿಸುತ್ತದೆ. ಬೈಗುಳ ಸಂದರ್ಭದಲ್ಲಿ ಈ ಬಗೆಯ ಲೈಂಗಿಕ ವಿಚಾರ ಕುರಿತಾದ ರೀತಿಯ ಬೈಗುಳಗಳನ್ನು ಬಳಸುತ್ತಾಳೆ. ಲೈಂಗಿಕವಾದ ಬೈಗುಳಗಳನ್ನು ಬಳಸುವ ಮಹಿಳೆಯನ್ನು ಸಮಾಜ ಗುರುತಿಸುವುದು 'ಬಜಾರಿ', 'ಗೈಯ್ಯಾಳಿ' ಎಂದು ಇವುಗಳನ್ನು ಮಾತಾಡದ ರೀತಿಯಲ್ಲಿ ಮಹಿಳೆಯ ಮೇಲೆ ನಿರ್ಬಂಧಗಳನ್ನು ಹೇರಲಾಗಿದೆ. ಸಮಾಜ ವ್ಯವಸ್ಥೆಯು ತನ್ನ ಹಿತಾಸಕ್ತಿಗಾಗಿ ಭಾಷೆಯನ್ನು ನಿಯಂತ್ರಿಸುತ್ತದೆ. ಏಕೆಂದರೆ ಭಾಷೆಯನ್ನು ನಿಯಂತ್ರಿಸುವುದೆಂದರೆ ಜನರು ಏನನ್ನು ಕುರಿತು ಯೋಚಿಸಬಲ್ಲರೋ ಯಾವುದು ಅವರ ಯೋಚನೆಗೆ ನ್ಯಾಯ ಬದ್ದವಾದದ್ದೋ ಅದನ್ನು ನಿಯಂತ್ರಿಸುವುದು ಎಂದರ್ಥವಾಗುತ್ತದೆ.

ಮಹಿಳೆಗೆ ಯಾವುದನೆಲ್ಲ ನಿಷೇಧಿಷಿದೆ ಎಂಬುದನ್ನು ಕೆಳಗಿನ ಜನಪದ ಗೀತೆಯಲ್ಲಿ ನಿರ್ದೇಶಿಸಿರುವುದು ಕಂಡುಬರುತ್ತದೆ.

**ಉದಾಹರಣೆಗೆ:** ಬಾಳಿಪಟ್ಟೇಯ ಸೇರಿ ಬಾಳಹೊತ್ತ್ ಉಡ್ ಬ್ಯಾಡ
ಬಾಗುಲಿ ಚಾಚಿ ನಿಲಬ್ಯಾಡ
ಬಾಗುಲಿ ಚಾಚಿ ನಿಲಬ್ಯಡ ತಂಗ್ಯಮ್ಮ
ಬಾವನಿಗೆ ಉತ್ರುವೇ ಕೊಡ್ ಬ್ಯಾಡ
ಅಕ್ಕಿಯ ಕಲ್ಲೆಕ್ಕಿ ಅಂಗಳದಲ್ ಕೆಡಿಬ್ಯಾಡ
ಮಾಯಿಗುತ್ತರವ ಕೊಡಬ್ಯಾಡ್"

ಸಮಾಜ ಮಹಿಳೆಯ ನಡವಳಿಕೆ ಹೇಗಿರಬೇಕು ಹೇಗಿರಬಾರದು ಎಂಬುದನ್ನು ನಿರ್ದೇಶಿಸುತ್ತದೆ. ಅವಳ ನಡವಳಿಕೆಗಳಲ್ಲಿ ಯಾವುದು ಇರಬಾರದು ಎಂದು ಸಲಹೆ ನೀಡಿ ಕಾಲದಿಂದ ಕಾಲಕ್ಕೆ ಇದನ್ನು ಮುಂದುವರೆಸಿಕೊಂಡು ಬರುವುದನ್ನು ಗಮನಿಸಬಹುದಾಗಿದೆ.

ಸಾರ್ವಜನಿಕ ಮತ್ತು ಆರ್ಥಿಕ ವಲಯಗಳಲ್ಲಿ ಹೆಣ್ಣಿನ ಸ್ಥಾನ ಇಂದು ಮೇಲೇರಿದೆ. ಹಿಂದೆ ಗಂಡಸರದೆಂದು ಭಾವಿಸಲಾದ ಭಾಷಿಕ ವಲಯಗಳಲ್ಲಿ ಇಂದು ಹೆಣ್ಣಿನ ಹಾಜರಿ ಕಾಣುತ್ತದೆ. ಕೌಟುಂಬಿಕವಾಗಿ ಹೆಣ್ಣಿನ ಪಾತ್ರದ ಬದಲಾವಣೆಯಲ್ಲಿ ಅವಿಭಕ್ತ ಕುಟುಂಬ ವಿಭಕ್ತ ಕುಟುಂಬಗಳ ವಿಘಟನೆಗೊಂಡದ್ದು ಗಮನಾರ್ಹ ಸಂಗತಿಯಾಗಿದೆ. ವಿಭಕ್ತ ಕುಟುಂಬಗಳಿಂದಾಗಿ ಹೆಣ್ಣು ಎದುರು ಬಂದು ಮಾತಾಡಲೇಬೇಕಾದ ಪರಿಸ್ಥಿತಿ ನಿರ್ಮಾಣವಾಗಿದೆ. ಇದು ಪರೋಕ್ಷವಾಗಿ ಹೆಣ್ಣು ಮುಂಬರಲು ಕಾರಣವಾಗಿದೆ. ಆಧುನಿಕ ಸಂದರ್ಭಗಳು ಮತ್ತು ಶಿಕ್ಷಣದಿಂದಾಗಿ ಹೆಣ್ಣಿಗೆ ಸಮಾನ ಅವಕಾಶಗಳು ಲಭ್ಯವಾಗಿದೆ. ಇದರಿಂದ ಸಾಂಪ್ರದಾಯಿಕವಾದ ಭಾಷಿಕ ವಲಯದ ಗಡಿಗಳು ಸಡಿಲವಾಗುತ್ತಿವೆ. ಹಿಂದೆ ಹೆಣ್ಣು ಮಕ್ಕಳಿಗೆ ನಿಷೇಧವಾಗಿದ್ದ ಅನೇಕ ಸಂಗತಿಗಳು ಇಂದು ಕಾಣುವುದಿಲ್ಲ. ಹೆಂಗಸರು

ಇಂದು ಸಾರ್ವಜನಿಕ ವಲಯಗಳಲ್ಲಿ ಗಂಡನ ಹೆಸರು ಹೇಳಲು ಆರಂಭಿಸಿದ್ದಾರೆ. ಆದರೆ ಮನೆಯೊಳಗೆ ಹೆಸರು ಹೇಳಿ ಕರೆಯುವುದಿಲ್ಲ. ಆದರೆ ಸಂದರ್ಭ ಬಂದಾಗ ಬೇರೆಯವರಿಗೆ ತಿಳಿಸಲು ಹಿಂಜರಿಯುವುದಿಲ್ಲ. ಆಧುನಿಕ ಸಂದರ್ಭದಲ್ಲಿ ಕಛೇರಿ ಶಾಲೆ ಚುನಾವಣೆಯ ಸಂದರ್ಭಗಳಲ್ಲಿ ಗಂಡನ ಹೆಸರು ತಿಳಿಸಲೇಬೇಕಾದ ಸಂದರ್ಭಗಳು ಹೆಚ್ಚಾಗಿದೆ. ಈಗ ಮೊದಲಿದ್ದ ನಿಷೇಧ ಅಳಿದು ಹೋಗಿದೆ.

ಜನಪದದಲ್ಲಿ ಮಹಿಳೆಯರ ಕೆಲವು ನಿರೂಪಣೆಗಳನ್ನು ಗಮನಿಸಿದರೆ ಆ ಮಾತುಗಳು ನಿಷೇಧಿಸಿರುವ ಸಮಾಜಕ್ಕೆ ಮೀರಿ ಮಾತಾಡುತ್ತಿರುವ ಮಹಿಳೆಯೊಬ್ಬಳು ಜನಪದ ತ್ರಿಪದಿಯೊಂದರಲ್ಲಿ ಕಂಡುಬಂದಿದೆ. ಉದಾಹರಣೆಗೆ

"ಮಾತ್‌ತ್ಗಿ ನಿನ್ ಮನೆಬೇಯ್ತದೆ ಅಂದ್ರೆ
ನಿಂತ್ ಬೇಯ್ಲಿ, ನಿಧಾನುಕ್ ಬೇಯ್ಲಿ
ಕೊಂತ್ ಬೇಯ್ಲಿ ಕುಪುಸ್ಕೊಂಡ್‌ಬೇಯಿಲ್ಲಿ
ಮಾತೊಂದುಂಟಾದ್ರೆ ಮರುದ್ ತಳುದಲ್
ಆಟ್ಕೊಂಡ್ ಉಣ್ತೇನಿ ಅಂದ್ಲಂತೆ."

ಮಹಿಳೆಯು ಸಮಾಜ ನಿಷೇಧಿಸಿರುವ ಮಾತಾಡದಂತೆ. ಕಟ್ಟಿರುವ ಅವಳ ಬಾಯಿಯನ್ನು ಯಾವುದೋ ಸಂದರ್ಭದಲ್ಲಿ ಬಿಚ್ಚಿದ್ದರೆ ಅದನ್ನು ಹೀಯಾಳಿಸುವ ರೀತಿಯ ನಿರೂಪಣೆಯಾಗಿ ಬರುತ್ತದೆ.

ಈ ಮಾತ್ಗತಿಯ ಮಾತು ಮೌಲ್ಯವಿರುತ್ತದೊ ಅಥವಾ ಬೇರೆಯಾದೋ ಎಂಬುದು ಸ್ಪಷ್ಟತೆಯಿಲ್ಲ. ಏಕೆಂದರೆ ಶತಮಾನಗಳಿಂದ ಮುಚ್ಚಿದ ಬಾಯಿಯನ್ನೂ ಎಲ್ಲೋ ಮಹಿಳೆಯರು ಒಟ್ಟಿಗೆ ಸೇರಿಕೊಂಡಾಗ ಮಾತಾಡುತ್ತಿರುವಂತಹ ಸ್ಥಿತಿಯಾಗಿದೆ.

**೪.೩. ಮುಕ್ತತೆ ಮತ್ತು ಸ್ವತಂತ್ರತೆಯ ನೆಲೆಗಳು**

ಮಹಿಳೆಯರು ಸ್ವತಂತ್ರ್ಯಕ್ಕೆ ಅರ್ಹರಲ್ಲ ಎಂಬ ಧರ್ಮಶಾಸ್ತ್ರವನ್ನು ಕಟ್ಟುನಿಟ್ಟಾಗಿ ಜಾರಿಗೆ ತರುತ್ತಾ ಬಂದ ವಿಲಕ್ಷಣವಾದ ಪರಂಪರೆ ಈ ಸಮಾಜದ್ದು. ಆದ್ದರಿಂದಲೇ ವೈದಿಕರನ್ನು ಒಳಗೊಂಡಂತೆ ಎಲ್ಲಾ ಆಳುವ ಸಮಾಜ ಹೆಣ್ಣಿಗೆ ಸಂಕೋಲೆಗಳನ್ನು ತೊಡಿಸಿವೆ. ಅವಳು ಯಾವ ಕ್ಷೇತ್ರದಲ್ಲೂ ನಿರ್ಣಯದ ಅಧಿಕಾರ ಪಡೆದಿಲ್ಲ. ಅವಳ ದೇಹದ ಮೇಲೆ ಮನಸ್ಸಿನ ಮೇಲೆ ಪುರುಷನು ಸರ್ವಾಧಿಕಾರ ಸ್ಥಾಪಿಸಿದ್ದಾನೆ. ಅವಳ ರೆಕ್ಕೆ ಪುಕ್ಕಗಳನ್ನು ಕತ್ತರಿಸಲಾಗಿದೆ. ಹೀಗಾದ ನಂತರ ಸಾಮುದಾಯಿಕ ವ್ಯವಹಾರದ ಪ್ರತಿನಿಧಿತ್ವವೆಲ್ಲ ಕುಟುಂಬಕ್ಕೆ ಪ್ರಮುಖನಾದ ಪುರುಷನಿಗೆ ದೊರೆಯುತ್ತದೆ.

ಜಾತಿ–ಪಂಚಾಯತಿಗಳಲ್ಲಿ ವಿವಾಹವನ್ನು ನಿಶ್ಚಯಿಸುವ ಅಥವಾ ವಿಚ್ಛೇದಿಸುವ ಇಲ್ಲವೇ ಸಮಾಜದ ವ್ಯವಹಾರಗಳಲ್ಲಿ ಸಂರಕ್ಷಣೆಯ ಸಂಗತಿಗಳಲ್ಲಿ ಪುರುಷರೇ ನಿರ್ಣಯಗಳನ್ನು ತೆಗೆದುಕೊಳ್ಳುತ್ತಾರೆ. ಕುಟುಂಬದ ಈ ರೀತಿಯ ಕಟ್ಟಳೆಯ ಮೂಲಕ ಸಾಮಾಜಿಕ ವ್ಯವಹಾರಗಳಲ್ಲಿ ಮಹಿಳೆಗೆ ಸ್ಥಾನವೇ ಇಲ್ಲವಾಯಿತು.

ಹೀಗಿದ್ದಾಗ ಮಹಿಳೆ ತನಗೆ ಅಗತ್ಯವಾಗಿರುವಂತಹ ಮುಕ್ತ ವಾತಾವರಣವನ್ನು ತನಗೇ ತಾನೆ ಸೃಷ್ಟಿಸಿಕೊಂಡಿದ್ದಾಳೆ. ಶತಶತಮಾನಗಳಿಂದ ತನ್ನ ಒಳಗಡೆ ಹುದುಗಿರುವಂತಹ ಎಷ್ಟು ವಿಚಾರಗಳನ್ನು ಹೊರಗಿಡುವಂತಹ ಅವಕಾಶವನ್ನು ತನಗೆ ತಾನೆ ಕಲ್ಪಿಸಿಕೊಂಡಿದ್ದಾಳೆ.

ಮಹಿಳೆ ತಾನು ಕಲ್ಪಿಸಿಕೊಂಡಿರುವ ಅವಕಾಶದ ಮೂಲಕ ಸಮಾಜವನ್ನು ವಿಮರ್ಶಿಸುತ್ತಾಳೆ ಮತ್ತು ತನ್ನ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಾಳೆ. ಶತಮಾನಗಳಿಂದಲೂ ತುಳಿತಕ್ಕೆ ಒಳಪಡಿಸಿರುವ ಪುರುಷ ವ್ಯವಸ್ಥೆಗೆ ಇದು ಪ್ರತಿಕ್ರಿಯೆಯಾಗಿರುತ್ತದೆ. ಮಹಿಳೆ ತಾನು ಸೃಷ್ಟಿಸಿಕೊಳ್ಳುವ ಈ ಮುಕ್ತ ವಾತಾವರಣ ನೆಲೆಗಳು ಮುಖ್ಯವಾಗಿ ಜಾನಪದೀಯ ರಚನೆಯೊಳಗಡೆ ಕಂಡುಬರುತ್ತದೆ. ಮಹಿಳೆಯರು ಸಭೆ ಸಮಾರಂಭಗಳಲ್ಲಿ ಹಾಡುವ ಜನಪದ ಗೀತೆಗಳಲ್ಲಿ ಗಂಡನ ಹೆಸರನ್ನು ಹೇಳುವ ಸಂದರ್ಭದ ಒಡಪುಗಳಲ್ಲಿ ಮಹಿಳೆ ತನಗೆ ಮುಕ್ತವಾದ ಭಾಷಾ ಬಳಕೆಗೆ ಸ್ವಾತಂತ್ರ್ಯವನ್ನು ಪಡೆದುಕೊಳುತ್ತಾಳೆ.

**ಉದಾಹರಣೆಗೆ:**

"ಅಕ್ಕಿಚೀಲ ಮ್ಯಾಲ ಕುಂತ
ಲೆಕ್ಕಾ ಮಾಡ್ತಾನ
ಲೆಕ್ಕ ಬರದಾಗಾನಾ
ಅಕ್ಕನ್ನ ಕರೀತಾನ"

"ಇನೂರ ರೂಪಾಯಿ ಬುಕ್ಕ
ಮುನ್ನೂರ ರೂಪಾಯಿ ಪೋಷಾಕ
ಆರೇಳ ಸಲ ನಾಪಾಸಾಗಿ ಇನ್ನು
ಕಲಿತೇ ನಂತಾನ ........."

"ದುಡ* ಬಿಚ್ಚಾಂವಲ್ಲಾದೊಪಾಹಾಕಾವಲ್ಲಾ
ಮಂತ್ರಾ ಮಾತ್ರ ಮಣಾರ ಹೆತ್ತಾನ......."

"ಮಾತಿನ್ಯಾಗ ಸೋಲಾವರಲ್ಲ
ರೀತಿ ಬಿಟ್ಟ ನಡ್ಯಾವರಲ್ಲ

ಪಿರತಿ ಒಂದಿದ್ದರ

ಅಂತಾವರ ಮತ್ಯಾರಿಲ್ಲ......."

"ಉಪ್ಪಿಟ್ಟಿಗೆ ಹಾಕೊದು ಉಪ್ಪ

ಕಾಪಿ ಕುಡೋದ ಕಪ್ಪ

ಮುಪ್ಪಿನಾವನ್ನ ಮಾಡಿಕೊಳ್ಳೋದು ಬ್ಹಾಳ ತಪ್ಪ......"

"ದಮ್ಮ ಅಕ್ಕಿ ಉಣ್ಣವಲ್ಲ

ಸಣ್ಣ ಅಕ್ಕಿ ತರವಲ್ಲ

ಮನ್ಯಾಗ ಇರವಲ್ಲ, ಮಾತ ಕೇಳವಲ್ಲ

ಇದ್ದಾಂತಾದ್ದ ನೀಡಾಣಾ ಎದ್ದೆದ್ದ ಹೊಕ್ಕಾನ...."

"ಕಸಕಸಿ ಉಂಡಿ, ಕಾಸಿದ ತುಪ್ಪ

ಕಾಸ್ಯಾಡಿ ಮಾತಿಗೆ ವಾಸ್ಯಾಡಿ

ಹೋಗತಾನ..."

ಮಹಿಳೆ ಗಂಡನ ಹೆಸರನ್ನು ಸಭೆ ಸಮಾರಂಭಗಳಲ್ಲಿ ಹೇಳುವಂತಹ ಸಂದರ್ಭಗಳಲ್ಲಿ ಆಕೆಯ ಗಂಡನ ಅಸಮರ್ಥತನ ಅವನ ಅವಗುಣಗಳು ಗಂಡನ ದಡ್ಡನ ಹೀಗೆ ವಿಚಾರಗಳನ್ನು ಮಹಿಳೆ ಒಡಪುಕಟ್ಟಿ ಹೇಳುತ್ತಾಳೆ. ಮತ್ತೆ ವಯಸ್ಸಾಗಿರುವವನನ್ನು ಅವಳಿಗೆ ಮದುವೆ ಮಾಡಿಸಿದರೆ ಅದನ್ನು ತಪ್ಪು ಎಂದು ವಿವರಿಸುತ್ತಾಳೆ. ಮಹಿಳೆಗೆ ಮುಕ್ತ ಸ್ವತಂತ್ರ ವಾತಾವರಣ ಇರೋದು ಸಮಾನ ವಯಸ್ಸಿನವರ ಮಧ್ಯೆಯಲ್ಲಿ ಮಹಿಳೆಗೆ ಎಲ್ಲಾ ವಲಯದಲ್ಲು ಬಾಯಿ ಮುಚ್ಚಿಸಲಾಗುತ್ತದೆ. ಆದರೆ ಮಹಿಳೆ ಸಮಾನ ಮನಸ್ಥಿತಿಯವರಲ್ಲಿ ಮುಕ್ತ ವಾತಾವರಣ ಇರೋದರಿಂದಲೇ ಅವಳು ತನ್ನ ಮನದಾಳದ ಮಾತುಗಳನ್ನು ಹಂಚಿಕೊಳ್ಳುತ್ತಾರೆ. ಗೆಳೆತನದ ಸಂಭಾಷಣೆಯಲ್ಲಿ ಯಾವುದೇ ನಿರ್ಬಂಧ ಇರೋದಿಲ್ಲ. ಪರಸ್ಪರ ಮಹಿಳೆಯರು ತಮ್ಮ ನೋವು ಕಷ್ಟಗಳನ್ನು ಹಂಚಿಕೊಳ್ಳುತ್ತಾಳೆ. ಈ ಸಂದರ್ಭವನ್ನು ಪ್ರತಿನಿಧಿಸುವ ಒಂದು ಉದಾಹರಣೆಯು ಜನಪದ ಹಾಡುಗಳಲ್ಲಿ ಸಿಗುತ್ತದೆ. ತಂದೆ-ತಾಯಿ ಅಕ್ಕ ಇತ್ಯಾದಿ ಸಂಬಂಧಗಳ ಒಳಗಡೆ ಹೇಳಿಕೊಳ್ಳಲಾರದ ವಿಷಯವನ್ನು ಗೆಳತಿಯರ ಮುಂದೆ ಹೇಳುವುದು ಜನಪದ ಗೀತೆ "ಕೆರೆಗೆ ಹಾರ" ಜನಪದ ಕಥನ ಗೀತೆಯಲ್ಲಿ ಸಿಗುತ್ತದೆ.

ಭಾಗೀರತಿಯನ್ನು ಕೆರೆಗೆ ಹಾರವಾಗಿ ಮಾಡಬೇಕು ಎಂದು ನಿರ್ಧರಿಸಿರುವಂತಹ ವಿಚಾರ ಭಾಗೀರತಿಗೆ ತಿಳಿದಿರುತ್ತದೆ. ಅಂತಹ ಸಂದರ್ಭದಲ್ಲಿ ಅವಳು ತವರುಮನೆಗೆ ಬಂದು ತನ್ನ ಕಷ್ಟವನ್ನು ಹೇಳಿಕೊಳ್ಳುವ ಸಂದರ್ಭ ಕೆಳಗಿನಂತಿವೆ.

“ಅತ್ತೆವ್ವಾ ನಾ ನಮ್ಮ ತವರುಮನಿಗೆ ಹೋಗಲೇನು!”

“ಸರ್ರನೆ ಹೋಗವ್ವಾ ಭರ್ರನೆ ಬಾರವ್ವ”

“ಸಣ್ಣ ಸೊಸಿ ಭಾಗಿರತಿ ತಮರುಮನೆಗೆ ಹೋದಾಳು

ಮನೆಮಂದ ಹೋಗುದಕ ಅವರಪ್ಪ ಬಂದಾನು”

“ಎಂದಿಲ್ಲದ ಭಾಗಿರತಿ ಇಂದ್ಯಾಕ ಬಂದೆವ್ವ?

ಬಾಡಿದ ಮಾರ್‍ಯಕ ಕಣ್ಣಾಗ ನೀರ್‍ಯಾಕ?”

“ನಮ್ಮಾವ ನಮ್ಮತ್ತೆ ಬ್ಯಾರೆ ಇಡುತಾರಂತೆ,”

“ಇಟ್ಟರೆ ಇಡಲೇಳು ಹೊಲಮನಿ ಕೊಡತೇನು”

“ಹೊಲಮನಿ ಒಯ್ದು ಹೊಳಿ ದಂಡ್ಯಾಗ್ಯಾಕಪ್ಪ”

“ಅತತ್ತ ಹೋಗುತಲಿ ಅವರವ್ವ ಬಂದಾಳು

“ಎಂದಿಲ್ಲದ ಭಾಗೀರತಿ ಇಂದ್ಯಾಕಳುತಾ ಬಂದೆ?”

“ನಮ್ಮತ್ತೆ ನಮ್ಮಾವ ಬ್ಯಾರೆ ಇಡುತಾರಂತೆ”

“ಇಟ್ಟರೆ ಇಡಲೇಳು ವಾಲಿಜೋಡು ಕೊಡುತೇನೆ”

“ವಾಲಿಯ ಜೊಡೋಲಾಯ್ದು ಒಲಿಯಾಗ ಹಾಕವ್ವ”

ಮುಂದಕತ್ತ ಹೋಗುತಲೆ ಅವರಕ್ಕ ಬಂದಳು

“ಎಂದಿಲ್ಲದ ಭಾಗೀರತಿ ಇಂದ್ಯಾಕ ಈ ದುಕ್ಕ?”

“ನಮ್ಮತ್ತೆ ನಮ್ಮಾವ ಬ್ಯಾರೆ ಇಡುತಾರಂತೆ”

“ಇಟ್ಟರೆ ಇಡಲೇಳ ಮಕ್ಕಳ ಜೋಡಿಗೆ ಕಳವತೇನೆ”

“ಮಕ್ಕಳಿಲ್ಲದ್ದರೇನಕ್ಕ ದುಕ್ಕ ಕಳದಾವೇನಾ?”

“ಸಣ್ಣಸೂಸಿ ಭಾಗೀರತಿ ತವರುಮನೆಯ ಬಿಟ್ಟು

ತಮರ ಮನೆಯ ಬಿಟ್ಟು ಗೆಣತಿ ಮನೆಗೆ ನಡೆದಳು

ತಲಬಾಗಿಲದಾಗ ಗೆಳತಿನ್ನ ಕಂಡಳು

“ಎಂದಿಲ್ಲದ ಭಾಗೀರತಿ ಇಂದ್ಯಾಕ ಈ ಅಳುವು”

ಅಂಜಿ "ಹೇಳಲಿ ಗೆಳತಿ"ಅಳುಕಿ "ಹೇಳಿಲಿ ಗೆಳತಿ?"

"ಅಂಜಬ್ಯಾಡ ಗೆಳತಿ ಅಳುಕಬ್ಯಾಡ ಗೆಳತಿ"

"ನಮ್ಮತ್ತೆ ನಮ್ಮಾವ ಕೆರೆಗ್ಹಾರಕೊಡತಾರಂತೆ"

"ಕೊಟ್ಟರೆ ಕೊಡಲೇಳು ಇಟ್ಹಾಂಗ ಇರಬೇಕು!

ಸರ್ರನೆ ಹೋದಳು ಭರ್ರನೆ ಬಂದಳು"

ಈ ಇಡೀ ಸಂದರ್ಭದಲ್ಲಿ ಮಹಿಳೆ ತನ್ನ ನೋವು ಸಂಕಷ್ಟವನ್ನು ಸಾಂಕೇತಿಕವಾಗಿ ತಂದೆ-ತಾಯಿ ಅಕ್ಕನಿಗೆ ವಿವರಿಸುತ್ತಾಳಾದರೂ, ನೇರವಾಗಿ ಅವಳು ಅವರ ಹತ್ತಿರ ಹೇಳಿಕೊಳ್ಳುವುದಿಲ್ಲ. ಅವಳಿಗೆ ಮುಕ್ತವಾಗಿ ಸ್ವತಂತ್ರವಾಗಿ ಹೇಳಿಕೊಳ್ಳುವುದಿಲ್ಲ. ಮಾತನಾಡುವಂತಹ ವಾತಾವರಣ ಎಂದರೆ ತನ್ನ ಸಮವಯಸ್ಸಿನ ಗೆಳೆತನದಲ್ಲೇ ಬಹುಷಃ ಈ ಕಾರಣಕ್ಕಾಗಿಯೆ ಇರಬೇಕು. ಮಹಿಳೆ ತನ್ನ ಮಾತುಗಳಿಗೆ ಮುಕ್ತ ಅವಕಾಶ ಇರುವಂತಹದು ಸಮವಯಸ್ಕನಲ್ಲಿಯೇ. ಹಾಗಾಗಿ ಮಹಿಳೆಯರು ಒಂದೆಡೆ ಸೇರಿದಾಗ ಹೆಚ್ಚು ಮಾತನಾಡುವುದು ಇರಬಹುದು. ಆದರೆ ಸಮಾಜ ಇದಕ್ಕೂ ಹರಟೆ ಎಂಬ ಅಪವಾದವೆಂಬಂತೆ ಅದನ್ನು ಒದಗದಂತೆ ನೋಡಿಕೊಳ್ಳುತ್ತಿದೆ. ಗೆಳತಿಯ ಬಳಿಯಲ್ಲಿ ಮಾತಾಡಿದ ತಕ್ಷಣ ತನ್ನ ಸಮಸ್ಯೆ ಪರಿಹಾರ ಆಗೊಲ್ಲ ಎಂದು ತಿಳಿದರೂ ಅವಳಿಗೆ ದೊರೆತಿರೋದು ಮುಕ್ತತೆಯ, ಸ್ವತಂತ್ರತೆಯ ವಲಯ ಆದೊಂದೆಯಾಗಿದೆ. ಇನ್ನು ಜನಪದ ಕಥೆಗಳ ವಿಷಯಕ್ಕೆ ಬಂದರೆ ಶತಮಾನಗಳಿಂದ ಅಜ್ಜಿ ಕಥೆಗಳಿವೆ, ವಿನಹಃ 'ಅಜ್ಜನ ಕಥೆಗಳಿಲ್ಲ'. ಮಹಿಳೆ ತನ್ನ ವಿಚಾರವನ್ನು ಹಂಚಿಕೊಳ್ಳಲು ಸಮಾಜದಲ್ಲಿ ಅವಕಾಶ ಇಲ್ಲದಂತಹ ಸಂದರ್ಭದಲ್ಲಿ ಈ ಕಥೆಗಳು ಬಹುಮಟ್ಟಿಗೆ ಹುಟ್ಟಿಕೊಂಡಿರಬೇಕು.

ಜೊತೆಗೆ ದೈನಂದಿನ ಬದುಕಲ್ಲಿ ಮಾತಿನ ಮೇಲೆ ನಿರ್ಬಂಧ ಇದ್ದ ಸಮುದಾಯದಲ್ಲಿ ಜನಪದ ಸಾಹಿತ್ಯ ಹೆಣ್ಣಿನೊಂದಿಗೆ ಬೆಸೆದುಕೊಂಡಿರುವುದು ಗಮನಿಸಬೇಕಾದ ಸಂಗತಿ. ಜನಪದ ಕಥೆಗಳು ಹೆಣ್ಣಿನ ಹೆಸರಿನಲ್ಲಿ ರಿಜಿಸ್ಟರ್ ಆಗುವುದನ್ನು ಗುರುತಿಸುತ್ತಾರೆ.[೧೦] ವಾಸ್ತವದ ಬದುಕಿನ ಆಕೆಯ ಪಾಡು ಮೌನ ಮಾತು ಪಡೆಯುವುದು ಜನಪದ ಕಥೆಗಳಲ್ಲಿ.

ಹೀಗಾಗಿ ಜನಪದ ಕಥೆಗಳು ಹಾಡುಗಳು ಮುಖ್ಯವಾಗಿ ಮಹಿಳೆಯ ಅಭಿವ್ಯಕ್ತಿಯ ದಾರಿಗಳಾಗಿವೆ. ಅವರು ಕ್ಷೇತ್ರಕಾರ್ಯಕ್ಕೆ ಹೋದ ಸಂದರ್ಭದಲ್ಲಿ ಮಹಿಳೆಯೊಬ್ಬಳ ಹೇಳಿದ ಮಾತು "ದಿನಾಲು ಕತೆ ಹೇಳು ಅಂಥ ಮಕ್ಕಳು ಹಟಮಾಡುತ್ತವೆ. ನನಗೂ ಕತೆ ಹೇಳ್ದೇ ಮಲಗಿದರೆ ನಿದ್ದೆ ಹತ್ತಲ್ಲ" ಎಂದು ಹೇಳುತ್ತಾಳೆ. ಮಹಿಳೆ ಕಥೆ ಹೇಳುವ ಉದ್ದೇಶ ತನ್ನ ಇಡೀ ದೈನಂದಿನ ದಿನಗಳಲ್ಲಿ ಸಹಿಸಿದ ಕಷ್ಟ ನೋವು ಮೌನದ ಹಿಂದಿನ ಆಕ್ರೋಶ ಎಲ್ಲವನ್ನು ಮಕ್ಕಳಿಗೆ ಮೊಮಕ್ಕಳಿಗೆ ಕಥೆ ಹೇಳುವುದರ ಮೂಲಕ ಅವುಗಳ ಅಭಿವ್ಯಕ್ತಿಸುತ್ತಾರೆ.

ಮಹಿಳೆ ತನ್ನ ಅಭಿವ್ಯಕ್ತಿ ಸ್ವತಂತ್ರಕ್ಕಾಗಿ ಈ ಬಗೆಯ ಮುಕ್ತ ವಾತಾವರಣವನ್ನು ಒದಗಿಸಿಕೊಂಡಿದ್ದಾಳೆ. ತಾಯಿ ತನ್ನ ಮಕ್ಕಳೊಟ್ಟಿಗೆ ಮಾತಾಡಲು ಮುಕ್ತ ಅವಕಾಶವಿದೆ. ಅಂದರೆ ಒಂದು ಹಂತದ ಒಂದು ವಯಸ್ಸಿನ ಮಕ್ಕಳ ಜೊತೆಗಷ್ಟೆ. ಪ್ರಾಯಕ್ಕೆ ಬಂದ ಮಕ್ಕಳು ತಾಯಿ ಮಾತನ್ನು ಕೇಳುವುದಿರಲಿ ತಾಯಿ ವಿಚಾರವನ್ನು ಲೆಕ್ಕಿಸುವುದಿಲ್ಲ. ಅವಳನ್ನು ನಿನಗೆ ಗೊತ್ತಾಗೊಲ್ಲ, ಸುಮ್ಮನಿರಮ್ಮ ಎಂದು ಬಾಯಿ ಮುಚ್ಚಿಸುತ್ತಾರೆ. ಜೀವನದ ಪ್ರಮುಖ ಘಟ್ಟಗಳಾದ ಬಾಲ್ಯ ಯೌವ್ವನ ಮದುವೆ ಸಾವುಗಳಲ್ಲಿ ಮತ್ತು ಗುಂಪಿನ ಅನೇಕ ಪ್ರಮುಖ ಚಟುವಟಿಕೆಗಳಲ್ಲಿಯೂ ಜನಪದ ಗೀತೆಗಳನ್ನು ಹಾಡಲಾಗುತ್ತದೆ. ಜೋಗುಳದ ಹಾಡುಗಳು, ಒಸಗೆಯರ ಹಾಡುಗಳು ಮದುವೆಯ ಹಾಡುಗಳು ಮರಣದ ಸಮಯದಲ್ಲಿ ಹಾಡುವ, ಹೊಗಳುವ ಪದಗಳು ಹೀಗೆ ಜೀವನದ ವಿವಿಧ ಘಟ್ಟಗಳಿಗೆ ಸಂಬಂಧಿಸಿದ ಹಾಡುಗಳಿವೆ.

ಈ ಹಾಡುಗಳು ಸಾಮಾನ್ಯವಾಗಿ ಹೆಂಗಸರ ಹಾಡುಗಳೆಂದೇ ಪ್ರಸಿದ್ಧವಾಗಿವೆ. ಜೀವನದುದ್ದಕ್ಕು ನೋವು ತಿರಸ್ಕಾರ ಮತ್ತು ಅಪಮಾನಗಳಿಗೆ ಬಲಿಯಾದ ಸ್ತ್ರೀ ಹೃದಯವನ್ನು ಕುರಿತವಾಗಿವೆ. ಕೆಲವು ಗೀತೆಗಳಲ್ಲಿ ಅಪರಿಚಿತರೊಡನೆ ಕಾಲ ನೂಕುವ ಹೆಣ್ಣಿನ ಭಾವನಾತ್ಮಕ ಪ್ರತಿಕ್ರಿಯೆಯಿದ್ದರೆ ಮತ್ತೆ ಕೆಲವು ಗೀತೆಗಳಲ್ಲಿ ಅವಳ ನೋವಿನ ಬದುಕಿನ ಚಿತ್ರಣವಿದೆ. ಸಹಾನುಭೂತಿ ಪರರಲ್ಲದ ಅತ್ತೆ ಮಾವಂದಿರು ಮೂದಲಿಸುವ ನಾದನಿಯರು ಅವಳ ಬಾಳನ್ನು ತೊಡೆಕುಗೊಳಿಸಿದುರ ವರ್ಣನೆಯಿದೆ. ಹೆಣ್ಣಿನ ನೋವು ಸಂಕಷ್ಟ ಸಮಾಜದ ಬಗೆಗಿನ ತಿರಸ್ಕಾರ ಬಗೆಗೆ ಈ ಹಾಡುಗಳು ಮಾತಾಗುತ್ತವೆ.

ಮಹಿಳೆಗೆ ಸಮಾಜದಲ್ಲಿ ಇಲ್ಲದೆ ಇದ್ದ ಮಾತಿನ ಅವಕಾಶ ಅಥವಾ ಅಭಿಪ್ರಾಯ ಹಂಚಿಕೊಳ್ಳುವುದಕ್ಕೆ ಇಲ್ಲದ ವಾತವಾರಣವನ್ನು ಈ ಸಂದರ್ಭಗಳು ಒದಗಿಸಿಕೊಡುತ್ತವೆ. ಈ ಅಭಿವ್ಯಕ್ತಿಯಲ್ಲಿ ಮಹಿಳೆ ಸಮಾಜದ ನಿರಂಕಷ ಮನೋಭಾವವನ್ನು ವಿರೋಧಿಸುತ್ತ ಹಾಡುತ್ತಾಳೆ.

**ಮರಣ ಸಂದರ್ಭದಲ್ಲಿ ಹಾಡುವ/ಹೊಗಳುವ/ತೆಗಳುವ ಪದಗಳು**

ಇವು ವ್ಯಕ್ತಿಯೊಬ್ಬ ತೀರಿಕೊಂಡಾಗ ಅವರ ರಕ್ತ ಸಂಬಂಧಿಗಳು ಶವದ ಮೇಲೆ ಬಿದ್ದು ಹೊರಳಾಡುತ್ತ/ತೆಗಳುತ್ತ ಎದೆಗುದ್ದಿಕೊಳ್ಳುತ್ತ ರಾಗಾಲಾಪ ಮಾಡುತ್ತ ಲಯಬದ್ಧವಾಗಿ ಹೇಳುವಂಥವಾಗಿವೆ. ಸಾವಿನ ಸಂದರ್ಭದಲ್ಲಿ ಮಾತ್ರ ಕೇಳಿಬರುವ ಈ ರಚನೆಗಳನ್ನು ಹಾಡುವುದರಲ್ಲಿ ಹೆಂಗಸರದ್ದೇ ಮೈಲುಗೈ. ಮೃತನ ಪ್ರಸಿದ್ಧಿ ಸಾಧನೆ ಧೈರ್ಯ ಸ್ಥೈರ್ಯಾದಿಗಳನ್ನು ನೆನೆದುಕೊಂಡು ರಾಗಾಲಾಪಗೈಯುತ್ತಾರೆ. ಸಾವು ಮಾನವ ಬದುಕಿನ ಕೊನೆಯ ಘಟ್ಟವಾದ್ದರಿಂದ ಆ ಸಂದರ್ಭದಲ್ಲಿ ಹಾಡುವ ಹೊಗಳುವ ಪದಗಳಿಗೆ ವಿಶೇಷ ಮಹತ್ವವಿದೆ. ಗಂಡನನ್ನು ಕಳೆದುಕೊಂಡ ಹೆಂಡತಿಯೊಬ್ಬಳು ಪ್ರಲಾಪಿಸುವ ಬಗೆ ಇಂತಿದೆ.

"ಅಯ್ಯೋನನ ದೇವ್ರೆ ನಿಮಗೇನು ಬಂದಿತಪ್ಪಾ

ಬಾಳೀನಂತ ಬಾಳೇನ ಹಾಕಿದ್ರಿ

ಬಾಳಗೊಡದೇ ಹೋದ ಯಮದೋನು

ಆದ ಅನ್ನಾಬಿಟ್ಟು ಕಾದ ನೀರು ಬಿಟ್ಟು

ನಮ್ಮನೆಲ್ಲಾ ಬಿಟ್ಟುಮನೆ ಬಿಟ್ಟು ಹೊಗ್ತೀರಲ್ಲಾ ದೇವ್ರೋ

ನಮುಗಿನ್ಯಾರಪ್ಪ ದೇವ್ರೇ"

ಹೀಗೆ ಈ ಮರಣದ ಸಂದರ್ಭದಲ್ಲಿ ಮಹಿಳೆ ಮಾತ್ರ ಭಾವೋದ್ವೇಗಗೊಂಡು ಅಳುತ್ತಾಳೆ. ತನ್ನ ಅಭಿಪ್ರಾಯವನ್ನು ಅಳುವುದರ ಜೊತೆಗೆ, ರಾಗಬದ್ಧವಾಗಿ ಹಾಡಿಕೊಳ್ಳುತ ಸತ್ತ ವ್ಯಕ್ತಿಯ ಬಗ್ಗೆ ಗುಣದೋಷಗಳನ್ನು ಹೇಳುತ್ತಾರೆ. ಸಮಾಜದಲ್ಲಿ ಮಹಿಳೆಗೆ ಬರಬಹುದಾದ ಮುಂದಿನ ತೊಂದರೆಗಳ ಬಗೆಗೆ ಈ ಹಾಡುಗಳಲ್ಲಿ ವಿವರಿಸುತ್ತಾಳೆ.

ಮಹಿಳೆಯರು ಗಾದೆಗಳಲ್ಲಿ ತಮಗೆ ಸಮಾಜ ನೀಡಿರುವಂತಹ ಲೈಂಗಿಕ ಮಾತುಕಥೆಗೆ ಸಂಬಂಧಿಸಿದ ನಿಷೇಧವನ್ನು ಅವರು ಮೀರೂವಂತಹದ್ದು, ಮಹಿಳೆಯರು ಬಳಸುವಂತಹ ಗಾದೆಗಳಲ್ಲಿ ಕಂಡುಬರುತ್ತದೆ. ಉದಾಹರಣೆಗೆ

"ಹಗೆಯವರು ಬರ್ತಾರೆ ಹಲ್ಲು ಮುಚ್ಚು ಅಂದ್ರೆ"

"ನಾನೇನು ಮಾಡಾನೆ ತುಟಿ ತುಂಡ ಅಂದ್ಲಂತೆ"

"ಕಡಿಲಾರದ ಕತ್ತಿ ಕೈಯ್ಯಾಗಿದ್ರೇನಂತ ಮಾಡಲಾರದ ಗಂಡ್ಸು ಮಗ್ಗಲಾಗಿದ್ರೇನಂತ"

"ಏಳಲಾರದೊನ್ಗೆ ಏಳಜನ ಹೆಂಡ್ರು ಮೇಲೊಬ್ಬಳು ಸೂಳೆ ಎದ್ದು ಮಾಡ,

ನಿದ್ದೇನು ಕೊಡ"

ಹೀಗೆ ಮಹಿಳೆಯರು ಸ್ನೇಹ ಸಂಬಂಧದೊಳಗಡೆ ತಮ್ಮ ಅಭಿವ್ಯಕ್ತಿಗೆ ಬೇಕಾದ ಅವಕಾಶವನ್ನು ಮಾಡಿಕೊಳ್ಳುತ್ತಾರೆ. ಗಂಡನನ್ನು ಕುರಿತು ಹೆಣ್ಣು ಅದೇಷ್ಟೆ ಧೈರ್ಯದಿಂದ ತನ್ನ ಸ್ವಂತದ ವಿಷಯವನ್ನು ತೋಡಿಕೊಂಡಿದ್ದಾಳೆ. ಮತ್ತೆ ಇದೆ ಬಗೆಯ ಇನ್ನೊಬ್ಬ ಮಹಿಳೆ ಅತ್ಯಂತ ಸುಲಭದ ಕೆಲಸಕ್ಕೆ ಮುನ್ನುಗ್ಗುವ ತನ್ನ ಗಂಡನನ್ನು ತನ್ಮೂಲಕ ಆತನ ಪುರುಷ ಶಕ್ತಿಯನ್ನು ನಯವಾಗಿ ಗಾದೆಯ ಮೂಲಕ ಛೇಡಿಸಿದ್ದಾಳೆ.

"ಭಾಲೆದಿಂಡು ಕಡಿಯಕೆ ನನ್ನ ಗಂಡ ಗೂಳಿಹಾಗೇ"

ಹೆಣ್ಣಿನ ಎಲ್ಲ ಹಂತಗಳೂ ಸ್ವಾತಂತ್ರ್ಯವನ್ನು ನಿರಾಕರಿಸಿದೆ ಎಂದು ಹೇಳಲು ಬರುವುದಿಲ್ಲ. ಆಕೆ ಪುರುಷ ಆಲೋಚನೆಯ ಪರದಿಯೊಳಗೆ ಸ್ವಾತಂತ್ರ್ಯದ ಉಸಿರಾಡಿಕೊಂಡಿರಬಹುದಾದ ಅವಕಾಶ ಕೊಟ್ಟಿದೆ. ಆದರೆ ಹೆಣ್ಣು ತಾನೇ ಸ್ವಂತ ವಿವೇಚನೆ ನಡೆಸಲು ಮತ್ತು ತನ್ನ ಇಚ್ಛೆಯಂತೆ ನಡೆದುಕೊಳ್ಳಲು ನಿರಾಕರಿಸುತ್ತದೆ. ಹೆಣ್ಣು ಪುರುಷನಿಗೆ ಹಿತವಾಗುವಂತೆ ನಡೆದುಕೊಳ್ಳುವುದು ಸ್ವತಂತ್ರ್ಯವೆಂದೂ ತನಗೆ ಹಿತವಾಗುವಂತೆ ಸ್ವೇಚ್ಛೆಯಿಂದ ನಡೆದುಕೊಳ್ಳುವುದು ಸ್ವಚ್ಛಾಚಾರವೆಂದು ನಿರೂಪಿಸಿ ಹೇಳಿ ನಿರ್ಬಂಧಿಸುತ್ತದೆ. ಅಧೀನತೆಯ ಸ್ವತಂತ್ರ್ಯ ಎಂಬ ದೃಷ್ಟಿಕೋನವನ್ನು ಇಲ್ಲಿ ವಿರೋಧಿಸಲಾಗಿದೆ.

ಹೀಗೆ ಸಾಮಾಜಿಕ ಸಂರಚನೆಯಲ್ಲಿ ಇರುವಂತಹ ಏಣಿ ಶ್ರೇಣಿಗಳಿಂದಾಗಿ ಮಹಿಳೆಯರು ಸಂಕಷ್ಟಕ್ಕೆ ಗುರಿಯಾಗುತ್ತಿದ್ದಾರೆ. ಬೈಗುಳಗಳಲ್ಲಿ, ಗಾದೆಮಾತಿನಲ್ಲಿ ಹೀಗೆ ಎಲ್ಲ ಭಾಷಿಕ ನಿರೂಪಣೆಗಳು ಸ್ಪಷ್ಟವಾಗಿ ಕಂಡುಬರುತ್ತದೆ. ಹೀಗೆ ಅಧ್ಯಾಯದ ಉದ್ದಕ್ಕೂ ಹಲವು ನಿದರ್ಶನಗಳ ಮುಖಾಂತರ ಸಮಾಜದಲ್ಲಿ ಜೀವಂತವಾಗಿರುವ ಜಾತಿ ಪದ್ಧತಿ, ವರ್ಗ ಆಧಾರಿತ ತಾರತಮ್ಯ ಭಾಷೆಯಲ್ಲಿ ಹೇಗೆ ಪ್ರತಿಫಲಿತವಾಗಿದೆ ಎಂಬುದನ್ನು ಈ ಅಧ್ಯಾಯದಲ್ಲಿ ಕಂಡುಕೊಳ್ಳಲಾಗಿದೆ. ಸಮಾಜದಲ್ಲಿ ಮಹಿಳೆಯರ ಮಾತಿಗೆ ಎಂತಹ ಸಂದರ್ಭಗಳಲ್ಲಿ ನಿಷೇಧಗಳಿವೆ, ಯಾವ ನಿರ್ಬಂಧಗಳಿವೆ ಎಂಬುದನ್ನು ಈ ಅಧ್ಯಾಯದಲ್ಲಿ ಕಂಡುಕೊಳ್ಳಲಾಗಿದೆ.

**ಅಡಿಟಿಪ್ಪಣಿ**

೧. ದಿ ಸಕೆಂಡ್ ಸೆಕ್ಸ್ (ಅನು), ಎಚ್.ಎಸ್.ಶ್ರೀಮತಿ, ಪು.೧೬-೧೭, ೨೦೦೭

೨. ಭಾರತೀಯ ಸಮಾಜ ರಚನೆ -ಪರಿವರ್ತನೆ, ಚ.ನ.ಶಂಕರರಾವ್, ಪು.೩೭, ೨೦೦೭

೩. ಸಮಾಜ ವಿಜ್ಞಾನಗಳ ಪಾರಿಭಾಷಿಕ ಪದಕೋಶ, ಬಿ.ಎಸ್. ಚಂದ್ರಶೇಖರ್, ಪು.೧೦೮, ೨೦೦೫

೪. ಡಾ.ಬಾ.ಸಾ.ಅಂ.ಬ.ಬಾ(ಸಂ.೭), ಎ.ಎಂ.ರಾಜಶೇಖರಯ್ಯ, ಪು.೧-೩, ೧೯೯೦

೫. ಮನು, ಉದ್ಧೃತ: ಶೇಷನವರತ್ನ, ಪು.೯೩, ೨೦೦೪

೬. ಸಾಮಾಜಿಕ ಸಂವಹನ ದಲಿತರು & ಭಾಷೆ, ಪು.೧೩೭-೧೩೮, ೨೦೦೬

೭. ನುಡಿನೋಟ, ಡಾ.ಡಿ.ಪಾಂಡುರಂಗ ಬಾಬು, ಪು.೯ ರಿಂದ ೧೧, ೨೦೦೫

೮. ನಮ್ಮಾತು, ಡಿ.ಪಾಂಡುರಂಗ ಬಾಬು, ಪು.೬೬, ೨೦೦೫

೯. ಜನಪದ ಗೀತೆಗಳು, ಡಾ.ಪಿ.ಕೆ ಖಂಡೋಬಾ, ಪು.೬೭, ೧೯೯೬

೧೦. ಗಾಯಿತ್ರಿ ನಾವಡ, ಪು.೮೯, ೧೯೯೫.

## ಅಧ್ಯಾಯ-೫

# ಭಿನ್ನತೆ ಅಸಮಾನತೆಯ ಪರಿಕಲ್ಪನೆ ಮತ್ತು ವಾಸ್ತವ

ಮಹಿಳೆಯರ ಭಾಷೆಯನ್ನು ಕುರಿತಂತಹ ಅಧ್ಯಯನಗಳು ಬಳಕೆ ಮಾಡಿರುವ ಪದಗಳು ಗೊಂದಲದಿಂದ ಕೂಡಿವೆ ಹಾಗೆಯೇ ಕೆಲವೊಂದು ಪರಿಕಲ್ಪನೆಯಲ್ಲಿ ಬಳಕೆ ಮಾಡಿರುವ ವಿಷಯದಲ್ಲಿ ತಪ್ಪು ಗ್ರಹಿಕೆಯನ್ನು ಹೊಂದಿವೆ. ಅವುಗಳು ಪೂರ್ವ ಕಲ್ಪಿತ ಕಲ್ಪನೆಗಳಿಂದ ಕೂಡಿದವುಗಳಾಗಿವೆ.

ಪಾಶ್ಚಿಮಾತ್ಯರಿಂದ ಎರವಲು ಪಡೆದುಕೊಳ್ಳುತ್ತಿರುವಂತಹ ಅಧ್ಯಯನ ವಿಧಾನಗಳನ್ನು ಇಲ್ಲಿನ ಸಂದರ್ಭಕ್ಕೆ ಇಟ್ಟು ಅಧ್ಯಯನ ಮಾಡುವಲ್ಲಿ ಅಥವಾ ಅರ್ಥಮಾಡಿಕೊಳ್ಳುವಲ್ಲಿ ತಪ್ಪು ದಾರಿಗೆ ಅಧ್ಯಯನಗಳು ಸಾಗುತ್ತಿವೆ.

ಇದುವರೆಗೆ ಭಾಷೆಯಲ್ಲಿ ಮಹಿಳೆಯನ್ನು ಕುರಿತಂತೆ ನಡೆದ ತಾರತಮ್ಯಗಳನ್ನು ಗುರಿತಿಸುವಾಗ ಮತ್ತು ಭಾಷೆಯಲ್ಲಿ ಪುರುಷಾಧಿಕಾರ ಹಾಗೂ ಮಹಿಳೆಯ ಅಧೀನತೆಯ ವಿಚಾರಗಳನ್ನು ಗುರುತಿಸುತ್ತಿರುವ ಅಧ್ಯಯನ ಮಾದರಿಗಳು ಕೆಲವು ಸಂದರ್ಭದಲ್ಲಿ ಮೂಲ ಅರ್ಥದಿಂದ ಹೊರತ್ತಾದ ಅಧ್ಯಯನಗಳು ನಡೆಯುತ್ತಿವೆ.

ಪಾಶ್ಚಿಮಾತ್ಯರಿಂದ ರೂಪಿತವಾದ ಪರಿಕಲ್ಪನೆಗೆ ಕನ್ನಡದ ಉದಾಹರಣೆಗಳನ್ನು ಕೊಟ್ಟು ಪರಿಕಲ್ಪನೆಯನ್ನು ವಿವರಿಸುತ್ತಿದ್ದಾರೆ. ಆದರೆ ಮೂಲ ಪರಿಕಲ್ಪನೆಗೂ ಅರ್ಥಕ್ಕೂ ವ್ಯತ್ಯಾಸದಿಂದ ಕೂಡಿದೆ. ಅಲ್ಲದೇ ಗೊಂದಲಮಯವಾಗಿ ಪರಿಕಲ್ಪನೆಯನ್ನು ಗ್ರಹಿಸಿಕೊಳ್ಳಲಾಗುತ್ತಿದೆ.

ಭಾಷೆಯ ಸ್ವರೂಪ ಬಳಕೆ ಮತ್ತು ರಚನೆ ಇವುಗಳಲ್ಲಿ ಗುರುತಿಸಬಹುದಾದ ವ್ಯತ್ಯಾಸಗಳಿರುತ್ತವೆ. ವ್ಯತ್ಯಾಸ ಯಾವಾಗಲು ಎರಡು ರೀತಿಯಲ್ಲಿರುತ್ತದೆ.

೧) ಭಿನ್ನತೆ ೨) ತಾರತಮ್ಯತೆ

ಈ ಪದಗಳು ಅಥವಾ ಪರಿಕಲ್ಪನೆಗಳನ್ನು ಯಾವ ಅರ್ಥದಲ್ಲಿ ಬಳಕೆಯಾಗುತ್ತಿವೆ ಎಂಬುದನ್ನು ಚಾರಿತ್ರಿಕವಾಗಿ ಯಾವ ಅರ್ಥದಲ್ಲಿದೆ, ಈ ಕುರಿತು ನಿಘಂಟುಗಳ ಅರ್ಥ ಏನಿದೆ ಎಂಬುದನ್ನು ಹೀಗೆ ಅರ್ಥೈಸಬಹುದು.

- 'ಭಿನ್ನ' (ಸಂ) ವಿ. ಬೇರೆಯಾದ ಒಡೆದ ಸೀಳಿದ ತುಂಡು ತುಂಡಾದ ಬೇರೆಯ, ಇತರ, ಹೊರಗಿನ, ಅರಳಿದ ವಿಕಸಿತ, ಮದವೇರಿದ ಕೊಬ್ಬಿದ(ಆನೆ)
- 'ತಾರತಮ್ಯ'(ಸಂ) ನಾ. ಹೆಚ್ಚುಕಡಿಮೆ, ತಾರತಮ್ಯ ಭಾವ, ವ್ಯತ್ಯಾಸ ಅಂತರ[೧]
- Gender (ಜೆಂಡರ್) ನಾ (ವ್ಯಾ) ಲಿಂಗ Masailing Feminineneuter ಪುಲ್ಲಿಂಗ ಸ್ತ್ರೀಲಿಂಗ ನಪುಂಸಕಲಿಂಗ Common ಪುಂಸ್ತ್ರೀಲಿಂಗ ಉಭಯಲಿಂಗ

೨) (ನಾಮವಾಚಕಗಳ ಸರ್ವನಾಮಗಳ ವಿ) ಪುಂಸ್ತ್ರೀಯಾನಪಂಸಕ-ವಾಚಕ

೩) (ಗುಣವಾಚಕಗಳ ವಿ) ವಿಶೇಷ್ಯಾನುಗುಣರೂಪ ಪುಂ-ಸ್ತ್ರೀ-ಯಾನಪಂಸಕ ವಾಚಕಗಳಾದ ನಾಮವಾಚಕಗಳಿಗೆಯಾ, ಸರ್ವನಾಮಗಳಿಗೆ ಅನುರೂಪವಾದ ವಿಶೆಷಣರೂಪ.

೪) (ಆಮಾ)(ಸ್ತ್ರೀಯಾ ಪುರುಷ) ಜಾತಿ; ವರ್ಗ;ಲಿಂಗ;Shehasa spirit more masculine than the first-ಆಕೆಗೆ ಪುರುಷ ಜಾತಿಗೆ ಮಿರಿದ ಪುಂಸ್ತಿ ಇದೆ [೨]

೧) ಭೇದ: ಭಿನ್ನತೆ, ವ್ಯತ್ಯಾಸ, ಅಸಾದೃಶ್ಯ, ಅಸಮಾನತೆ, Distiction Without ವ್ಯತ್ಯಾಸವಿಲ್ಲದ ಭೇದ.

೨) ತಾರತಮ್ಯ: ಹೆಚ್ಚು ಕಡಿಮೆ ಫರಕು ವಸ್ತುಗಳಲ್ಲಿ ವ್ಯತ್ಯಾಸದ ಅಂಶ

೩) ಶೇಷ: ಉಳಿಕೆ, ಪರಿಮಾಣಗಳ ನಡುವಿನ ವ್ಯತ್ಯಾಸದ ಮೊತ್ತ, ವ್ಯವಕಲನ ಫಲ; ಕಳೆದ ಮೇಲೆ ಉಳಿಯುವ ಮೊತ್ತ

೪) (ನಿಮೀಷ ತೇದಿಗಳ ನಡುವೆ ಬಂಡವಾಳ ಪತ್ರ ಮಾವುಗಳ ಬೆಲೆಯ ವ್ಯತ್ಯಾಸ; ಖರೀದಿ; ಫರಕು.)

೫) ಭಿನ್ನಭಿಪ್ರಾಯ; ಅಭಿಪ್ರಾಯ ಭೇದ

೬) ವೈಮನಸ್ಸು; ಮನಸ್ತಾಪ

೭) ವಿವಾದ; ಕಲಹ; ವ್ಯಾಜ

೮) ವ್ಯಕ್ತಿಗಳನ್ನು ಜೀವಿ ಜಾತಿಗಳನ್ನು ಪ್ರತ್ಯೇಕಿಸುವ ವಿಶೇಷ; ವೈಲಕ್ಷಣ ವಿಶಿಷ್ಟ ಲಕ್ಷಣ; ವಿಶೇಷ ಕುರುಹು.

೯) (ವಂಲಾಂ) ಲಾಂಛನಭೇದ ಒಂದೇ ಕುಟುಂಬದ ಸದಸ್ಯರಲ್ಲಿ ವ್ಯತ್ಯಾಸ ತೋರಿಸಲು ಅವರ ಬಿರುದಾವಳಿಗಳ ಲಾಂಛನದಲ್ಲಿ ಮಾಡಿರುವ ಮಾರ್ಪಾಟು.

Different: ಗುರಿ ಬೇರೆ ಭಿನ್ನ; ಸಮನಲ್ಲದು, ಸದೃಶ್ಯವಲ್ಲದು, ವ್ಯತ್ಯಾಸವುಳ್ಳ, ಒಂದೇ ತರನಲ್ಲದ ಬೇರೆ ತರದ

೨) ಬೇರೆ ಬೇರೆ ಭಿನ್ನ; ಪ್ರತ್ಯೇಕ Himat Three Times But he dichihed it ಅದನ್ನು ನಾನು ಅವನಿಗೆ ಮೂರು ಬೇರೆ ಬೇರೆ ಸಮಯಗಳಲ್ಲಿ ಕೊಟ್ಟಿದೆ. ಆದರೆ ಅವನು ಅದನ್ನು ತಿರಸ್ಕರಿಸಿದ

೩) ವಿವಿಧ ಬಗೆ ಬಗೆಯ; ಭಿನ್ನ ಭಿನ್ನ They Are Fawhdih Colur ಅವು ಬಗೆಬಗೆಯ ಬಣ್ಣಗಳಲ್ಲಿ ಸಿಗುತ್ತವೆ.

೪) ಅಸಮಾನ್ಯ ವೈಶಾದೃಶ; ವಿಲಕ್ಷಣ; ವಿಶೇಷ;Aduertising That Strivrs Couti nuauy to be ವಿಶೇಷವಾಗಿರಬೇಕೆಂದು ಸದಾ ಪ್ರಯತ್ನ ಪಡುತ್ತಿರುವ ಜಾಹಿರಾತು.

Diffenrentia ಢಿಫರೆನ್ಸಿಯಾ ನಾ (ಬವ DIfferen-tiae) (ಮಲ ಒಂದು ಜೀವಜಾತಿಗೆ ಸೇರಿದ ಕುಲಗಳಲ್ಲಿ) ವೈಲಕ್ಷಣ ವಿಶಿಷ್ಟ ಲಕ್ಷಣ ವಿಶಿಷ್ಟ ಗುರುತು, ವೈಶಿಷ್ಟ್ಯ

Separate (ಸೆಪೆರೆಟ್) ಸಕ್ರಿ, ಬೇರೆ ಬೇರೆ ಮಾಡು, ಬೇರ್ಪಡಿಸು ಪ್ರತ್ಯೇಕಗೊಳಿಸು, (ವಿವಿಧ ವಸ್ತುಗಳು ವಿವಿಧಾಂಶಗಳು ಬೆರೆತು ಹೋಗದಂತೆ ಯಾ ಒಂದಕ್ಕೊಂದು ತಗುಲದಂತೆ) ಬೇರ್ಪಡಿಸು ಬೇರೆ ಬೇರೆಯಾಗಿ ಪ್ರತ್ಯೇಕ ಪ್ರತೇಕವಾಗಿ– ಇಡು

೩) (ಆಮೆ) ಸೈನ್ಯ ಮಾವುಗಳಿಂದ) ತೆಗೆದು ಹಾಕು; ವಜಾಮಾಡು

೪) (ಧ್ಯಾನಗಳು, ಹಣ್ಣುಗಳು ಮೊ.ವನ್ನು ಗಾತ್ರಗುಣ.ಮೊ ವಕ್ಕೆ ತಕ್ಕಂತೆ) ವಿಂಗಡಿಸು ಪೃಥಕ್ಕರಿಸು; ಬೇರೆ ಬೇರೆ ಮಾಡು.

೫) (ಅದ್ದುರಿನಲ್ಲಿ ಬೆರೆತಿರುವ ವಸ್ತುಗಳನ್ನು ಬೆಳಕಿನ ವಿವಿಧ ಕಿರಣ ರಾಶಿಗಳನ್ನು ಹಾಲು ಕೆನೆ ಯಾವುದೇ ವಸ್ತುವಿನ ಘಟಕಾಂಶಗಳನ್ನು ಸಂಗ್ರಹಿಸಲು ತೆಗೆದುಹಾಕಲು) ಬೇರ್ಪಡಿಸು ವಿಯೋಜಿಸು ಪೃಥಕ್ಕರಿಸು; ಪ್ರತ್ಯೇಕಿಸು ಅಕ್ರಿ(ಯಾವುದರಿಂದಲೇ ಆಗಲಿ) ಬೇರೆಯಾಗು; ಬೇರ್ಪಡು; ಪ್ರತ್ಯೇಕವಾಗು

೨) ಬೇರೆ ಬೇರೆಯಾಗಿ ಚದುರು; ಚದುರಿಹೋಗು. ಬೇರೆಯಾಗು ಒಂದಾಗಿರದೆ ಬೇರೆ ಬೇರೆಯಾಗಿ ವಾಸಿಸು[೩](ಪ್ರಸಾರಂಗ-ಮೈಸೂರು ವಿ.ವಿ.ಮೈಸೂರು-ಇಂಗ್ಲಿಷ್-ಕನ್ನಡ ನಿಘಂಟು)

• Saparate/seprit ಸೆಪ್‌ರಿಟ್ Vput or Keep A Part (ಕ್ರಿ) ಬೇರ್ಪಡಿಸು ಪ್ರತ್ಯೇಕಿಸು.

೨). Move Apartimake People or things move apast ದೂರ ಮಾಡು; ಜನರು ಅಥವಾ ವಸ್ತುಗಳು ದೂರವಾಗುವಂತೆ ಮಾಡು.

೩) Be Between two Persons Objects, etc ಇಬ್ಬರು ವ್ಯಕ್ತಿಗಳು ಎರಡು ವಸ್ತುಗಳು ಮೊ. ಗಳ ಮಧ್ಯೆಇರು

೪) (Husband and life) Stop living to Gether (ದಂಪತಿ ಒಟ್ಟಿಗೆ ವಾಸಿಸುವುದನ್ನು ನಿಲ್ಲಿಸು.)

Difference/Difrans/ಢೀಫರನ್ಸ್ N/State of Being unlike (ನಾ.) ವ್ಯತ್ಯಾಸ; ಅಂತರ ಭೇದ ತಾರತಮ್ಯ

2) Amount or Manner In hich things are unlike ವ್ಯಾತ್ಯಾಸದ ಪ್ರಮಾಣ ಅಂತರ ಪ್ರಮಾಣ

3) Differing in opinion Disagreement ಭಿನ್ನಾಭಿಪ್ರಾಯ, ಭಿನ್ನತೆ

Make all the difeerence have an important effect and create a difference ವ್ಯಾತ್ಯಾಸವನ್ನುಂಟುಮಾಡು ಭಿನ್ನತೆಯನ್ನುಂಟುಮಾಡು.

Make all deifference clear Difference ಸ್ಪಷ್ಟವಾದ ಭಿನ್ನತೆ With a Difference With an interesting difference ಕುತೂಹಲಕರವಾದ ವ್ಯಾತ್ಯಾಸ.

Diffenent/Difrent/ಡಿಫರೆಂಟ್ Adj No the Same separate (ಗು) ಭಿನ್ನ, ವ್ಯತ್ಯಾಸವುಳ್ಳ ಬೇರೆಯಾದ a Different Kettele Of Fish Something to Tally Different ಸಂಪೂರ್ಣವಾಗಿ ಬೇರೆ ಭಿನ್ನ[೪]

• ಲಿಂಗ (ನಾ) ಶಿವನ ಒಂದು ಪ್ರತೀಕ (ಟಿ) Siva Worshipped in the Formof a Phallus

೨). ಪುರುಷನ ಜನನೇಂದ್ರಿಯ ಶಿಶ್ನ the Penis

೩) ವ್ಯಾಕರಣದಲ್ಲಿ ಶಬ್ದಗಳಲ್ಲಿನ ಜಾತಿಯನ್ನು ತಿಳಿಸುವ ಸ್ತ್ರೀಲಿಂಗ ಪುಲ್ಲಿಂಗ ನಪುಂಸಕ ಲಿಂಗಗಳಲ್ಲಿ ಒಂದು Genderin Gramamar

೪) ಗಂಡು ಹೆಣ್ಣುಗಳಲ್ಲಿ ಒಂದರ ಪ್ರಕೃತಿ sex

* ವ್ಯತ್ಯಾಸ (ನಾ) ಭೇದ ಅಂತರ (ಟಿ) Difference

* ಭಿನ್ನ (ಗು)ಮುರಿದ; ಒಡೆದ Adj Broken shafterd fractured mutidated maied damaged wrecteed

೨) ಬೇರೆಯಾದ ಪ್ರತ್ಯೇಕವಾದ Different varied Dissident

* ಭೇದ (ನಾ) ಮುರಿಯುವುದು ಒಡೆಯುವುದು (ಟಿ) Braking splitting

೨) ವ್ಯತ್ಯಾಸ; ಅಂತರ Difference

೩) ಶತ್ರುಗಳನ್ನು ಒಡೆಯುವುದು Creating a Difftidriving a wedge

೪) ಬಗೆ ಪ್ರಕಾರ Form Genre

ಅಸಮಾನತೆ (ನಾ) ಹೋಲಿಕೆಯಿಲ್ಲದಿರುವುದು ಸಮಾನವಾಗಿಲ್ಲದಿರುವುದು (ಟಿ) Dissimilarity inegality

'ತಾರತಮ್ಯ'(ನಾ) ಹೆಚ್ಚು ಕಡಿಮೆ ಮೇಲುಕೀಳು ಭೇದ ಭಾವ; ತಾರತಮ್ಯ ಭಾವ (ಟಿ)Gradation; Discrimination;hier arhy degrec[೫](ಕನ್ನಡ–ಕನ್ನಡ–ಇಂಗ್ಲಿಷ್ ನಿಘಂಟು ಜಿ.ವೆಂಕಟಸುಬ್ಬಯ್ಯ, ಶೇಷಗಿರಿರಾವ್, ರಾಮಚಂದ್ರ ಮೂರ್ತಿ ವಿ.ಎಚ್ ಪ್ರಕಾಶನ)

ಹಲವು ಅದ್ಯಯನಗಳು ಭಿನ್ನತೆ ಮತ್ತು ತಾರತಮ್ಯತೆ ಎರಡು ಪರಿಕಲ್ಪನೆಗಳನ್ನು ಒಂದೇ ಅರ್ಥದಲ್ಲಿ ಗ್ರಹಿಸುತ್ತಿದ್ದಾರೆ. ಸಮಾಜದಲ್ಲಿ ಪ್ರಕೃತಿ ಸಹಜವಾಗಿ ಭಿನ್ನತೆಗಳಿವೆ. ಮತ್ತು ಸಮಾಜದ ಮೌಢ್ಯ ನಂಬಿಕೆಗಳಿಂದ ಶ್ರೇಷ್ಠ ಕನಿಷ್ಠ ಭಾವನೆಯಿಂದ ಹಲವು ತಾರತಮ್ಯತೆಗಳಿವೆ.

ಕೆಲವರ ಪ್ರಕಾರ ಸಮಾಜದಲ್ಲಿ ತಾರತಮ್ಯತೆ ಇದೆ. ಅದನ್ನು ಸರಿಪಡಿಸಿ ಸಮಾನತೆಯನ್ನು ರೂಢಿಸಿಕೊಳ್ಳಬೇಕು ಎನ್ನುವುದನ್ನು ಮುಂದಿಡುತ್ತಾರೆ. ಇದಕ್ಕೆ ಪ್ರತಿವಾದಿಗಳು ಸಮಾಜದಲ್ಲಿ ಇರುವುದು ತಾರತಮ್ಯವಲ್ಲ ಅದು ಪ್ರಕೃತಿ ಸಹಜವಾದಂತಹದ್ದು ಎಂಬುದನ್ನು ವಿವರಿಸುತ್ತಾರೆ.

ಆದರೆ ಸಮಾಜದಲ್ಲಿ ಭಿನ್ನತೆ ಮತ್ತು ತಾರತಮ್ಯತೆಯನ್ನು ಈ ಎರಡು ವರ್ಗದವರೂ ಸರಿಯಾಗಿ ಅರ್ಥಮಾಡಿಕೊಂಡಿಲ್ಲ.

ನಿಸರ್ಗ ಸಹಜವಾಗಿಯೇ ಅಸಮಾನತೆ ಇದೆ. ಪ್ರಕೃತಿ ಸಹಜವಾಗಿ ಇರುವುದನ್ನು ಬೇರೆ ಮಾಡಲು ಆಗಲಾರದು. ಪ್ರಕೃತಿಯ ವಿರುದ್ದ ವಾದವನ್ನು ಮಂಡಿಸುತ್ತೀರ ಉದಾ: ಕೈಯಲ್ಲಿ ಇರುವ ಐದು ಬೆರಳುಗಳನ್ನು ಒಮ್ಮೆಗಮನಿಸಿ ಇವು ಸಮಾವಾಗಿಲ್ಲ ಇದು ಪ್ರಕೃತಿ ಸಹಜ ಇದನ್ನು ಸಹಜ ಗುಣವೆಂದುಕೋಳ್ಳೇಕೆ ಹೊರತು ಸರಿ ಮಾಡಲು ಹೋದರೆ ಸರಿಯಾದಿತೆ. ನಾಯಿಯ ಬಾಲವನ್ನು ನೇರ ಮಾಡುವ ವಿಫಲಪ್ರಯತ್ನದ ಹಾಗೇ ಸಮಾಜದಲ್ಲಿ ಪುರುಷ ಮೇಲು ಮಹಿಳೆ ಕೀಳು ಅದು ಪ್ರಕೃತಿ ಸಹಜ ಈ ಬಗೆಯ ವಾದ ಬಂದಿದೆ.

ಭಿನ್ನತೆ ಮತ್ತು ತಾರತಮ್ಯದ ಬಗೆಗಿನ ಸರಿಯಾದ ಅರ್ಥ ತಿಳಿಯದವರು ಈ ಬಗೆಯ ಅಭಿಪ್ರಾಯಗಳನ್ನು ಮುಂದಿಡುತ್ತಾರೆ. ತಾರತಮ್ಯ ಮತ್ತು ಭಿನ್ನತೆ ಎರಡನ್ನು ಕಲಸೋಮೊಲೊಗರವಾಗಿ ಗ್ರಹಿಸುತ್ತಿರುವವರ ಅಭಿಪ್ರಾಯವಾಗಿದೆ. ಆದರೆ ಭಿನ್ನತೆಯನ್ನು ಯಾರು ಆಚರಿಸುವುದಿಲ್ಲ ಅದನ್ನು ಮೀರಲು ಆಗುವುದಿಲ್ಲ.

ಉದಾಹರಣೆಗೆ: ಬಣ್ಣಗಳನ್ನು ಕೇವಲ ಬಣ್ಣಗಳಾಗಿ ಗುರುತಿಸುವುದು ವ್ಯತ್ಯಾಸ. ಅಂದರೆ ಕಪ್ಪು, ಬಿಳಿ, ಕೆಂಪು, ಹೀಗೆ ಗುರುತಿಸಿದಂತೆ ಅದು ವ್ಯತ್ಯಾಸವನ್ನು ಹೇಳಿದಂತೆ ಅದು ತಾರತಮ್ಯ ಭಾವವಲ್ಲ. ಆದರೆ ಕಪ್ಪಾಗಿರುವುದರಿಂದಲೇ ಅದು ಕನಿಷ್ಠ ಮೌಲ್ಯ ಬಿಳಿಯಾಗಿರುವುದರಿಂದಲೆ ಶ್ರೇಷ್ಠ ಸ್ವೀಕಾರಾರ್ಹ ಎಂದು ಹೇಳಿದರೆ ಅದು ತಾರತಮ್ಯವಾಗುತ್ತದೆ.

ಬಳಕೆಯ ಭಾಷೆ ಒಳಗಡೆಯು ಸಾಮಾಜಿಕವಾಗಿರುವ ಭಿನ್ನತೆ ಮತ್ತು ತಾರತಮ್ಯತೆಯಿಂದ ಕೂಡಿದೆ. "ಭಾಷೆಯಲ್ಲಿ ಲಿಂಗ ಭಿನ್ನತೆಯನ್ನು ಸೂಚಿಸುವ ಕೆಲವು ಸ್ಥರ ಲಕ್ಷಣಗಳಿರುತ್ತವೆ. ಹಾಗೆಯೇ ಸಾಮಾಜಿಕ ಸ್ಥರ ವಿನ್ಯಾಸದಲ್ಲಿ ಸ್ತ್ರೀ ಪುರುಷರ ಸ್ಥಾನಮಾನಗಳನ್ನು ಸಾಮಾಜಿಕ ಅನನ್ಯತೆಯ ಚಹರೆಗಳನ್ನು ಮತ್ತು ಸಾಮಾಜಿಕ ತಾರತಮ್ಯಗಳನ್ನು ಕಾಣಿಸುವ ಅನೇಕ ಭಾಷಾಂಶಗಳು ಕ್ರಿಯಾಶೀಲವಾಗಿರುತ್ತವೆ.[೬] ಮಹಿಳೆಯನ್ನು ಕುರಿತಾದ ಭಾಷೆಗೂ ಗಂಡಸಿನ ಕುರಿತಾದ ಭಾಷೆಗೂ ಕೆಲವು ವ್ಯತ್ಯಾಸಗಳಿರುತ್ತವೆ. ಆ ವ್ಯತ್ಯಾಸಗಳಲ್ಲಿ ಕೆಲವು ಭಿನ್ನತೆಗಳಿರಬಹುದು ಮತ್ತೆ ಕೆಲವು ತಾರತಮ್ಯಗಳಾಗಿರಬಹುದು.

ಭಾಷೆಯಲ್ಲಿ ಭಿನ್ನತೆಯಾವುದು ಅದರ ನೆಲೆಯಾವುದು ಎಂಬುದು ಮತ್ತು ತಾರತಮ್ಯ ಯಾವುದು ಆದರ ನೆಲೆಯಾವುದು ಎಂಬುದರ ತಿಳಿಯುವ ಅಗತ್ಯ ಭಾಷೆಯಲ್ಲಿ ನಡೆಯುತ್ತಿರುವ ತಾರತಮ್ಯತೆಯನ್ನು ಗುರುತಿಸುವವರೂ ಭಾಷೆಯ ಸಹಜ ಪ್ರಕೃತಿಯನ್ನು ತಾರತಮ್ಯ ಎಂದು ಗುರುತಿಸುತಿದ್ದಾರೆ ಉದಾ: ಪ್ರಕೃತಿ ಸಹಜವಾಗಿ ಮನುಷ್ಯರ ದೇಹರಚನೆಯಿಂದಾಗಿ ಹೆಂಗಸು-ಗಂಡಸು ಮಾತನಾಡುವಂತದ್ದು ಭಿನ್ನವಾಗಿರುಬಹುದು. ದ್ವನಿಪೆಟ್ಟಿಗೆಯಲ್ಲಿನ ಬದಲಾವಣೆ

ಗಂಡಸಿನಲ್ಲಾದಷ್ಟು ಹೆಂಗಸಿನಲ್ಲಾಗುವುದಿಲ್ಲ. ಹೀಗಿರುವಾ ಧ್ವನಿಯಲ್ಲಿನ ಏರಿಳಿತ ಬೇರೆ ಬೇರೆಯಾಗಿರುತ್ತದೆ. ಇದನ್ನು ಗುರುತಿಸುವುದು ಸುಲಭ. ಈ ಕಾರಣಕ್ಕಾಗಿಯೇ ಪರದೆ ಹಿಂದೆ ಮಾತನಾಡುವವರು ಹೆಂಗಸರೋ ಅಥವಾ ಗಂಡಸೋ ಮಾತನಾಡುವುದ್ಯಾರು ಎಂದು ತೀಳಿಯುತ್ತದೆ. ಇದು ವ್ಯತ್ಯಾಸ ಭಿನ್ನತೆ ಪ್ರಕೃತಿ ಸಹಜವಾದುದ್ದು ಅಷ್ಟೇ. ಇದು ದೇಹ ರಚನೆಯಿಂದಾಗಿರುವಂತಹದ್ದು ಅದು ದತ್ತವಾದಂತಹದ್ದು ಈ ರೀತಿ ಇರುವುದರಿಂದಲೇ ಗಂಡಸಿನ ಭಾಷೆ ಹೆಂಗಸಿನ ಭಾಷೆ ಎಂದು ವಿಭಾಗಿಸಲಾಯಿತು. ಇದನ್ನೇ ಅವರ ಸ್ವಭಾವವನ್ನು ಅರಿಯಲಾಗಲಿ ಸಾಮಾಜಿಕ ಸ್ಥಾನಮಾನಗಳ ನಿರ್ಧಾರಕ್ಕಾಗಲಿ ಬಳಸಿದರೆ ನಾವು ಈ ಭಿನ್ನತೆಯನ್ನು ತಾರತಮ್ಯವಾಗಿ ನೆಲಗೊಳಿಸಿದಂತಾಗುತ್ತದೆ.

ಈ ಸಹಜ ಅಥವಾ ಭಿನ್ನತೆಯನ್ನು ಬಳಕೆಯೊಳಗಡೆ ತಾರತಮ್ಯ ದೃಷ್ಟಿಯಿಂದ ಬಳಕೆಗೊಳ್ಳುತ್ತಿದೆ. ಕೇವಲ ಗಂಡು ಭಾಷೆ ಹೆಣ್ಣು ಬಾಷೆ ಎಂದು ಹೇಳಿ ಒಪ್ಪಿಕೊಂಡರೆ ಸಮಸ್ಯೆ ಇಲ್ಲ. ಗಂಡು ಆಗಿರುವುದರಿಂದಲೇ ಶ್ರೇಷ್ಠ ಎಂದು ವೈಭವಿಕರಿಸಲಾಗುತ್ತದೆ. ಅಂತಹದೊಂದು ಸಂದರ್ಭ ನಮ್ಮ ಕನ್ನಡ ಸಂದರ್ಭದಲ್ಲಿದೆ. ಸಾಮುದಾಯಿಕವಾಗಿ ಈ ಭಿನ್ನತೆಯ ನೆಲೆಯನ್ನು ಗಮನಿಸಿ ಕೆಲವು ಭಾಷೆಗಳನ್ನು ಗಂಡು, ಎಂದು ಕೆಲವನ್ನು ಸಾಮಾನ್ಯ ಭಾಷೆ ಎಂದು ಪರಿಗಣಿಸುವ ಗ್ರಹಿಕೆ ಒಂದಿದೆ. ಉದಾಹರಣೆಗೆ:– "ಹುಬ್ಬಳಿ ಭಾಷೆಯನ್ನು ಗಂಡು ಮೆಟ್ಟಿನ ಭಾಷೆ" ಎಂದು ಕರೆಯಲಾಗುತ್ತದೆ. ಹಾಗಾದರೆ ಇನ್ನೊಳಿದ ಭಾಷೆ ಹೆಣ್ಣು ಮೇಟ್ಟಿದ ಭಾಷೆಗಳೆ? ಅದು ಹೇಗೆಂದು ಗೊತ್ತಿಲ್ಲ. ಇದೆಲ್ಲ ಸಾಮಾನ್ಯ ತಿಳುವಳಿಕೆ ಇದನ್ನು ವಿವರಿಸಿ ಅದು ಹೇಗೆ ಗಂಡು ಮೆಟ್ಟಿದ ಭಾಷೆ ಎಂದು ಅದನ್ನು ಯಾರೂ ಸಾಧಿಸಿ ತೋರಿಸಲು ಆಗುವುದಿಲ್ಲ, ಹೀಗೆ ಸಹಜ ಭಾಷೆಯನ್ನು ಜೈವಿಕ ವ್ಯತ್ಯಾಸಗಳನ್ನು ತಾರತಮ್ಯದ ನೆಲೆಯಲ್ಲಿ ತಂದು ಒಂದನ್ನು ಕನಿಷ್ಟ ಒಂದನ್ನು ಶ್ರೇಷ್ಠ ಎಂಬ ಅರ್ಥದಲ್ಲಿ ಬಳಸುತ್ತಿರುವುದು ಒಂದು ಬಗೆಯ ತಿಳುವಳಿಕೆ.

ಇತ್ತೀಚಿಗೆ ಭಾಷೆಯಲ್ಲಿಯ ಲಿಂಗತಾರತಮ್ಯತೆ ಕುರಿತಾಗಿ ಕೆಲವು ಅಧ್ಯಯನಕಾರಾರು ಪ್ರಶ್ನಿಸುತ್ತಿದ್ದಾರೆ. ಇವರ ಅಧ್ಯಯನಗಳು ಸ್ವಾಗತಾರ್ಹ, ಆದರೆ ಇವರುಗಳೂ ಸಹ ಭಾಷೆ ಒಳಗಡೆಯ ಭಿನ್ನತೆಯನ್ನು ಗ್ರಹಿಸಿಕೊಳ್ಳದೆ ಸಾರಸಗಟಾಗಿ ಭಾಷೆಯಲ್ಲಿ ತಾರತಮ್ಯತೆಗಳು ನಡೆಯುತ್ತೀದೆ ಎಂದು ಕೆಲವು ಪದಗಳನ್ನು ಗುರುತಿಸುತ್ತೀದ್ದಾರೆ. ಈ ಅಧ್ಯಯನಕಾರು ತಾರತಮ್ಯಕ್ಕೆ ಒಳಾಗಾಗಿರುವ ಪದಗಳು ಎಂದು ಗುರುತಿಸುತ್ತಿರುವುದರಲ್ಲಿ ಹಲವು ಭಿನ್ನತೆಯಿಂದ ಕೊಡಿವೆ. ಅವುಗಳನ್ನು ಕೆಳಗಿನಂತೆ ಗಮನಿಸಬಹುದು.

ಉದಾಹರಣೆಗೆ: ಕುರುಡಿ, ಕುಂಟಿ, ಕಿವುಡಿ, ಹುಡುಗಿ

ಈ ಬಗೆಯ ನಾಮಪದಗಳನ್ನು ಮೊದಲು ಪುಲ್ಲಿಂಗ ವಾಚಕಗಳಾದ ಕುಂಟ, ಕಿವುಡ,

ಹುಡುಗ, ಕುರುಡ  ಎಂಬ ರೂಪಗಳಿಗೆ-'ಇ'- ಎಂಬ ಸ್ತ್ರೀ ಲಿಂಗ ಸೂಚಕಗಳನ್ನು ಹಚ್ಚಿ ನಂತರ ಸಾಧಿಸಲಾಗುತ್ತದೆ ಎಂದು ಹೇಳುತ್ತಾರೆ. ಮಹಿಳೆಯನ್ನು ಪ್ರತಿನಿಧಿಸದಂತಹ ಪದಗಳನ್ನು ಮತ್ತು ಪುರುಷನನ್ನು ಪ್ರತಿನಿಧಿಸದಂತಹ ಪದಗಳು ವಾಸ್ತವವಾಗಿ ಅವುಗಳು ಧ್ವನಿಸುತ್ತೀರುವಂತ ಅರ್ಥವೆ ಬೇರೆ ಅಧ್ಯನಕಾರರು ವಿವರಿಸಿಕೊಳುತ್ತಿರುವಂತಹ ಪರಿಕಲ್ಪನೆಯೇ ಬೇರೆ. ಈ ಪರಿಕಲ್ಪನೆಯನ್ನು ವಿವರಿಸುತ್ತಿರುವವರು ಪೂರ್ವ ಕಲ್ಪಿತರಾಗಿದ್ದಾರೆ ಎಂದು ಹೇಳಬಹುದು.

ಏಕೆಂದರೆ ಮೇಲೆ ವಿವರಿಸಿದಂತಹ ಪದಗಳ ಮೂಲಪದವನ್ನು ಕೆಳಗಿನಂತೆ ಗಮನಿಸಬಹುದು.

ಉದಾಹರಣೆಗೆ; ಕುರುಡು, ಕುಂಟು, ಕಿವುಡು, ಹುಡುಗು

ಈ ಮೂಲ ಪದಗಳು ಸಾಮಾಜಿಕ ಅಥವಾ ಭಾಷಾ ಬಳಕೆಯಲ್ಲಿ ಬಳಕೆಗೊಳ್ಳುತ್ತಿರುವ ವಿಧಾನಗಳ ಭಿನ್ನ ಅರ್ಥೈಸಿಕೊಳ್ಳುತ್ತಿರುವಂತಹ ವಿಧಾನ ಬೇರೆ

ಉದಾಹರಣೆ: ಅವಳ/ಅವನ-ಕಣ್ಣು ಕುರುಡು

ಅವಳ/ಅವನ-ಕಾಲು ಕುಂಟು

ಅವಳ/ಅವನ-ಕಿವಿ ಕಿವುಡು

ಅವಳ/ಅವನ-ಬುದ್ದಿ ಹುಡುಗು

ಹೀಗೆ ಈ ಪದಗಳೂ ಬಳಕೆಯಲ್ಲಿ ಅರ್ಥವನ್ನು ಹೊಂದುತ್ತವೆ. ಇವುಗಳಿಗೆ ಪುರುಷನನ್ನು ಗುರುತಿಸಲು 'ಅ' ಪ್ರತ್ಯಯವನ್ನು ಬಳಸಲಾಗುತ್ತದೆ.

ಉದಾಹರಣೆಗೆ: ಕುರುಡು+'ಅ'-ಕುರುಡ

ಕುಂಟು+'ಅ'-ಕುಂಟ

ಕಿವುಡು+'ಅ'-ಕಿವುಡ

ಹುಡುಗು+'ಅ'-ಹುಡುಗ

ಮಹಿಳೆಯನ್ನು ಗುರುತಿಸಲೂ 'ಇ' ಪ್ರತ್ಯೇಯವನ್ನ ಬಳಸಿಕೊಳ್ಳಲಾಗುತ್ತದೆ.

ಉದಾಹರಣೆಗೆ: ಕುರುಡು+'ಇ'-ಕುರುಡಿ

ಕುಂಟು+'ಇ'-ಕುಂಟಿ

ಕಿವುಡು+'ಇ'-ಕಿವುಡಿ

ಹುಡುಗು+'ಇ'-ಹುಡುಗಿ

ಹಾಗಾದರೆ ಮೇಲಿನ ಉದಾಹರಣೆಗಳಿಂದ ತಿಳಿದು ಬರುವ ಸಂಗತಿಯೆಂದರೆ ಮಹಿಳೆಯ

ಭಾಷೆಯನ್ನು ಗುರುತಿಸುತ್ತಿರುವಂತಹವರ ಪ್ರಕಾರ ತಾರತಮ್ಯವಿಲ್ಲ. ಅದು ಭಾಷೆ ಒಳಗಡೆಯ ಭಿನ್ನತೆ.

ಅಂದರೆ ಮಹಿಳಾ ಅಧ್ಯಯನಕಾರರು ಭಾಷಾ ಕುರಿತಾದ ಅಧ್ಯಯನಕಾರರ ತಾರತಮ್ಯ ಎಂಬ ಗ್ರಹಿಕೆ ತಪ್ಪಾಗಿದೆ. 'ತಾರತಮ್ಯ' ಎಂಬ ಪರಿಕಲ್ಪನೆಯನ್ನು ಅರ್ಥಮಾಡಿಕೊಳ್ಳುವುದರಲ್ಲಿ ಈ ಬಗೆಯ ತಪ್ಪು ಗ್ರಹಿಕೆಗಳಿವೆ.

ಹಾಗೆಯೇ ಇನ್ನು ಅನೇಕ ಪದಗಳು ಈ ರೀತಿಯಲ್ಲಿ ಲಿಂಗ ಭಿನ್ನತೆಯನ್ನು ಒಳಗೊಂಡಪದಗಳಾಗಿವೆ. ಅವುಗಳು ಸಹ ತಾರತಮ್ಯತೆಯಿಂದ ಕೂಡಿವೆ.

ಶಿಕ್ಷಕ–ಶಿಕ್ಷಕಿ

ಅಧ್ಯಕ್ಷ–ಅಧ್ಯಕ್ಷಣೀ/ಅಧ್ಯಕ್ಷೆ

ಮಂತ್ರಿ–ಮಂತ್ರಿಣಿ

ಸಚಿವ–ಸಚಿವೆ.

ಈ ಬಗೆಯ ಪದಗಳು ಲಿಂಗ ಭಿನ್ನತೆ/ಲಿಂಗ ವ್ಯತ್ಯಾಸವನ್ನು ಸೂಚಿಸುವ ಪದಗಳೆ ಹೊರತು ತಾರತಮ್ಯವಲ್ಲ. ಆದರೆ ಮಹಿಳಾ ಅಧ್ಯಯನದಲ್ಲಿ ಲಿಂಗತಾರತಮ್ಯ ಎಂದು ಅಧ್ಯಯನಮಾಡಲಾಗಿದೆ.

ಕೆಲವು ಪದಗಳು ಲಿಂಗತಟಸ್ಥವಾಗಿರುವಂತಹ ಪದಗಳು ಕನ್ನಡ ಬಳಕೆಯ ಭಾಷೆಯಲ್ಲಿ ಇವೆ. ಆದರೆ ಈ ಬಗೆಯ ಪದಗಳು ಪುರುಷನನ್ನು ಮಾತ್ರ ಸೂಚಿಸುತ್ತವೆ ಎಂದು 'ಇ' ಮತ್ತು 'ಏ' ಆಖ್ಯಾತ ಪ್ರತ್ಯಯಗಳನ್ನು ಅನಗತ್ಯವಾಗಿ ಬಳಸಲಾಗುತ್ತಿವೆ. ಉದಾಹರಣೆಗೆ:–

ವಿದ್ಯಾರ್ಥಿ–ವಿಧ್ಯಾರ್ಥಿನಿ

ಪ್ರಾಂಶುಪಾಲ–ಪ್ರಾಂಶುಪಾಲೆ

ಎಂಬ ಪದಗಳನ್ನು ಬಳಸುತ್ತಾರೆ. ಇಲ್ಲಿ ವಿದ್ಯಾರ್ಥಿ ಪ್ರಾಂಶುಪಾಲ ಈ ಪದಗಳು ಲಿಂಗತಟಸ್ಥ ಪದಗಳು ಆದರೆ ಬಳಕೆಯಲ್ಲಿ ಇವುಗಳನ್ನು ಪುರುಷವಾಚಿಪದಗಳೆಂದು ಕನ್ನಡ ಭಾಷಿಕರು ಭಾವಿಸಿ ತಪ್ಪಾಗಿ ಬಳಸುತ್ತಿದ್ದಾರೆ. ಇದೇ ರೀತಿಯಾಗಿ ಕೆಲವು ಪದಗಳಿವೆ.

ಓಟಗಾರ–ಓಟಗಾರ್ತಿ

ಹಾಡುಗಾರ–ಹಾಡುಗಾರ್ತಿ

ಹೂವಾಡಿಗ-ಹೂವಾಡಗಿತ್ತಿ

ಗಟ್ಟಿಗ-ಗಟ್ಟಿಗಿತ್ತಿ

ಈ ಪದಗಳನ್ನು ಮಹಿಳಾ ಆಧ್ಯಯನಕಾರರು ಲಿಂಗತಾರತಮ್ಯ ಎಂದು ಅಧ್ಯಯನ ಮಾಡುತ್ತಿದ್ದಾರೆ. ಕನ್ನಡ ವ್ಯಾಕರಣ ಪರಿಭಾಷೆಯಲ್ಲಿ ತದ್ಧಿತಾಂತ ಪ್ರತ್ಯೆಯಗಳು ಇರುವುದನ್ನು ಮಹಿಳಾ ಅಧ್ಯಯನಕಾರರರು ಗ್ರಹಿಸುತ್ತಿಲ್ಲ. ಇವು ಲಿಂಗ ಭಿನ್ನತೆಯನ್ನು ಸೂಚಿಸುವ ಪದಗಳಾಗಿವೆ.

ಸಾಮಾಜಿಕ ಲಿಂಗವು ಸಾಂಸ್ಕೃತಿಕ ಉತ್ಪನ್ನ[೧೦] "(ಮಹಿಳಾ ಆಧ್ಯಯನ ಸಮಾಜ ಶಾಸ್ತ್ರೀಯ ದೃಷ್ಟಿಕೋನ ಸುಧಾ ಸೀತಾರಾಮನ್ ಪು.ಸಂ.೧೦ ಸ್ತ್ರೀಲೇಖ ಪ್ರಕಟಣೆ ಪ್ರ.ಮು.೨೦೧೦)

ಪಾಶ್ಚಿಮಾತ್ಯರಿಂದ ಬರುತ್ತಿರುವ ಸಿದ್ದಾಂತಗಳು ಪದ ಬಳಕೆಗಳು ಕೆಲವೊಮ್ಮೆ ಮೂಲ ಅರ್ಥ ಮತ್ತು ಉದ್ದೇಶಕ್ಕಿಂತ ಭಿನ್ನವಾಗಿಲ್ಲ. ಭಾಷೆ ಒಳಗಡೆ ಭಾಷೆಗೂ ಇರುವಂತಹ ಮಿತಿಗಳನ್ನು, ಭಾಷೆಯ ಲಕ್ಷಣಗಳನ್ನು, ಭಾಷೆಯ ಗುಣಗಳಾವು, ಎಂದು ಅರ್ಥಮಾಡಿಕೊಂಡು ನಂತರದಲ್ಲಿ ಭಾಷೆಯ ವಿಚಾರಗಳ ಬಗ್ಗೆ ಅಧ್ಯಯನ ಮಾಡುವುದು ಸರಿಯಾದ ಕ್ರಮವಾಗುತ್ತದೆ. ಜೊತೆಗೆ ಸಮಾಜಕ್ಕೂ ಭಾಷೆಗೂ ಇರುವಂತಹ ಸಂಬಂಧ ಎಂಥಹದು ಸಮಾಜದಲ್ಲಿಯೋ ಭಾಷೆ ಇರುವುದರಿಂದ ಒಂದಲ್ಲೊಂದು ಪೂರಕವಾಗಿ ಅರ್ಥಮಾಡಿಕೊಳ್ಳಬೇಕು. ನಂತರ ಅವುಗಳ ಸಂಬಂಧವನ್ನು ಮತ್ತು ಲಿಂಗ ತಾರತಮ್ಯತೆಯನ್ನು ಗುರುತಿಸಿದಾಗ ಬರುವಂತಹ ಫಲಿತ ಬೇರೆಯಾಗಿರುತ್ತದೆ. ಜೊತೆಗೆ ಭಾಷೆಯಲ್ಲಿ ವಾಸ್ತವವಾಗಿ ತಾರತಮ್ಯ ನಡೆಯುತ್ತಿರುವಂತಹದು ಎಲ್ಲಿ ಎಂಬುದು ಗುರುತಿಸಲು ಸಾಧ್ಯವಾಗುತ್ತದೆ.

ಭಾಷಿಕ ರಚನೆಗಳು ಮತ್ತು ಬಳಕೆಗಳನ್ನು ವಿಶ್ಲೇಷಿಸಿದಂತೆ ಸಮಕಾಲೀನ ಬಳಕೆಯ ಅರ್ಥಗಳನ್ನು ಹೊರತುಪಡಿಸಿ ಭಿನ್ನವಾದ ಅರ್ಥಗಳು ದೂರೆಯುತ್ತಾ ಹೋಗುತ್ತವೆ. ಉದಾಹರಣೆಗೆ

೧) ಡಾಕ್ಟರ್

೨) ಡ್ರೈವರ್

೩) ಕಂಡಕ್ಟರ್

ಈ ಪದಗಳು ಪುರುಷ ಸೂಚಕಗಳೆಂದು ಮಹಿಳಾ ಅಧ್ಯಯನಕಾರರು ಪ್ರತಿಪಾದಿಸುತ್ತಿದ್ದಾರೆ. ಜನರ ಬಳಕೆಯಲ್ಲಿ ಈ ಪದಗಳನ್ನು ಪುರುಷ ವಾಚಕಗಳೆಂದು ಭಾವಿಸಿ ಈ ಪದಗಳ ಮುಂದೆ ಹಿಂದೆ 'ಲೇಡಿ' 'ವುಮನ್'; ಮೇಲ್ 'ಸ್ತ್ರೀ' 'ಮಹಿಳಾ', ಎಂದು ವಿವರಗಳನ್ನು ಹಚ್ಚಲಾಗುತ್ತಿದೆ.

ನಿಜ ಅರ್ಥದಲ್ಲಿ ಈ ಪದಗಳು ಲಿಂಗ ತಟಸ್ಥವಾದಂತಹ ಪದಗಳಾಗಿವೆ. ಇವುಗಳು ಅರ್ಥಗ್ರಹಿಕೆಯಲ್ಲಿ ಮಹಿಳಾ ಅಧ್ಯಯನಕಾರರು ಹಾಗೂ ಬಳಸುತ್ತಿರುವ ಜನರು ತಪ್ಪಾಗಿ ಗ್ರಹಿಸುತ್ತಿದ್ದಾರೆ.

ಸಮಾಜದಲ್ಲಿ ಇಂತಿಂತ ಕೆಲಸಗಳಲ್ಲಿ ಹೆಂಗಸರು, ಗಂಡಸರು ಪ್ರವೃತ್ತರಾಗುವುದೇ ಸಹಜ ಎಂಬುದು ಸಮಾಜದಲ್ಲಿ ಗ್ರಹಿತವಾಗಿದೆ. ಭಾಷೆಯಲ್ಲಿ ಆಯಾ ವೃತ್ತಿನಿರತ ವ್ಯಕ್ತಿಯನ್ನು ಸೂಚಿಸುವ ಲಿಂಗ ಸೂಚಿ ಪದಗಳಿಲ್ಲ ಎಂಬುದು ಈ ಗ್ರಹಿಕೆಯ ಸೂಚಕವಾಗಿದೆ.

ಉದಾಹರಣೆಗೆ:

೧) ಪೋಸ್ಟ್ ಮ್ಯಾನ್

೨) ವೀರ

೩) ಯೋಧ

೪) ಸೈನಿಕ

ಇತ್ತೀಚೆಗೆ ಮಹಿಳೆಯರು ಈ ಕೆಲಸಗಳನ್ನು ನೆರವೇರಿಸುತ್ತಿದ್ದಾರೆ. ಇದಕ್ಕೆ ಲಿಂಗ ತಟಸ್ಥ ಪದಗಳ ಅಗತ್ಯವಿದೆ.

ಕನ್ನಡ ಭಾಷೆಯ ವಾಕ್ಯರಚನೆಯಲ್ಲು ಸಹ ಕೆಲವು ಬಗೆಯ ಲಿಂಗ ತಾರತಮ್ಯತೆಗಳನ್ನು ಮಹಿಳಾವಾದಿಗಳು ಗುರುತಿಸುತ್ತಾರೆ. ಆದರೆ ಅವುಗಳಿಗೆ ಪರಿಹಾರ ಮಾತ್ರ ಗುರುತಿಸುವುದಿಲ್ಲ. ಆದರೆ ಲಿಂಗತಟಸ್ಥವಾದ ವಾಕ್ಯರಚನೆಯನ್ನು ಗುರುತಿಸುವುದು ಅಗತ್ಯವಾಗಿದೆ. ಈ ಅಧ್ಯಯನದ ಮುಖಾಂತರ ಅಂತಹದೊಂದು ಪ್ರಯತ್ನ.

ಉದಾಹರಣೆಗೆ:- ಬಳಕೆಯಲ್ಲಿ ಇರುವ ವಾಕ್ಯರಚನೆ/ಲಿಂಗತಾರತಮ್ಯತೆಯಿಂದ ಕೂಡಿದ್ದು.

- ಮಾನವ ಪ್ರಗತಿ ಪಥದಲ್ಲಿದ್ದಾನೆ
- ಮಗು ಬೆಳೆಯುತ್ತಾನೆ.
- ವಿಜ್ಞಾನಿ ಸಂಶೋಧಿಸುತ್ತಾನೆ.
- ಈಜುಗಾರನ ಸಾಮರ್ಥ್ಯ
- ಸಂಗೀತಗಾರನ ಲಹರಿ
- ಸಾಹಿತಿಯಾದವನ ನಿಲುವು
- ರೋಗಿಷ್ಠನಾದ ವ್ಯಕ್ತಿ

ಈ ಮೇಲಿನ ವಾಕ್ಯರಚನೆಗಳು ಲಿಂಗತಾರತಮ್ಯತೆಯಿಂದ ಕೂಡಿವೆ ಎಂದು ಮಹಿಳಾ ಅಧ್ಯಯನಕಾರರರು ವಿವರಿಸುತ್ತಿದ್ದಾರೆ. "ಇಲ್ಲಿನ ಕರ್ತೃಪದಗಳು ಪುರುಷ ಸೂಚಿಗಳೆ ಎಂಬುದಕ್ಕೆ ಆ ಸಂದರ್ಭಗಳು ಕಾರಣಗಳನ್ನೊದಗಿಸಿಲ್ಲ. ಆದರೆ ಪುರುಷನು ಮಾತ್ರವೆ ಗಣನೆಗೆ ಬರುವವನು ಎಂಬ ಸಾಮಾಜಿಕ ಚಿಂತನೆಗೆ ಈ ನಿಯಮ ದ್ಯೋತಕವಾಗಿದೆಯಷ್ಟೇ"[೧೧] ಎಂದು ವಿವರಿಸುತ್ತಿದ್ದಾರೆ. ಮೇಲಿನ ವಾಕ್ಯರಚನೆಯಲ್ಲಿ ಕೆಲವು ವಾಕ್ಯಗಳು ಲಿಂಗ ಭಿನ್ನತೆಗಳಿಂದ ಕೂಡಿವೆ. ಇನ್ನೂ ಕೆಲವು ಲಿಂಗ ತಾರತಮ್ಯತೆಗಳಿಂದ ಕೂಡಿವೆ ಉದಾಹರಣೆಗೆ ಸಂಗೀತಗಾರನ ಲಹರಿ ಈ ವಾಕ್ಯವನ್ನು ಮಹಿಳೆಗೂ ಬಳಸಬಹುದು ಸಂಗೀತಗಾರಳ ಲಹರಿ ಎಂದು ವೈಯಕ್ತಿಕವಾಗಿ ಈ ವಾಕ್ಯರಚನೆಯನ್ನು ಮಂಡಿಸಬಹುದು. ಸಾಮೂಹಿಕವಾಗಿ ಇಬ್ಬರನ್ನು ಒಳಗೊಂಡಂತೆ ಈ ವಾಕ್ಯವನ್ನು ಸಂಗೀತಗಾರರ ಲಹರಿ ಎಂದು ಬಳಸಬಹುದು ಇದು ಸಾಂದರ್ಭಿಕವಾಗಿ ವಾಕ್ಯ ರಚನೆ ಭಿನ್ನವಾಗಿದೆ. ಆದರಿಂದ ಈ ವಾಕ್ಯ ಲಿಂಗಭಿನ್ನತೆಯಿಂದ ಕೂಡಿದೆ.

ರೋಗಿಷ್ಠನಾದ ವ್ಯಕ್ತಿ ಎಂಬ ಈ ವಾಕ್ಯ ರಚನೆಯನ್ನು ಮೇಲಿನಂತೆಯೇ ಬರೆಯಲೂ ಸಾಧ್ಯವಿದೆ.

- ಪುರುಷನನ್ನು ಕುರಿತು – ರೋಗಿಷ್ಠನಾದ ವ್ಯಕ್ತಿ
- ಮಹಿಳೆಯನ್ನು ಕುರಿತು – ರೋಗಿಷ್ಠಳಾದ ವ್ಯಕ್ತಿ
- ಲಿಂಗ ಭಿನ್ನತೆಯಿಂದ ಇಬ್ಬರಿಗು – ರೋಗಿಷ್ಠರಾದ ವ್ಯಕ್ತಿಗಳು.

ಮೇಲೆ ಹೇಳಿರುವಂತಹ ವಾಕ್ಯರಚನೆಯಲ್ಲಿ ಮಹಿಳೆಯನ್ನು ಒಳಗೊಳ್ಳದೆ ಕೇವಲ ಪುರುಷನನ್ನು ಕುರಿತು ವಿವರಿಸುವ ರೀತಿಯ ವಾಕ್ಯರಚನೆಗಳು ತಾರತಮ್ಯತೆಯಿಂದ ಕೂಡಿವೆ.

- ಮಾನವ ಪ್ರಗತಿ ಪಥದಲ್ಲಿದ್ದಾನೆ.
- ಮಗು ಬೆಳೆಯುತ್ತಾನೆ.
- ವಿಜ್ಞಾನಿ ಸಂಶೋಧಿಸುತ್ತಾನೆ.
- ಈಜುಗಾರನ ಸಾಮರ್ಥ್ಯ
- ಸಾಹಿತಿಯಾದವನ ನಿಲುವು

ಈ ಪದಗಳನ್ನು ಲಿಂಗತಟಸ್ಥವಾಗಿ ಬಳಸಲು ಸಾಧ್ಯವಿದೆ ಆದರೆ ಬಳಸುವಂತಹ ಎಲ್ಲರು ಈ ವಾಕ್ಯರಚನೆಯನ್ನು ಪುರುಷನನ್ನು ಮಾತ್ರ ಒಳಗೊಂಡಂತೆ ಮಾತ್ರ ವಿವರಿಸುತ್ತಿದ್ದಾರೆ.

ಮೇಲಿನ ವಾಕ್ಯರಚನೆಗಳನ್ನು ಲಿಂಗ ತಟಸ್ಥವಾಗಿ ಎಲ್ಲರನ್ನು ಒಳಗೊಳ್ಳುವಂತೆ ಕೆಳಕಂಡಂತೆ ಬಳಸಬಹುದು.

- ಮಾನವರು ಪ್ರಗತಿ ಪಥದಲ್ಲಿದ್ದಾರೆ.
- ಮಗು ಬೆಳೆಯುತ್ತದೆ.
- ವಿಜ್ಞಾನಿಗಳು ಸಂಶೋಧಿಸುತ್ತಾರೆ.
- ಸಾಹಿತಿಯಾದವರ ನಿಲುವು.

ಇವು ಸರಿಯಾದ ಭಾಷೆಯ ಕ್ರಮಗಳಾಗಿವೆ. ಇವುಗಳಲ್ಲಿ ಕೆಲವು ಪದಗಳು ಮೂಲತಹ ಭಾಷೆಯೊಳಗಡೆ ಲಿಂಗಾತೀತವಾದ ಪದಗಳಿವೆ ಅವುಗಳ ಬಳಕೆಯಲ್ಲಿ ಈ ಬಗೆಯ ಪದಗಳನ್ನು ಪುರುಷವಾಚಿಯಾಗಿ ಬಳಸಲಾಗುತ್ತದೆ. ಉದಾಹರಣೆಗೆ:– ಮಗು ಇದು ಪುಲಿಂಗಸೂಚಕ ಪದವಲ್ಲ ಇದು ನಪುಂಸಕಲಿಂಗ ಸೂಚಕ ಪದ. ಆದರೆ ವಾಕ್ಯರಚನೆಯಲ್ಲಿ ಈ ಪದವನ್ನು ಪುಲ್ಲಿಂಗವಾಗಿ ಬರೆಯಲಾಗುತ್ತದೆ. ಹಾಗೆನೆ ವಿಜ್ಞಾನಿ ಎಂಬ ಪದ ಇದಕ್ಕೆ ಯಾವುದೇ ಲಿಂಗವಿಲ್ಲ. ಆದರೆ ವಿಜ್ಞಾನಿ ಅಂದಕ್ಷಣ ಕೇವಲ ಅವನನ್ನು ಇಲ್ಲಿ ತಕ್ಷಣ ನೆನಪಾಗುವುದು ಪುರುಷ ಎಂಬ ಕಲ್ಪನೆ ಎಲ್ಲರಲ್ಲಿ ಅಡಗಿದೆ. ಅದಕ್ಕಾಗಿ ಭಾಷೆಯನ್ನು ಸರಿಯಾದ ಕ್ರಮದಲ್ಲಿ ಅರ್ಥಮಾಡಿ ಕೊಳ್ಳುವುದು ಅತ್ಯಗತ್ಯ.

ಇನ್ನು ಕೆಲವು ಪದಗಳು ಮೇಲ್ಕಂಡಂತೆಯೆ ಬಳಕೆ ಆಗಿವೆ ಉದಾಹರಣೆಗೆ :– ಮನುಷ್ಯ, ಮಾನವ ಈ ಪದಗಳನ್ನು ಮನುಷ್ಯರು ಮಾನವರು ಎಂದು ಬಳಸಿದರೆ ಎಲ್ಲರನ್ನು ಒಳಗೊಂಡಂತೆ ಆಗುತ್ತದೆ. ಕೆಲವರು ಮನುಷ್ಯ, ಮಾನವ ಎಂದು ಬಳಸಿದರೆ ಇದು ಕೇವಲ ಪುರಷನನ್ನು ಮಾತ್ರ ಉದ್ದೇಶಿಸಿದ್ದೆ ಎಂದಾಗುತ್ತದೆ. ಮತ್ತು ಕೇವಲ ಪುರುಷನನ್ನು ಕುರಿತೆ ವಿವರಿಸಿದಂತಾಗುತ್ತದೆ. ಇದರಲ್ಲಿ ಮಹಿಳೆ ಇರುವುದಿಲ್ಲ.

ಇನ್ನು ಕೆಲವಂದಿಷ್ಟು ಪದಗಳು ಕೇವಲ ಪುರಷನನ್ನು ಮಾತ್ರ ಸೂಚಿಸುತ್ತದೆ. ಎಂದು ತಿಳಿದು ಆ ಪದಗಳ ಹಿಂದೆ ಮುಂದೆ ಸ್ತ್ರೀಲಿಂಗ ಸೂಚಕ ಪದಗಳನ್ನು ಬಳಸುತ್ತಾರೆ.

ಉದಾಹರಣೆಗೆ:–

- ಹೆಡ್‌ಮಾಸ್ಟರ್–ಹೆಡ್‌ಮೇಡಂ
- ಮಾಸ್ಟರ್– ಮೇಡಂ/ಟೀಚರ್

- ವಿದ್ಯಾರ್ಥಿ–ವಿದ್ಯಾರ್ಥಿನಿ
- ಉಪಾಧ್ಯಾಯ–ಉಪಧ್ಯಾಯಿನಿ
- ದಲಿತ–ದಲಿತೆ
- ಎಂಪಿ–ಎಂಪಿಣಿ
- ಪೋಲೀಸ್–ಪೋಲೀಸಿಣಿ
- ವಕ್ತಾರ–ವಕ್ತಾರಿಣಿ
- ಕಾರ್ಯದರ್ಶಿ–ಕಾರ್ಯದರ್ಶಿನಿ

ಮೇಲಿನ ಪದಗಳಲ್ಲಿ ಪುರುಷ ಸೂಚಕವಾಗಿ ಭಾವಿಸಿ ಬಳಕೆಗೊಳುತ್ತಿರುವಂತಹ ಪದಗಳು ಮೂಲತಹ ಅವು ಲಿಂಗಾತೀತವಾಗಿರುವ ಪದಗಳು. ಇವುಗಳನ್ನು ಪುರುಷನಿಗೆ ಮಾತ್ರ ಎಂದು ಭಾವಿಸಿ ಮಹಿಳೆಯರಿಗಾಗಿ ಬೇರೆ ಪದಗಳನ್ನು ವಿವರಿಸುತ್ತಿದ್ದಾರೆ. 'ಮಾಸ್ಟರ್' ಎಂಬ ಪದ ವಿಷಯದಲ್ಲಿ ಪರಿಣತೆ ಎಂದಾಗುತ್ತದೆ. ಆದರೆ 'ಮಾಸ್ಟರ್'ನನ್ನು ಕೇವಲ ಪುರುಷನೆಂದು ತಪ್ಪಾಗಿ ಭಾವಿಸಲಾಗುತ್ತಿದೆ. ಹಾಗಾಗಿ ಮಹಿಳೆಯನ್ನು ಕುರಿತಂತೆ ವಿವರಿಸುವಾಗ 'ಮೆಡಂ' ಮಿಸ್ಸ್, ಟೀಚರ್ ಎಂದು ಬಳಕೆ ಮಾಡಲಾಗುತ್ತದೆ. ಇಲ್ಲಿ 'ಟೀಚರ್' ಎಂದರು ಲಿಂಗಾತೀತವಾದ ಪದವಾಗಿದೆ. ಆದರೆ ಕನ್ನಡ ಸಂದರ್ಭದಲ್ಲಿ ಈ ಪದವನ್ನು ಮಹಿಳೆಗೆ ಮಾತ್ರ ಬಳಕೆಮಾಡುತ್ತಿದ್ದಾರೆ. ಈ ಪದದ ಅರ್ಥ ಕೇವಲ ಬೋಧಿಸುವವರು ಅಷ್ಠೇನೆ, ಅದರೆ ಇಲ್ಲಿ ಟೀಚರ್ ಎಂದರೆ ಬೋಧಿಸುವ ಮಹಿಳೆ ಎಂದಾಗಿದೆ.

ಹಾಗೆನೇ 'ನರ್ಸ್' ಪದವು ಸಹ ಕೇವಲ ಮಹಿಳೆಯನ್ನು ಸೂಚಿಸುವ ಪದವಾಗಿದೆ. ಇತ್ತೀಚಿಗೆ 'ಮೇಲ್ ನರ್ಸ್'ಗಳು ಎಂಬ ಪದ ಬಳಕೆಯಾಗುತ್ತೀರುವುದು, ಹೀಗೆ ಹಲವಾರು ವೃತ್ತಿಸೂಚಕ ಪದಗಳನ್ನು ಬಳಸಲಾಗಿದೆ.

ಪುರುಷನನ್ನು ಒಳಗೊಂಡಿರುವಂತಹವುಗಳು ಎಂದು ಭಾವಿಸಿಕೊಂಡು ಅವುಗಳ ಮುಂದೆ ಹಿಂದೆ ಮೇಡಂ, ಲೇಡಿ, ವುಮನ್, ಮಹಿಳಾ ಸ್ತ್ರೀ, ಎಂಬ ಪದಗಳನ್ನು ಬಳಸುತ್ತಿದ್ದಾರೆ.

ವ್ಯಾಕರಣ ಪರಿಭಾಷೆಯಲ್ಲಿ ವಿವರಿತವಾಗಿರುವಂತ ಪದಗಳನ್ನು ಮಹಿಳಾವಾದಿಗಳು ಸರಿಯಾಗಿ ಗ್ರಹಿಸದೆ ಕೆಲವು ಪದಗಳನ್ನು ಲಿಂಗ ತಾರತಮ್ಯತೆ ಎಂದು ವಿವರಿಸಿ ಬಿಡುತ್ತಿದ್ದಾರೆ. ಅಂತಹ ಪದಗಳು ಕೆಳಕಂಡಂತೆ ನೋಡಬಹುದು.

ಉದಾಹರಣೆಗೆ:–

- ಓಟಗಾರ–ಓಟಗಾರ್ತಿ
- ಹಾಡುಗಾರ–ಹಾಡುಗಾರ್ತಿ
- ಹೂವಾಡಿಗ–ಹೂವಾಡಗಿತ್ತಿ
- ಗಟ್ಟಿಗ–ಗಟ್ಟಿಗಿತ್ತಿ

ಈ ಮೆಲಿನ ಪದಗಳು ತದ್ಧಿತಾಂತ ಪ್ರತ್ಯೆಯಗಳು, ವ್ಯಾಕರಣ ಪರಿಭಾಷೆಯಿಂದ ವಿವರಿಸಿದಾಗ ಕನ್ನಡದಲ್ಲಿ ಇವುಗಳು ಮೂಲತಹ ತಾರತಮ್ಯ ಎಂದು ಗ್ರಹಿಸುವುದು ತಪ್ಪು.

ಕನ್ನಡದಲ್ಲಿ ಈ ಬಗೆಯ ವಿಚಾರವೆ ಇಲ್ಲ. ಅಂದರೆ ತಾರತಮ್ಯತೆ ಎಂಬುದೆ ಇಲ್ಲ!. ಇರುವುದು ಲಿಂಗ ಭಿನ್ನತೆ ತಾರತಮ್ಯತೆ ಎಂದು ವಿವರಿಸಿಕೊಳ್ಳಲಾಗಿದೆ ಎಂಬುದಲ್ಲ ತಾರತಮ್ಯತೆ ಭಾಷೆಯೋಳಗಡೆ ಇದೆ. ಅದು ಹೇಗಿದೆ ಎಂದರೆ ನಮ್ಮ ಸಮಾಜದಲ್ಲಿ ಇರುವುದು ಭಾಷೆಯಲ್ಲಿ ಪ್ರಕಟವಾಗುತ್ತದೆ.

ಸಮಾಜ ವ್ಯವಸ್ಥೆಯಲ್ಲಿ ಇರುವಂತಹ ಜಾತಿ ವ್ಯವಸ್ಥೆ ಸಹ ಆಳವಾಗಿ ಬೇರೂರಿದೆ. ಇದರಲ್ಲಿಯೂ ಮಹಿಳೆ ಶೂದ್ರತೆಯಿಂದ ಕಡೆಗಣಿಸಲಾಗಿದೆ. ಕೇವಲ ಪುರುಷನನ್ನು ಒಳಗೊಂಡಿರುವಂತಹ ಭಾಷೆ ಬಳಕೆಯಲ್ಲಿದೆ. ಇಲ್ಲಿಯೂ ಸಹ ಮಹಿಳೆಯನ್ನು ಭಾಷೆಯಲ್ಲಿ ಕಡೆಗಣಿಸಲಾಗಿದೆ, ಎಂದು ಕೆಲವು ಪದಗಳನ್ನು ಗುರುತಿಸುತ್ತಿದ್ದಾರೆ. ಅಧ್ಯಯನಕಾರರು ವೃತ್ತಿಯಲ್ಲಿ ಪ್ರತಿನಿಧಿಸುತ್ತಿರುವಂತಹ ಪದಗಳು ಸಮಾಜದಲ್ಲಿ ಕೇವಲ ಪುರುಷನನ್ನು ವಿವರಿಸುತ್ತಿವೆ.

ಉದಾಹರಣೆಗೆ:–

- ಹರಣಿಗೆ
- ಗಾಣಿಗ
- ಮಡಿವಾಳ
- ಸುಣಗಾರ
- ಈಡಿಗ

ಮೊದಲಿಗೆ ವೃತ್ತಿ ಸೂಚಕವಾಗಿ ಬಳಕೆಯಲ್ಲಿ ಇದ್ದಂತಹ ಈ ಪದಗಳು ಪ್ರಸ್ತುತದಲ್ಲಿ ಜಾತಿಸೂಚಕವಾಗಿ ಬಳಕೆಯಲ್ಲಿವೆ. ಇವುಗಳ ಬಳಕೆಯ ಅರ್ಥಗಳನ್ನು ಗಮನಿಸಿದರೆ ಖಚಿತವಾಗಿ

ಅವುಗಳನ್ನು ಪುಲ್ಲಿಂಗ ಸೂಚಕಗಳಾಗಿ ವಿವರಿಸಬಹುದೇ ಹೊರತು ಇವು ಪುರುಷನಿಗೆ ಮಾತ್ರ ಮೀಸಲು ಎಂದು ಅರ್ಥಮಾಡಿಕೊಳ್ಳುವಂತಹದು ತಪ್ಪು. ಲಿಂಗ ತಾರತಮ್ಯತೆಯನ್ನು ಜಾತಿ ಶ್ರೇಣೀಕರಣ ವ್ಯವಸ್ಥೆಯಲ್ಲಿ ಲಿಂಗ ತಾರತಮ್ಯತೆಯನ್ನು ವಿವರಿಸಿಕೊಳ್ಳುವಾಗ ಅರ್ಥಮಾಡಿಕೊಳ್ಳುವ ನೆಲೆಗಳನ್ನು ಬಿಟ್ಟು ತಪ್ಪಾಗಿ ಅರ್ಥಮಾಡಿಕೊಳ್ಳಲಾಗುತ್ತದೆ. ಇವುಗಳು ಪುರುಷ ಸಂಬಂಧಿಯಾಗಿ ಅರ್ಥ ಮಾಡಿಕೊಳ್ಳಲಾಗುತ್ತಿದೆ. ಆದರೆ ಈ ಉದಾಹರಣೆಗಳು ಪುಲ್ಲಿಂಗ ಸೂಚಕಗಳಾಗಿ ವಿವರಿಸಬಹುದು.

- ಈಡಿಗರು
- ಗಾಣಿಗರು
- ಸುಣಗಾರರು

ಎಂದರೆ ಕೇವಲ ಲಿಂಗವನ್ನು ಸೂಚಿಸುವಂತಹದು ಮಾತ್ರವಲ್ಲ ಇಲ್ಲಿ ಲಿಂಗಾತೀತವಾದ ತಟಸ್ಥ ನಿಲುವು ಇದೆ. ಇದನ್ನು ವ್ಯತ್ಯಾಸ ಎನ್ನುವ ಪರಿಭಾಷೆಯಡಿಯಲ್ಲಿ ಬಳಸಹುದು. ಭಾಷಾ ಲಕ್ಷಣವಾಗಿ ಇದು ಬಳಕೆಯಾಗುತ್ತದೆ.

ಶತಮಾನಗಳಿಂದ ಮಹಿಳೆಯರು ನಾಲ್ಕುಗೋಡೆಯ ಚೌಕಟ್ಟನಲ್ಲಿ ಬಂದಿತರಾಗಿ ಪುರುಷನೆ ಹೊರಗಡೆಯ ಎಲ್ಲ ಕಾರ್ಯಗಳಲ್ಲಿ ಭಾಗವಹಿಸುತ್ತಿದ್ದಾನೆ. ಮಹಿಳೆಯ ಪ್ರವೇಶವೆ ಇಲ್ಲದಿದ್ದ ಕ್ಷೇತ್ರದಲ್ಲಿ ಪುರುಷ ಸಹಜವಾಗಿ ಪುರುಷವಾಚಿ ಭಾಷಾ ರಚನೆ ಬಳಕೆಯಲ್ಲಿದೆ. ಕಾಲನಂತರದಲ್ಲಿ ಮಹಿಳೆ ಆ ಕ್ಷೇತ್ರವನ್ನು ಪ್ರವೇಶಿಸಿದವಳು.

ಪುರುಷ ಅಧಿಕಾರ ಕೇಂದ್ರದ ಭಾಷಾಬಳಕೆಯಲ್ಲಿ ಸಹಜವಾಗಿ ಕೆಲವು ಪದಗಳು ತೊಡಕಾಗಿವೆ. ಅಂತಹ ಪದಗಳನ್ನು ಮಹಿಳೆಯರಿಗೆ ಅನ್ವಯಿಸುವಂತೆ ವಿವರಿಸಿಕೊಳ್ಳಲಾಗಿದೆ.

ಉದಾಹರಣೆ:–

- ಗಾಣಿಗಿತ್ತಿ
- ಗೌಡ್ತಿ(ಗೌಡಗಿತ್ತಿ, ಗೌಡಶ್ಯಾನಿ)
- ದಣ್ಯಮ್ಮ
- ಯಜಮಾನಮ್ಮ
- ಒಡತಿ

ಈ ಪದಗಳು ಆರಂಭದಲ್ಲಿ ಪುರುಷನಿಗೆ ಮಾತ್ರ ಸೀಮಿತವಾಗಿದ್ದವು. ಏಕೆಂದರೆ ಸಂಪತ್ತಿಗೆ ಒಡೆಯ ಅವನೆ ಆಗಿದ್ದರಿಂದ ಪುರುಷನನ್ನು ಮಾತ್ರ ಸೂಚಿಸುತ್ತಿದ್ದವು. ಈ ರೂಪಗಳನ್ನು ಪುರುಷ ಸೂಚಕ ರೂಪಗಳಿಂದ ಸಾಧಿಸಲು ಕಾರಣವಿದೆ. ಮೊದಲಿಗೆ ಪುರುಷಾಧಿಕಾರದ ಹಿಡಿತದಲ್ಲಿಯೇ ಇದ್ದ ವೃತ್ತಿ ಅಧಿಕಾರ ಕೇಂದ್ರಗಳು ಮೊದಲಿಗೆ ಪುರುಷರನ್ನೇ ಗುರುತಿಸಿವೆ.

ನಿರ್ದಿಷ್ಟ ವೃತ್ತಿ ಅಧಿಕಾರಗಳಲ್ಲಿ ನೇರ ಭಾಗಿದಾರರಲ್ಲದ ಸ್ತ್ರೀಯರನ್ನು ಆರಂಭದಲ್ಲಿ ವೃತ್ತಿಮೂಲದಿಂದ ಅಧಿಕಾರ ಮೂಲದಿಂದ ಗುರುತಿಸುವ ಅಗತ್ಯದ ಭಾಷಿಕ ಸಂದರ್ಭವೆ ಎದುರಾಗದಿರಬಹುದು ಅಂತಹ ಗುರುತಿಸುವಿಕೆಯ ಸಾಮಾಜಿಕ ಒತ್ತಾಯಗಳು ರೂಪಗೊಂಡಾಗ ಸಹಜವಾಗಿಯೇ ಭಾಷೆಯಲ್ಲಿ ಸರಳ ಮತ್ತು ಸುಲಭವಾದ ತಾಂತ್ರಿಕತೆಯಿಂದ ಸ್ತ್ರೀರೂಪಗಳನ್ನು ಸಾಧಿಸುವ ಸಾಧಿಸಿಕೋಳ್ಳುವ ಪ್ರವೃತ್ತಿ ಮೊದಲಾಗಿದೆ.

ಕೆಲವು ಲಘು ಬರಹಗಳಲ್ಲಿ ಮಹಿಳೆಯರನ್ನು ಬೇಕೆಂದೇ ಸ್ತ್ರೀಲಿಂಗ ಪ್ರತ್ಯೇಯಗಳನ್ನೊಳಗೊಂಡ "ಣಿ" ಮತ್ತು "ಇ" ಪ್ರತ್ಯೇಯಗಳನ್ನು ಬಳಸಿ ಅನಗತ್ಯ ಪದರಚನೆ ಮಾಡುತ್ತಿದ್ದಾರೆ. ಈ ಬಗೆಯ ಪದರಚನೆಗಳು ಕೇವಲ ಕೇಲವು ಲಘ ಬರಹಗಳಲ್ಲಿ ಮತ್ತು ಹಾಸ್ಯ ಬರಹಗಳಲ್ಲಿ ಬಳಕೆಯಾಗುತ್ತಿವೆ. ಇವುಗಳಿಗೆ ಕಾರಣ ಏನೆ ಇರಬಹುದು ಈ ಬಗೆಯ ಬರವಣಿಗೆಗಳಿಂದ ಭಾಷೆಯ ಒಳಗಡೆ ಲಿಂಗ ಭಿನ್ನತೆಯನ್ನು ತೋರಿಸುವ ಸೋಗಿನಿಂದ ಮಹಿಳೆಯರನ್ನು ಹಾಸ್ಯಗಳಿಗೆ ಲಘು ಬರಹಗಳಿಗೆ ಬಳಸಿಕೊಳ್ಳುತ್ತಿರುವುದಂತು ಸತ್ಯ. ಈ ಬಗೆಯ ಕೆಲವು ಉದಾಹರಣೆಗಳು ಕೆಳಕಂಡಂತಿವೆ.

- ಜಿನ್ಸ್ ದಾರಿಣಿ/ಜಿನ್ಸ್‌ಸಿಣಿ
- ಬೈಕ್ ಸವಾರಿಣೀ/ಬೈಕಿಣಿ
- ಪೋಲಿಸಿಣಿ
- ಕಂಡೆಕ್ಟರಿಣಿ

**ಚೋರಿಣಿ**

ಚೋರ ರೂಪದ ಸ್ತ್ರೀಲಿಂಗ ಮಾದರಿ

**ಡಕಾಯಿತೆ**

ಡಕಾಯತಿ ಮಾಡುವ ಹೆಂಗಸು, ಡಕಾಯಿತ ರೂಪದ ಸ್ತ್ರೀಲಿಂಗ

**ಪೋಲಿಸಿಣಿ**

ಪೋಲಿಸ್ ಪದವನ್ನು ಪುಲ್ಲಿಂಗ ರೂಪವೆಂದು ತಿಳಿದು ಅನಂತರ ಸ್ತ್ರೀಲಿಂಗ ರೂಪವನ್ನು ಪಡೆಯಲು ಪ್ರತ್ಯಯಗಳನ್ನು ಹತ್ತಿಸುತ್ತಿರುವುದು. ಇದೇ ಕ್ರಮ ಮಾಸ್ತರಿಣಿ, ಡಾಕ್ಟರಿಣಿ ರೂಪಗಳಲ್ಲೂ

ಬಳಕೆಯಾಗಿದೆ. ಆದರೆ ನರ್ಸಿಣಿ ರೂಪವಿಲ್ಲ. ಕಾರಣ ನರ್ಸ್ ಹೆಂಗಸೇ ಆಗಿರಬೇಕೆಂಬ ತಿಳುವಳಿಕೆ ಇರುವುದರಿಂದ.

**ಬಕಾಸುರಿಣಿ**

ಬಕಾಸುರ ರೂಪದ ಸ್ತ್ರೀಲಿಂಗ ರೂಪ

**ಲಂಗರುಗಾರ್ತಿ**

ಟೆಲಿವಿಶನ್ ಕಾರ್ಯಕ್ರಮಗಳನ್ನು ನಿರ್ವಹಿಸುವ ಹೆಂಗಸು. ಆಂಕರ್ ಪರ್ಸನ್‌ನ ನೇರ ಅನುವಾದ ಹಾಗೂ ಸ್ತ್ರೀಲಿಂಗ ರೂಪ. ಕನ್ನಡದಲ್ಲಿ ಸಂದರ್ಭವನ್ನು ಹೊರತುಪಡಿಸಿ ಬಳಸಿದಾಗ ತಪ್ಪು ಅರ್ಥಗಳಿಗೆ ಕಾರಣವಾಗಬಹುದು.

**ಸಂದರ್ಶಕಳು**

ಸಂದರ್ಶಕ ಪದದ ಸ್ತ್ರೀಲಿಂಗ ರೂಪ

**ಸಾಕ್ಷರಗಿತ್ತಿ**

ಪಾತರಗಿತ್ತಿ ಪದದೊಡನೆ ಪ್ರಾಸಕ್ಕಾಗಿ ರೂಪಿಸಿದ ಪದ. ಗಿತ್ತಿ ಪ್ರತ್ಯಯ ಸ್ತ್ರೀಲಿಂಗ ರೂಪಗಳನ್ನು ನೀಡುತ್ತದೆ. ಇಂಥ ರೂಪಗಳು ಕೇವಲ ನಗೆಪಾಟಲಿಗೆ ರೂಪಿಸಿರುವಂತಹವು. ಇವುಗಳ ಬಳಕೆ ಕಡಿಮೆ ಆದರು ಬಳಕೆಯಲ್ಲಿ ಇದೆ.

**ಸ್ವಾಗತಕಾರಿಣಿ**

ಸ್ವಾಗತಕಾರ ರೂಪವೊಂದಿದೆ ಎಂದು ಭಾವಿಸಿ ಅದರಿಂದ ಸ್ವಾಗತಕಾರಿಣಿ ರೂಪವನ್ನು ಪಡೆಯಲಾಗಿದೆ.

**ಹೀರೋಯಿಣಿ**

ಹೀರೋಯಿನ್‌ಗೆ ಸಂವಾದಿ ಪದ.

**ಏಕಾಂಗಿನಿ**

ವ್ಯವಸ್ಥೆಯ ವಿರುದ್ಧ ಏಕಾಂಗಿನಿಯ ಸಮರ. ಕೆಲವೊಂದು ಪದಗಳು ಪುರುಷರನ್ನು ಸೂಚಿಸುತ್ತವೆಂಬ ತಪ್ಪು ಕಲ್ಪನೆಯಿಂದ ಅದಕ್ಕೆ ಪ್ರತ್ಯಯವನ್ನು ಸೇರಿಸಿ ಸ್ತ್ರೀವಾಚಿಯನ್ನಾಗಿ ಮಾಡಲಾಗುತ್ತದೆ. ಮೇಲಿನ ಪ್ರಯೋಗ ಆ ಬಗೆಯದು.

**ಕಾರ್ಯದರ್ಶಿನಿ**

ಕಾರ್ಯದಶಿ ಪುರುಷ ವಾಚಕವೆಂದು ತಿಳಿದು ಕಾರ್ಯದರ್ಶಿನಿ ಎಂದು ಸ್ತ್ರೀವಾಚಕವನ್ನು ರೂಪಿಸಲಾಗಿದೆ.

**ಕುಡುಕಿ**

ಮದ್ಯಪಾನವನ್ನು ಚಟವಾಗಿ ಉಳ್ಳ ಹೆಂಗಸು. ಸ್ತ್ರೀವಾಚಕ ಪದ ಸೃಷ್ಟಿ ಮಾಡಲು ಮೂಲಪದದ ಕೊನೆಯ ಸ್ವರವನ್ನು ಇ ಕಾರಾಂತಗೊಳಿಸುವುದು ಒಂದು ವಿಧಾನ. ಕುರುಡ-ಕುರುಡಿ ಈ ಮಾದರಿಯಲ್ಲಿ ಬಂದಿರುವ ಹೊಸ ಪದ.

**ದಲಿತೆ**

ಕೆಳವರ್ಗದ ಮಹಿಳೆ, ಗುಣವಾಚಕವಾಗಿ ಬಂದ ದಲಿತ ಪದವನ್ನು ಪುಲ್ಲಿಂಗ ಸೂಚಕ ಎಂದು ತಿಳಿದು ಈಗ ಸ್ತ್ರೀವಾಚಿ ಪದವಾಗಿ ಮೇಲಿನ ಪ್ರಯೋಗದಲ್ಲಿ ಬಳಕೆಯಾಗಿದೆ.

**ಪಾದಚಾರಿಣಿ**

ನಡೆದು ಹೋಗುವ ಹೆಂಗಸು. ಪಾದಾಚಾರಿ ಪುಲ್ಲಿಂಗ ವಾಚಿಯೆಂದು ತಿಳಿದು ರೂಪಿಸಿರುವ ಪದ. ಆದರೆ ಪಾಚಾದಾರಿ ಎರಡೂ ಲಿಂಗಗಳಿಗೆ ಬಳಸಬಹುದಾದ ಪದ. ಸ್ತ್ರೀಲಿಂಗ ಸೂಚಿಸಬೇಕಾದಾಗ ಮಹಿಳಾ ಎಂಬುದನ್ನು ಬಳಸುವುದಿದೆ.

**ಮತದಾರಿಣಿ**

ಮತದಾನ ಮಾಡಬಹುದಾದ ಸ್ತ್ರೀ. ದಾರ, ಗಾರ ಪ್ರತ್ಯಯಗಳು ಪುರುಷನನ್ನು ಸೂಚಿಸುವುದರಿಂದ ಮಹಿಳೆಯನ್ನು ಸೂಚಿಸಲು ಈಗಾಗಲೆ ಬಳಕೆಯಲ್ಲಿರುವ ಪ್ರತ್ಯಗಳನ್ನು ಬಳಸಲಾಗುತ್ತದೆ. ಮೇಲಿನ ಪ್ರಯೋಗದಲ್ಲಿ ಇಣಿ ಪ್ರತ್ಯಯ ಬಳಸಲಾಗಿದೆ.

**ಸರದಾರಿಣಿ**

ಸರದಾರ ಎಂಬ ಪದ ಪುರುಷ ವಾಚಕವಾಗಿ ಬಳಕೆಯಲ್ಲಿದೆ. ಸಾಮಾನ್ಯವಾಗಿ ಪುರುಷರೇ ಮುಖಂಡರಾಗಿ ಇರುತ್ತಿದ್ದುದರಿಂದ ಸ್ತ್ರೀವಾಚಕ ಶಬ್ದ ಬಂದಿರಲಿಲ್ಲ. ಈಗ ಬದಲಾದ ಪರಿಸ್ಥಿತಿಗೆ ಅನುಗುಣವಾಗಿ ಬಂದಿರುವ ಪದ ಇದಾಗಿದೆ.

**ಚಿತ್ರಕಾರಣಿ**

ಕನ್ನಡದಲ್ಲಿ ಚಿತ್ರಕಾರ ಪುಲ್ಲಿಂಗ ಸೂಚಕವಾಗಿ ಬಳಕೆಯಲ್ಲಿರುವುದರಿಂದ ಸ್ತ್ರೀಲಿಂಗ ಸೂಚಕವಾಗಿ ಚಿತ್ರಕಾರಣಿ ಪದವನ್ನು ಪ್ರಯೋಗ ಮಾಡಲಾಗಿದೆ.

**ಚೂಡಿಧಾರಿಣಿ**

ಚೂಡಿದಾರ ಎನ್ನುವ ಪದದಲ್ಲಿ ಎಲ್ಲಿಯೂ ಲಿಂಗ ಸೂಚಕವಿಲ್ಲ. ಮತ್ತೆ ಈ ಬಗೆಯ ಉಡುಪನ್ನು ಕೇವಲ ಮಹಿಳೆಯರು ಮಾತ್ರ ಉಡುತ್ತಾರೆ. ಆದರೆ ಅನಗತ್ಯವಾಗಿ ಇಲ್ಲಿ ಸ್ತ್ರೀಲಿಂಗ ಸೂಚಕ ಪ್ರತ್ಯಯವನ್ನು ಹಚ್ಚಿ ಪದ ರಚನೆ ಮಾಡಲಾಗಿದೆ.

**ಛತ್ರಿ ಧಾರಿಣಿ**

ಛತ್ರಿದಾರ ಪುಲ್ಲಿಂಗ ಎಂದು ತಿಳಿದು ಸ್ತ್ರೀಲಿಂಗ ಪ್ರತ್ಯಯವಾದ ಣಿ ಪ್ರತ್ಯಯವನ್ನು ಸೇರಿಸಿ ಈ ಪದ ರಚನೆ ಮಾಡಲಾಗಿದೆ.

**ಜೀನ್ಸ್‌ಧಾರಿಣಿ**

ಜೀನ್ಸ್‌ದಾರ ಎಂಬುದು ಪುಲ್ಲಿಂಗ ರೂಪ ಎಂದು ತಿಳಿದು ಜೀನ್ಸ್‌ಧಾರಿಣಿ ಎಂಬ ಸ್ತ್ರೀಸೂಚಕ ಪದ ರಚನೆ ಮಾಡಲಾಗಿದೆ.

**ಅನುರಾಗಿಣಿ**

ಅನುರಾಗಿ ಪುಲ್ಲಿಂಗ ಎಂದು ತಿಳಿದು ಣಿ ಸ್ತ್ರೀ ಸೂಚಕ ಪ್ರತ್ಯಯ ಸೇರಿಸಿ ಸ್ತ್ರೀಲಿಂಗವಾಗಿ ಬಳಕೆ ಮಾಡಲಾಗಿದೆ.

**ಆಹ್ವಾನಿತೆ**

ಕನ್ನಡದಲ್ಲಿ ಅ ಕಾರಾಂತ ಪದಗಳೆಲ್ಲ ಪುಲ್ಲಿಂಗವಾದರೆ ಇ ಮತ್ತು ಎ ಕಾರಾಂತ ಪದಗಳು ಸ್ತ್ರೀಲಿಂಗಗಳಾಗುತ್ತವೆ ಎಂಬುದು ಒಂದು ಅಭಿಪ್ರಾಯವಿದೆ. ಮೇಲಿನ ಪದವು ಈ ನಿಯಮದಲ್ಲಿ ರಚನೆಯಾದಂತಿದೆ. ಪುರುಷ ಕೇಂದ್ರಿತವಾಗಿ ಆಹ್ವಾನಿತ ಪದ ಬಳಕೆಯಲ್ಲಿದೆ.

**ಉಗ್ರಗಾಮಿನಿ**

ಉಗ್ರಗಾಮಿ ಪದವನ್ನು ಪುಲ್ಲಿಂಗ ರೂಪವೆಂದು ತಿಳಿಯಬೇಕೆಂಬ ಒತ್ತಾಯವಿಲ್ಲದಿದ್ದರೂ ಸಾಮಾನ್ಯವಾಗಿ ನಾವು ಅದನ್ನು ಪುಲ್ಲಿಂಗರೂಪವೆಂದು ತಿಳಿದು, ಅನಂತರ ಸ್ತ್ರೀಲಿಂಗ ರೂಪವನ್ನು ಪಡೆಯಲು ಪ್ರತ್ಯಯಗಳನ್ನು ಹತ್ತಿಸುತ್ತೇವೆ.

**ಎಂಪಿಣಿ**

ಎಂ.ಪಿ. ಪದವನ್ನು ಪುಲ್ಲಿಂಗ ರೂಪವೆಂದು ತಿಳಿದು ಸ್ತ್ರೀಲಿಂಗ ರೂಪವನ್ನು ಪಡೆಯಲು ಣಿ ಪ್ರತ್ಯಯಗಳನ್ನು ಹತ್ತಿಸಲಾಗಿದೆ.

**ಕೊಲೆಗಾರಿಣಿ**

ಕೊಲೆಗಾರ ಪುಲ್ಲಿಂಗ ಎಂದು ತಿಳಿದು ಸ್ತ್ರೀಲಿಂಗ ರೂಪವಾಗಿ ಕೊಲೆಗಾರಿಣಿ ರೂಪವನ್ನು ತರಲಾಗಿದೆ. ಇದರ ಜೊತೆಗೆ ಕೊಲೆಗಾರ್ತಿ/ಗಾತಿ ರೂಪಗಳು ಬಳಕೆಯಲ್ಲಿವೆ.

**ಕ್ರೀಡಾಕಾರಿಣಿ**

ಕ್ರೀಡಾಕಾರ ಪದ ಈಗಾಗಲೇ ಬಳಕೆಯಾಗಿದೆ. ಮೇಲಿನ ಪದಕ್ಕೆ ಸ್ತ್ರೀಲಿಂಗ ಪ್ರತ್ಯಯವನ್ನು ಸೇರಿಸಿ ಸ್ತ್ರೀವಾಚಕ ಪದವನ್ನು ಸಾಧಿಸಲಾಗಿದೆ.

**ಡುಮ್ಮಣ್ಣಿ**

ಡುಮ್ಮಣ್ಣ ಎಂಬ ಪದಕ್ಕೆ ವಿರುದ್ಧವಾಗಿ ಡುಮ್ಮಣ್ಣಿ ಎಂಬ ಪದವನ್ನು ಬಳಕೆ ಮಾಡಲಾಗಿದೆ.

**ತ್ಯಾಗಿಣಿ**

ಣಿ ಎಂಬ ಸ್ತ್ರೀ ಸೂಚಕ ಪ್ರತ್ಯಯವನ್ನು ಸೇರಿಸಿ ಈ ಪದ ರಚನೆ ಮಾಡಲಾಗಿದೆ.

**ದುರ್ಗಿಣಿ**

ದುರ್ಗುಣ ಎಂಬ ನಾಮಪದವನ್ನು ಸ್ತ್ರೀಲಿಂಗ ಸೂಚಕ ಪ್ರತ್ಯಯವಾದ ಣಿ ಸೇರಿಸಿ ಪದರಚನೆ ಮಾಡಲಾಗಿದೆ.

**ಧುರೀಣೆ**

ಧುರೀಣ ಪದಕ್ಕೆ ವಿರುದ್ಧವಾಗಿ ಧುರೀಣೆ ಪದವನ್ನು ರಚನೆ ಮಾಡಲಾಗಿದೆ. ಧರೀಣೆ ಎಂಬ ಪದ ಈಗಾಗಲೆ ಬಳಕೆಯಲ್ಲಿದೆ.

**ನುಂಗಣ್ಣಿ**

ನುಂಗು ಕ್ರಿಯಾಪದಕ್ಕೆ ಣಿ ಸ್ತ್ರೀ ಸೂಚಕ ಪ್ರತ್ಯಯವನ್ನು ಹಚ್ಚಿ ಪದ ರಚನೆ ಮಾಡಲಾಗಿದೆ. ಅಂದರೆ ಕ್ರಿಯಾ ಪದವೊಂದು ನಾಮಪದವಾಗಿದೆ.

**ಪೂಜಾರಿಣಿ**

ಪೂಜಾರಿ ಪದ ಪುಲ್ಲಿಂಗ ಎಂದು ತಿಳಿದು ಣಿ ಸ್ತ್ರೀ ಸೂಚಕ ಪ್ರತ್ಯಯವನ್ನು ಹಚ್ಚಿ ಪದ ರಚನೆ ಮಾಡಲಾಗಿದೆ.

**ಬಾಂಬಿಣಿ**

ಬಾಂಬ್ ಎಂಬ ಇಂಗ್ಲಿಷ್ ಪದಕ್ಕೆ ಣಿ ಸ್ತ್ರೀ ಸೂಚಕ ಪ್ರತ್ಯಯ ಸೇರಿಸಿ ಬಳಕೆ ಮಾಡಲಾಗಿದೆ.

**ಬಾಸಿಣಿ**

ಇಂಗ್ಲಿಷ್ ಬಾಸ್ ಎಂಬ ಪದ ಪುರುಷ ಮತ್ತು ಸ್ತ್ರೀ ರೂಪಗಳೆರಡರಲ್ಲೂ ಬಳಕೆಯಲ್ಲಿತ್ತು. ಸಾಮಾನ್ಯವಾಗಿ ಪುರುಷರೇ ಮುಖಂಡರಾಗಿ ಇರುತ್ತಿದ್ದುದರಿಂದ ಸ್ತ್ರೀವಾಚಕ ಶಬ್ದ ಬಂದಿರಲಿಲ್ಲ. ಈಗ ಬದಲಾದ ಪರಿಸ್ಥಿತಿಗೆ ಅನುಗುಣವಾಗಿ ಬಂದಿರುವ ಪದ ಇದಾಗಿದೆ.

**ಬ್ರಹ್ಮಚಾರಿಣಿ**

ಬ್ರಹ್ಮಚಾರಿ ಪುಲ್ಲಿಂಗ ಸೂಚಕ ಪದವೆಂದು ತಿಳಿದು ಸ್ತ್ರೀಸೂಚಕ ಪ್ರತ್ಯಯವಾದ ಣಿ ಸೇರಿಸಿ ಪದರಚನೆ ಮಾಡಲಾಗಿದೆ.

**ಮಹಿಳೀಕರಣ**

ಫೆಮಿನೈಜೇಷನ್‌ಗೆ ಸಂವಾದಿಯಾಗಿ ಮಹಿಳೀಕರಣ ಪದವನ್ನು ಬಳಕೆ ಮಾಡಲಾಗಿದೆ.

**ಮಾಲೀಕಣಿ**

ಮಾಲೀಕ ಎಂಬ ಪದ ಪುರುಷ ವಾಚಕವಾಗಿ ಬಳಕೆಯಲ್ಲಿದೆ. ಮಾಲೀಕಣಿ ಸ್ತ್ರೀವಾಚಕವಾಗಿ ಬಳಕೆ ಮಾಡಲಾಗಿದೆ.

**ಮುಕುಟಧಾರಿಣಿ**

ಸ್ತ್ರೀಕೇಂದ್ರಿತ ಪದವನ್ನಾಗಿ ಣಿ ಪ್ರತ್ಯಯದೊಂದಿಗೆ ಬಳಕೆ ಮಾಡಲಾಗಿದೆ.

**ಮೇಂಬರಿಣಿ**

ಮೇಂಬರ್ ಪದಕ್ಕೆ ಸ್ತ್ರೀಸೂಚಕ ಪ್ರತ್ಯಯವಾದ ಣಿ ಸೇರಿಸಿಕೊಂಡು ಪದ ರಚನೆ ಮಾಡಲಾಗಿದೆ.

**ಮೇಸ್ತ್ರಮ್ಮ**

ಇಂಗ್ಲಿಶಿನ ಮಾಸ್ಟರ್ ಪದ ಕನ್ನಡದಲ್ಲಿ ತದ್ಭವಗೊಂಡು ಮೇಸ್ತ್ರು ಆಗಿದೆ. ಲಿಂಗಭೇದವಿಲ್ಲದೆ ಬಳಕೆಯಲ್ಲಿದೆ. ಮೇಸ್ತ್ರು ಪುಲ್ಲಿಂಗ ಎಂದು ತಿಳಿದು ಸ್ತ್ರೀಲಿಂಗ ಸೂಚಕವಾಗಿ ಮೇಸ್ತ್ರಮ್ಮ ಪದವನ್ನು ಬಳಕೆ ಮಾಡಲಾಗಿದೆ.

**ರೋಘೋತ್ಪಾದಕಿ**

ರೋಘೋತ್ಪಾದಕಿ ಎಂದು ಇ ಕಾರಂತಗೊಳಿಸಿ ರಚನೆ ಮಾಡಲಾಗಿದೆ.

**ಲಂಚಕೋರಿ**

ಲಂಚಕೋರ ಪುರುಷವಾಚಕವಾಗಿ ಗ್ರಹಿಕೆಯಲ್ಲಿರುವುದರಿಂದ ಸ್ತ್ರೀಲಿಂಗ ಪದವನ್ನಾಗಿ ಲಂಚಕೋರಿ ಪದವನ್ನು ಬಳಕೆ ಮಾಡಲಾಗಿದೆ.

**ವಕ್ತಾರಿಣಿ**

ವಕ್ತಾರ ಪದವನ್ನು ಪುಲ್ಲಿಂಗ ಎಂದು ತಿಳಿದು ಸ್ತ್ರೀಲಿಂಗ ಸೂಚಕವಾಗಿ ವಕ್ತಾರಿಣಿ ಪದವನ್ನು ಬಳಕೆ ಮಾಡಲಾಗಿದೆ.

**ವರ್ಷಧಾರಿಣಿ**

ಣಿ ಸ್ತ್ರೀ ಸೂಚಕ ಪ್ರತ್ಯಯ ಹಚ್ಚಿ ಪದ ಪ್ರಯೋಗ ಮಾಡಲಾಗಿದೆ.

**ವಾರಸುಧಾರಿಣಿ**

ವಾರಸುದಾರ ಎಂಬ ಪದ ಪುರುಷವಾಚಕ ಎಂದು ತಿಳಿದು ಣಿ ಪ್ರತ್ಯಯ ಹಚ್ಚಿ ಸ್ತ್ರೀವಾಚಕ ಶಬ್ದವನ್ನಾಗಿ ಬಳಕೆ ಮಾಡಲಾಗಿದೆ.

**ಶಾಕಿಣಿ**

ಶಾಕ್ ಎಂಬ ಪದಕ್ಕೆ ಣಿ ಎಂಬ ಸ್ತ್ರೀ ಸೂಚಕ ಪ್ರತ್ಯಯವನ್ನು ಹಚ್ಚಿ ಪದ ರಚನೆ ಮಾಡಲಾಗಿದೆ.

**ಶಾಸ್ತ್ರಿಣಿ**

ಸ್ವಾಮಿಜಿ ಪುರುಷವಾಚರ ಪದವೆಂದು ತಿಳಿದು ಸ್ತ್ರೀವಾಚಕವಾಗಿ ಶಾಸ್ತ್ರಿಣಿ ಪದವನ್ನು ಬಳಕೆ ಮಾಡಲಾಗಿದೆ.

**ಶಿರಸ್ತ್ರಾಣಧಾರಿಣಿ**

ಸ್ತ್ರೀ ಸೂಚಕ ಪ್ರತ್ಯಯವಾದ ಣಿ ಸೇರಿಸಿ ಪದ ರಚನೆ ಮಾಡಲಾಗಿದೆ.

**ಸರದಾರಿಣಿ**

ಸರದಾರ ಎಂಬ ಪುಲ್ಲಿಂಗ ಸೂಚಕ ಪದಕ್ಕೆ ಸಂವಾದಿಯಾಗಿ ಸರದಾರಿಣಿ ಪದ ಬಳಕೆ ಮಾಡಲಾಗಿದೆ.

**ಹಠವಾದಿಣಿ**

ಸ್ತ್ರೀ ಸೂಚಕವಾಗಿ ಣಿ ಪ್ರತ್ಯಯ ಬಳಕೆ ಮಾಡಲಾಗಿದೆ.

**ಹೆಣ್ಣತ್ವ**

ಪುರುಷತ್ವ ಮಾದರಿಯಲ್ಲಿ ಪದ ರಚನೆ ಮಾಡಲಾಗಿದೆ.

ಈ ರೀತಿಯ ಪದಗಳು ಲಘುಬರಹಗಳಲ್ಲಿ ಸಾಕ್ಷಿಯಾಗಿವೆ. ಇವುಗಳು ಕೇವಲ ಮಹಿಳೆಯರನ್ನು ಅವಹೇಳನ ಮಾಡಲು ಬಳಸಲಾಗುತ್ತದೆ. ಮಹಿಳೆಯನ್ನು ಹಾಸ್ಯದ ವಸ್ತುವಾಗಿ ಮಾಡಿಕೊಂಡು ನಗಾಡಲು ಬಳಸುತಿದ್ದಾರೆ. ಅನಗತ್ಯವಾದ ಕಡೆಗಳಲ್ಲಿ ಸ್ತ್ರೀ ಲಿಂಗ ಪ್ರತ್ಯಯಗಳು ಲಘು ಬರಹಗಳಲ್ಲಿ ಮಾತ್ರ ಕಂಡುಬರುತ್ತದೆ. ಗಂಭೀರ ಬರಹಗಳಲ್ಲಿ ಕಾಣಿಸುತ್ತಿಲ್ಲ ಅಂದರೆ ಮಹಿಳೆ ಕುರಿತಾಗಿ ವಿವರಿಸುವುದು ಹಾಸ್ಯವಾಡಿ ನಗುವುದು ಸಮಾಜದೊಳಗೆ ಒಂದು ವಸ್ತುವಾಗಿದೆ. ಇದು ಎಷ್ಟರ ಮಟ್ಟಿಗೆ ಸರಿಯಾದ ಕ್ರಮ ಎಂಬುದಕ್ಕೆ ಉತ್ತರವಿಲ್ಲ.

ಈ ಸಂದರ್ಭದಲ್ಲಿ ಆಗಿರುವಂತಹ ತಾರತಮ್ಯತೆ ಭಾಷೆ ಮೂಲದಿಂದ ಅಲ್ಲ. ಸಮಾಜ ಸೃಷ್ಟಿಯಿಂದ ಅಥವಾ ಸಮಾಜ ಸಂರಚನೆಗೊಂಡಿರುವ ಕಾರಣಕ್ಕಾಗಿ ಹೀಗಾಗಿದೆ. ಅಂದರೆ ಇದರ ಅರ್ಥ ಭಾಷೆ ಸಂರಚನೆ ಆಗಿರುವುದು ಸಮಾಜದ ರಚನೆಗೆ ಆಧಾರವಾಗಿ. ಇವು ಭಾಷೆಯ ಸಹಜ ಗುಣಗಳೆಂದು ಒಪ್ಪಿ ಇವು ಭಾಷೆಯೊಳಗಡೆಯ ಲಿಂಗ ಭಿನ್ನತೆಗಳು ಎಂದು

ಅರ್ಥಮಾಡಿಕೊಂಡರೆ ಅಥವಾ ಒಪ್ಪಿಕೊಂಡರೆ ಸಮಸ್ಯೆ ಇಲ್ಲ. ಆದರೆ ಭಾಷಾ ಕಲಿಕೆ ಸಂದರ್ಭಗಳಲ್ಲಿ ಇವುಗಳನ್ನು ತಾರತಮ್ಯ ಎಂದು ಗ್ರಹಿಸಿಕೊಳ್ಳಲಾಗುತ್ತಿದೆ. ಮತ್ತು ಅವುಗಳನ್ನು ತಾರತಮ್ಯದ ನೆಲೆಯಲ್ಲಿ ಅರ್ಥೈಸಿಕೊಳ್ಳುತ್ತಿದ್ದಾರೆ. ಇದರಿಂದಾಗಿ ಹೆಂಗಸಿಗೆ ಸಂಬಂಧಪಟ್ಟ ಪದಕೋಶದ ಬಗ್ಗೆ ಹೇಳಬೇಕಾದಾಗ ನಾವು ಇರುವ ಪದದಿಂದ ಹೊಸದೊಂದನ್ನು ಸೃಷ್ಟಿಸಿಕೊಳ್ಳಬೇಕಾದ ಅಗತ್ಯ ಇದೆಯೆಂಬುದು ಇಗ ಹೆಚ್ಚು ಖಚಿತಗೊಂಡಿರುವ ಮಾತು. ಈಗಾಗಲೆ ನೋಡಿರುವಂತಹ ವೃತ್ತಿಸೂಚಕ ಪದ ತಂತಾನೇ ಗಂಡಸನ್ನು ಸೂಚಿಸುತ್ತಿರುತ್ತಿದೆ. ಸಾಮಾನ್ಯವಾಗಿ ಅದು ಪುರುಷ ಕೇಂದ್ರಿತವಾಗಿಯೇ ಇರುತ್ತದೆ. ಅದೇ ವೃತ್ತಿಯಲ್ಲಿರುವ ಹೆಂಗಸನ್ನು ಸೂಚಿಸಲು ವಿಶೇಷ ಪದವೊಂದನ್ನು ರೂಪಿಸಿಕೊಳ್ಳಬೇಕು. ಆದ್ದರಿಂದ ಪದಕೋಶ ಯಾವಾಗಲೂ ಗಂಡಸನ್ನು ಒಳಗೊಂಡೆ ಇರುತ್ತದೆ. ಹೆಂಗಸು ಒಳಗೊಳ್ಳಬೇಕಾದರೆ ಹೊಸ ಪದವೊಂದನ್ನು ರೂಪಿಸಿಕೊಳ್ಳಬೇಕು. ಯಾವುದೆ ಭಾಷೆಯಲ್ಲಿ ಗಮನಿಸಿದರೂ ವ್ಯಕ್ತಿವಾಚಕಗಳು ಪುಲ್ಲಿಂಗವಾಚಿಯಾಗಿರುತ್ತವೆ. ಸ್ತ್ರೀಲಿಂಗ ವಾಚಿಗಳು ರೂಪಗೊಳ್ಳಬೇಕು ಎಂದರೆ ಆ ಪುಲ್ಲಿಂಗವಾಚಿ ಪದಗಳನ್ನು ಹೆಂಗಸರಿಗೆ ಅನ್ವಯವಾಗುವಂತೆ ಬದಲಿಸಿಕೊಳ್ಳಬೇಕಾಗುತ್ತದೆ. ಎಂದು ಮಹಿಳಾ ಅಧ್ಯಯನಕಾರರು ವಿವರಿಸುತ್ತಿದ್ದಾರೆ.

ಇವರ ಪ್ರಕಾರ ಭಾಷೆಯೊಳಗಡೆಯ ಭಿನ್ನತೆಯನ್ನು ಒಪ್ಪಿಕೊಂಡು ಭಾಷೆ. ಬಳಕೆ ಮತ್ತು ಗ್ರಹಿಕೆ ಒಳಗಡೆ ನಡೆಯುತ್ತಿರುವ ತಾರತಮ್ಯವನ್ನು ಮುಂದಿಟ್ಟುಕೊಂಡು ಇವರುಗಳು ಈ ಅಭಿಪ್ರಾಯವನ್ನು ವಿವರಿಸುತ್ತಿದ್ದಾರೆ. ಅಂದರೆ ಭಾಷೆಯೊಳಗಡೆಯ ಭಿನ್ನತೆಯನ್ನು ಕಲ್ಪಿಸುವ ಸಂದರ್ಭದಲ್ಲಿ ತಾರತಮ್ಯವಾಗಿ ಕಲ್ಪಿಸಲಾಗುತ್ತಿದೆ.

ಉದಾಹರಣೆಗೆ:–

- ಕುರುಡ–ಕುರುಡಿ
- ಬಡವ–ಬಡವಿ
- ಕುಂಟ–ಕುಂಟಿ
- ಮೂಗ–ಮೂಗಿ

ಯಾವುದೇ ಶಾಲಾ ವ್ಯಾಕರಣವನ್ನು ತೆಗೆದು ನೋಡಿದರೆ ಕೆಲವು ಪದಗಳನ್ನು ನೀಡಿ ಇವುಗಳ ಸ್ತ್ರೀಲಿಂಗ ರೂಪ ಬರೆಯಿರಿ ಎಂದು ಹೇಳುವ ಅಭ್ಯಾಸಗಳಿರುತ್ತವೆ. ಅದಕ್ಕೆ ಅನುಕೂಲಕರವಾದ ಕೆಲವು ನಿಯಮಗಳನ್ನು ಹೇಳುತ್ತಾರೆ. 'ಅ' ಕಾರಂತವಾಗಿದ್ದರೆ 'ಇ' ಕಾರಂತವಾಗಿ ಮಾಡಿ ಬರೆಯಿರಿ ಎಂದು ಹೇಳುವುದು ಒಂದು ನಿಯಮ. ಆದರೆ ಮೊದಲೇ ಸ್ತ್ರೀಲಿಂಗ ರೂಪವಿದ್ದು

ಅದಕ್ಕೆ ಪುಲ್ಲಿಂಗ ರೂಪವನ್ನು ರೂಪಿಸಿಕೊಳ್ಳುವುದು ಅಪರೂಪ. ಯಾವುದೇ ಭಾಷೆಯಾದರೂ ಸಹ ಅದು ನೇರವಾಗಿ ಹೇಳುತ್ತಿಲ್ಲವೆಂದರೂ ಅದು ಸಹಜವೆಂಬಂತೆ ಪುರುಷನನ್ನು ಕೇಂದ್ರಿಕರಿಸಿಕೊಂಡೆ ಇರುತ್ತದೆ. ಅಲ್ಲಿ ಸ್ತ್ರೀಯನ್ನು ಸೇರಿಸಬೇಕಾದರೆ ಕೆಲವು ನಿಯಮಗಳನ್ನು ಅನುಸರಿಸಲೇಬೇಕು. ಭಾಷಾರಚನೆ ಮತ್ತು ಭಾಷಾ ಬಳಕೆಯಲ್ಲಿ ಈ ಪ್ರವೃತ್ತಿ ಎಲ್ಲೆಡೆ ಕಂಡುಬರುತ್ತದೆ.

ಭಾಷೆ ಪುರುಷ ಪ್ರಧಾನತೆಯಿಂದ ಕೂಡಿದೆ ಮತ್ತು ಪುರುಷನ ಹಿತಾಸಕ್ತಿಯನ್ನು ಕಾಪಡಿಕೊಂಡು ಬರುತ್ತಿದೆ. ಭಾಷೆ ರಚನೆಯಾಗಿರುವುದು ಹಾಗೇನೇ. ಆದರೆ ಈ ವಿಚಾರವನ್ನು ಗ್ರಹಿಸುವಲ್ಲಿ ಅಧ್ಯಯನಕಾರರು ಎಡವುತ್ತಿದ್ದಾರೆ. ಲಿಂಗ ಭಿನ್ನತೆಯಿಂದ ಇರುವಂತಹದನ್ನು ಲಿಂಗ ತಾರತಮ್ಯತೆ ಎಂದು ಗ್ರಹಿಸಿಕೊಳ್ಳುತ್ತಿದ್ದಾರೆ. ಇದಕ್ಕೆ ಹಲವು ಕಾರಣಗಳಿರಬಹುದು. ಭಾಷಾ ಅಧ್ಯಯನಕಾರರೂ ಇವರಲ್ಲದ್ದರಿಂದ ಭಾಷಾ ತಜ್ಞತೆ ತಿಳಿಯದೆ ಇರುವುದರಿಂದ ಗ್ರಹಿಕೆಯಲ್ಲಿ ತಪ್ಪಾಗುತ್ತಿರಬಹುದು. ಹೆಚ್ಚಾಗಿ ಮಹಿಳಾ ಅಧ್ಯಯನಕಾರರು ಅನ್ಯಜ್ಞಾನದ ಶಿಸ್ತುಗಳಲ್ಲಿ ತಜ್ಞತೆ ಇರುವವರು ಈ ಕುರಿತು ಚರ್ಚೆ ಮಾಡುತ್ತಿದ್ದಾರೆ. ಹೀಗಾಗಿ ಸಹಜವಾಗಿಯೇ ಮಹಿಳೆಯರ ಭಾಷೆಯನ್ನು ಸರಿಯಾಗಿ ಗ್ರಹಿಸಿಕೊಳ್ಳುವಲ್ಲಿ ಕೆಲವು ತೊಂದರೆಗಳಾಗುತ್ತಿವೆ. ಭಾಷೆಯ ಭಿನ್ನತೆಗಳನ್ನು ತಾರತಮ್ಯತೆ ಎಂದು ಬೇಗನೇ ನಿರ್ಧರಿಸುತ್ತಿದ್ದಾರೆ.

ಪತ್ರಿಕೆ ಮಾಧ್ಯಮಗಳಲ್ಲಿ ಘಟನೆಗಳ ವಿವರಣೆ ಮಹಿಳೆಯನ್ನು ಹೆಚ್ಚುವರಿಯಾಗಿ 'ಸೇರಿದಂತೆ' ಎಂಬ ಪದಗಳ ಮುಖಾಂತರ ವಿವರಿಸುತ್ತಿದ್ದಾರೆ. ಉದಾಹರಣೆಗೆ

- ಆ ಮಹತ್ವದ ಸಭೆಯಲ್ಲಿ ಮಹಿಳೆಯರೂ ಉಪಸ್ಥಿತರಿದ್ದರು;
- "ಸತ್ತವರ ಪೈಕಿ ಐವರು ಮಹಿಳೆಯರೂ ಸೇರಿದ್ದಾರೆ."

ಎಂಬಂತಹ ವಾಕ್ಯಗಳು ವಿವರಣೆಯ ವಿಸ್ತರಣೆಯಾಗಿ ಮಹಿಳೆಯನ್ನು ಒಳಗೊಳ್ಳುತ್ತವೆ. ಮಹಿಳೆಯನ್ನು ಒಳಗೊಂಡಂತೆ, ಮಹಿಳೆಯರು ಸೇರಿದಂತೆ ಎಂದು ಹೆಚ್ಚುವರಿ ವಿವರಣೆಕೊಡುವುದರ ಮೂಲಕ ಮಹಿಳೆಯನ್ನು ಘಟನೆಯ ಸಂದರ್ಭದಿಂದ ವಿವರಿಸುತ್ತಿದ್ದಾರೆ. ಇಲ್ಲಿ ಆಗಬೇಕಾಗಿರುವುದು ಏನೆಂದರೆ ಮಹಿಳೆಯರ ಸಂಖ್ಯೆ ಎಷ್ಟು? ಪುರುಷರ ಸಂಖ್ಯೆ ಎಷ್ಟು? ಮಕ್ಕಳ ಸಂಖ್ಯೆ ಎಷ್ಟು? ಎಂಬುದಾಗಿ ವಿವರಿಸಬೇಕೆ ಹೊರತು, ದನ, ಕೋಳಿಗಳೂ ಸೇರಿದಂತೆ ಎಂಬ ಹಾಗೆ ಮಹಿಳೆ ಸೇರಿದಂತೆ ಎಂದು ವಿವರಿಸುವ ಬಗೆಯು ಭಾಷೆ ಅಲ್ಲ.

ಸಮಾಜದಲ್ಲಿ ಮಹಿಳೆಯನ್ನು ಕುರಿತಂತೆ ಹಲವು ನಂಬಿಕೆಗಳು ಬೆಳೆದು ಬಂದಿವೆ. ಅವುಗಳಿಗೆ ಅನುಗುಣವಾಗಿ ಮಹಿಳೆಯರನ್ನು ರೂಪಿಸಿಕೊಂಡಿದ್ದಾರೆ. ಆ ನಂಬಿಕೆಗಳನ್ನು ಉಳಿಸಿಕೊಳ್ಳಲು

ಹಲವಾರು ನಿಯಮಗಳನ್ನು ರೂಪಿಸಿದ್ದಾರೆ. ಅಲಿಖಿತ ನಿಯಮಗಳನ್ನು ಮುರಿಯದಂತೆ ಹಲವು ನಿಷೇಧ ನಿರ್ಬಂಧಗಳನ್ನು ಮಹಿಳೆಯರ ಮೇಲೆ ಹೇರಿದ್ದಾರೆ. ನಿಸರ್ಗ ಸಹಜವಾದುದನ್ನು ಸಹಜ ಗುಣಲಕ್ಷಣಗಳನ್ನು ಸಮಾಜದಲ್ಲಿ ಸಮಾನವಾಗಿ ಪರಿಗಣಿತವಾಗುವುದಿಲ್ಲ. ಬದಲಿಗೆ ಕನಿಷ್ಠರು ಶ್ರೇಷ್ಠರು ಎಂಬ ತಾರತಮ್ಯದ ಅಳತೆ ಅಲ್ಲಲ್ಲಿ ಜಾರಿಗೊಂಡಿದೆ.

ಕೇಶಿರಾಜನನ್ನು ಒಳಗೊಂಡಂತೆ ವ್ಯಾಕರಣಕಾರರು ಲಿಂಗಗಳನ್ನು ಹೇಳುವಾಗ "ಪುರುಷರ ಪುಲ್ಲಿಂಗಗಳು ಸ್ತ್ರೀಯರೇ ಸ್ತ್ರೀಲಿಂಗಗಳು ಉಳಿದವು ನಪುಂಸಕ ಲಿಂಗಗಳು ಎಂದು ಹೇಳುತ್ತಾರೆ."[೧೨]

ಕೆಲವು ವ್ಯಾಕರಣಕಾರರು ವ್ಯಾಕರಣ ನಿಯಮಗಳನ್ನು "ಯಾವ ಶಬ್ದ ಪ್ರಯೋಗ ಮಾಡಿದಾಗ ಗಂಡಸು ಎಂಬರ್ಥವು ಮನಸ್ಸಿಗೆ ಹೊಳೆಯುವುದೋ ಅದು ಪುಲ್ಲಿಂಗವೆನಿಸುವುದು"[೧೩] ಅದು ಹೇಗೆ ಎಂಬುದು ಗೊತ್ತಿಲ್ಲ. ಇವರೂ ಕೊಡುತ್ತಿರುವ ಉದಾಹರಣೆಗಳನ್ನು ನೋಡಿದರೆ ನಾಮಪದಗಳು, ಸಂಬಂಧವಾಚಕಗಳು ಇತ್ಯಾದಿ ಪದಗಳನ್ನು ಕೊಡುತ್ತಿದ್ದಾರೆ.

ಉದಾಹರಣೆ:– ದೊಡ್ಡವನು, ಮುದುಕ, ಕರ್ಳಳ, 'ಮನುಷ್ಯ' ಶಂಕರಬಸವ, ಹುಡುಗ, ಕೆಟ್ಟವನು, ಅರಸು, ಪ್ರಧಾನಿಮಂತ್ರಿ, ಜಟ್ಟಿ, ಶಕ್ತಿವಂತ, ತಂದೆ, ಮಾವ, ಸಹೋದರ,ಅಣ್ಣ, ತಮ್ಮ, ಚಿಕ್ಕಪ್ಪ, ಸಚಿವ, ರಾಮ, ಕೃಷ್ಣ, ಶಂಕರಾಚಾರ್ಯ, ಮದುಮಗ, ದಾಸ, ಕವಿ, ವಿಮರ್ಶಕ, ಇತ್ಯಾದಿ. ಇಲ್ಲಿ ಕೊಟ್ಟಿರುವ ಉದಾಹರಣೆಗಳಲ್ಲಿ ಕೆಲವು ಪದಗಳು ಲಿಂಗ ತಟಸ್ಥವಾಗಿ ಸಮಾನವಾಗಿ ಬಳಸಬೇಕಾಗಿರುವಂತಹ ಪದಗಳು ಒಳಗೊಂಡಿವೆ.

ಉದಾಹರಣೆಗೆ – ಕವಿ

– ವಿಮರ್ಶಕ

– ಪ್ರಧಾನಿ

– ಮಂತ್ರಿ

ಈ ಪದಗಳು ಯಾವ ಲಿಂಗವನ್ನು ಸೂಚಿಸುತ್ತಿವೆ. ಈ ಸ್ಥಾನದಲ್ಲಿ ಮಹಿಳೆಯನ್ನು ಹೇಗೆ ಬಳಕೆಮಾಡಬೇಕು ಈ ಸ್ಥಾನಗಳು ಲಿಂಗ ತಟಸ್ಥವಾದ ಸ್ಥಾನಗಳು ಮೇಲಿನ ಉದಾಹರಣೆಗಳನ್ನು ಕೊಟ್ಟು

'ಮೇಲಿನ ಯಾವ ಶಬ್ದವನ್ನು ಹೇಳಿದರು ನಮ್ಮ ಭಾವನೆಗೆ ಗಂಡಸು ಎಂಬರ್ಥ ಹೊಳೆಯುವುದು. ಆದ್ದರಿಂದ ಇವು ಪುಲ್ಲಿಂಗಗಳು'[೧೪] 'ಮನುಷ್ಯ' ಪದವು ಪುಲಿಂಗವಾದರೆ

ಮಹಿಳೆಯನ್ನು ಒಳಗೊಳ್ಳುವಂತಹ ಪದ ಯಾವುದು. ಈಗಾಗಲೆ ಮಹಿಳಾ ಅಧ್ಯಯನಕಾರರು ಈ ಪದವನ್ನು ಕುರಿತಂತೆ ಹಲವು ಚರ್ಚೆಗಳನ್ನು ಮಾಡಿದ್ದಾರೆ ಇದರ ಕುರಿತು ಅಧ್ಯಾಯದ ಆರಂಭದಲ್ಲೇ ಚರ್ಚೆಮಾಡಲಾಗಿದೆ. ಹಾಗಾಗಿ ಮತ್ತೆ ಆ ಚರ್ಚೆ ಇಲ್ಲಿ ತರುವುದಿಲ್ಲ.

"ಸ್ತ್ರೀಲಿಂಗ ಯಾವ ಶಬ್ದ ಪ್ರಯೋಗ ಮಾಡಿದಾಗ ನಮ್ಮ ಭಾವನೆಗೆ ಹೆಂಗಸು ಎಂಬ ಅರ್ಥವು ಹೊಳೆಯುವುದೋ ಅದು ಸ್ತ್ರೀಲಿಂಗ ವೆನಿಸುವುದು"[೧೫]. ಇವರು ಕೊಡುತ್ತಿರುವ ಉದಾಹರಣೆಗಳು ಕೆಳಕಂಡತಿವೆ. ಉದಾಹರಣೆಗೆ:–ದೊಡ್ಡವಳು, ಮುದುಕಿ, ಅತ್ತೆ, ಚಿಕ್ಕಮ್ಮ, ದೊಡ್ಡಮ್ಮ, ಹೆಂಡತಿ, ತಂಗಿ, ಸಹೋದರಿ, ಪಾರ್ವತಿ, ಅಕ್ಕ, ಅರಸಿ, ರಾಣಿ, ತಾಯಿ, ವಿದೂಷಿ, ಚಲುವೆ, ಒಕ್ಕಲಗಿತ್ತಿ, ಹಾವಡಗಿತ್ತಿ, ಕೆಟ್ಟವಳು, ಚಿಕ್ಕವಳು, ಒಳ್ಳೆಯವಳು, ಬ್ರಾಹ್ಮಣೀತಿ, ಉಪಾಧ್ಯಾಯೆ, ಅಧ್ಯಕ್ಷೆ, ಸಚಿವೆ, ಮಗಳು, ಬಾಲಿಕೆ, ಸ್ತ್ರೀ, ಹೆಂಗಸು, ಇತ್ಯಾದಿ.

ಮೇಲಿನ ಉದಾಹರಣೆಯಲ್ಲಿ ಹೆಚ್ಚು ಪದಗಳು ಸಂಬಂಧವಾಚಕ ಪದಗಳೆ. ಉಪಾಧ್ಯಾಯೆ, ಅಧ್ಯಕ್ಷೆ, ಸಚಿವೆ, ಒಕ್ಕಲುಗಿತ್ತಿ ಇತ್ಯಾದಿ ಪದಗಳು ಮಾತ್ರ ವೃತ್ತಿಸೂಚಕ ಪದಗಳು. ಮನುಷ್ಯ ಪದಕ್ಕೆ ಇಲ್ಲಿ ಉತ್ತರವಿಲ್ಲ. ಹಾಗೇ ಪ್ರಧಾನಮಂತ್ರಿ ಕೇವಲ ಪುರುಷರು ಅಥವಾ ಗಂಡಸಿನ ಶಬ್ದಗಳೆ ಹಾಗಿದ್ದರೆ ಇಲ್ಲಿ ಮಹಿಳೆ ಬಂದರೆ ಅದೆಕ್ಕೆ ಯಾವ ಉತ್ತರವಿಲ್ಲ.

ಹೀಗೆ ಕೆಲವು ಸಂದರ್ಭಗಳಲ್ಲಿ ವ್ಯಾಕರಣಕಾರರು ವಾಸ್ತವವನ್ನು ಬಿಟ್ಟು ವ್ಯಾಕರಣ ನಿಯಮಗಳನ್ನು ರಚಿಸುತ್ತಿದ್ದಾರೆ. ವಾಸ್ತವದಲ್ಲಿ ಆಗುತ್ತಿರುವಂತಹ ಚರ್ಚೆಗಳನ್ನು ಕುರಿತಂತೆ ಇವರು ಕಾಲ ಸಂದರ್ಭಕ್ಕೆ ಅನುಗುಣವಾಗಿ ಹೊಂದಿಕೊಳ್ಳುತಿಲ್ಲ. ಬದಲಾಗಿ ಶತಮಾನಗಳ ಪುರುಷ ಪ್ರಧಾನ ಮೌಲ್ಯಗಳನ್ನೆ ಮತ್ತೆ–ಮತ್ತೆ ವಿವರಿಸುತ್ತಿದ್ದಾರೆ. ವಾಸ್ತವದಲ್ಲಿ ಆಗುತ್ತಿರುವ ಬದಲಾವಣೆಗಳನ್ನು ಗುರುತಿಸದ ಹಳೆಯ ಮೌಲ್ಯಗಳನ್ನೇ ಎತ್ತಿಹಿಡಿಯುತ್ತ ಪೂರ್ವಗ್ರಹಪೀಡಿತರಾಗಿದ್ದಾರೆ.

ಲಿಂಗ ತಟಸ್ಥವಾಗಿರುವ ಪದಗಳನ್ನು ಪುಲ್ಲಿಂಗ ಎಂದು ವಿವರಿಸುತ್ತಿರುವಂತಹುದು ವಾಸ್ತವದಲ್ಲಿ ಅದರ ಬಳಕೆ ಮತ್ತು ಅರ್ಥದಲ್ಲಿ ಭಿನ್ನತೆಯಿಂದ ಕೂಡಿರುತ್ತವೆ. ಅವುಗಳನ್ನು ಯಾವುದೋ ಒಂದು ಮೌಲ್ಯಕ್ಕೆ ರೂಪಿಸುತ್ತಿರುವಂತಹದ್ದು ನಡೆಯುತ್ತಿದೆ.

ಇಲ್ಲಿ ಗಮನಿಸಿರುವಂತೆ ಮಹಿಳೆ ಅಧ್ಯಯನಕಾರರಲ್ಲೂ ಈ ಬಗೆಯ ಕೆಲವು ತಪ್ಪುಗಳಿವೆ. ಹಾಗೇನೆ ಬಳಕೆಯಲ್ಲಿ ಸಹ ಕೆಲವು ವಾಸ್ತವಕ್ಕೂ ಅರ್ಥಕ್ಕೂ ಭಿನ್ನವಾಗಿ ಲಘುವಾಗಿ ಹಾಸ್ಯಕ್ಕಾಗಿ ತಮಗೆ ಬೇಕಾದಂತೆ ಬರೆದುಕೊಳ್ಳುವವರಿದ್ದಾರೆ. ಹಾಗೇನೆ ವ್ಯಾಕರಣಕಾರರ ಈ ರೀತಿಯ ಕೆಲವು ತಪ್ಪುಗಳಿವೆ. ವಾಸ್ತವ ಯಾವುದು, ಲಿಂಗ ಭಿನ್ನತೆಯಿಂದ ಕೂಡಿದವುಗಳು ಯಾವುವು, ಲಿಂಗ ತಾರತಮ್ಯತೆಯನ್ನು ಸೂಚಿಸುವಂತಹ ಪದಗಳು ಯಾವುವು ಎಂಬುದರ ಕುರಿತಂತೆ ಒಟ್ಟಾರೆ

ತಿಳುವಳಿಕೆಯ ಒಳಗಡೆ ಹಲವು ಗೊಂದಲಗಳಿವೆ. ಮಹಿಳಾ ಅಧ್ಯಾಯನಕಾರರು ಲಿಂಗ ತಾರತಮ್ಯತೆಯನ್ನು ಗುರುತಿಸುವ ಆತುರದಲ್ಲಿ ತಪ್ಪುಗಳು ನಡೆಯುತ್ತಿವೆ.

ಆವೇಶದ ಫಲವಾಗಿ ಪ್ರತಿಯೊಂದರಲ್ಲೂ ತಾರತಮ್ಯತೆ ಇದೆ ಎಂಬ ಮುಂದಾಲೋಚನೆಯಲ್ಲಿ ಲಿಂಗ ಭಿನ್ನತೆಯನ್ನು ಗುರುತಿಸಲು ಸಾಧ್ಯವಾಗುತ್ತಿಲ್ಲ. ವಾಸ್ತವದಲ್ಲಿ ಭಾಷೆಯ ಸಹಜ ನಿಯಮವಾದ ಭಿನ್ನತೆಯನ್ನು ತಾರತಮ್ಯ ಎಂದು ವಿವರಿಸಿಕೊಳ್ಳುತ್ತಾ ಇದ್ದಾರೆ. ಇದು ಕೇವಲ ಅವರ ನಿರ್ಧಾರಗಳು ಮತ್ತು ಕೆಲವು ಪದಗಳನ್ನು ಗುರುತಿಸುವಲ್ಲಿ ಮಾತ್ರ. ಹಾಗಂತ ಮಹಿಳಾವಾದಿಗಳು ತಾರತಮ್ಯತೆಯನ್ನು ಗುರುತಿಸಿಲ್ಲ ಎಂದಲ್ಲ ಕೆಲವು ಸಂದರ್ಭಗಳಲ್ಲಿ ಮಾತ್ರ ಅಥವಾ ಕೆಲವು ಪದಗಳನ್ನು ಗುರುತಿಸುವಲ್ಲಿ ಮಾತ್ರ ಹೀಗಾಗುತ್ತಿದೆ.

ಮಹಿಳಾವಾದಿಗಳು ಭಾಷೆಯಲ್ಲಿರುವ ಭಿನ್ನತೆಗಳನ್ನು ತಾರತಮ್ಯ ಎಂದು ವಿವರಿಸುತ್ತಿದ್ದಾರೆ. ಹೀಗಾಗಿ ಕೆಲವರು ಹಾಸ್ಯಕ್ಕೊಳಗಾಗುತ್ತಿದ್ದಾರೆ. ಇದಕ್ಕೆ ಒಳಗೊಂಡಂತಹ ಮತ್ತು ಲಘುಬರಹಗಳಲ್ಲಿ ರಂಜನೆಗೊಳ್ಳುತ್ತಿದ್ದಾರೆ, ಬಳಸಿಕೊಳ್ಳುತ್ತಿದ್ದಾರೆ.

ವ್ಯಾಕರಣಕಾರರು ತಮ್ಮಲ್ಲಿರುವ ಮೌಲ್ಯಗಳನ್ನು ಮರು ಸೃಷ್ಟಿಸುವುದಕ್ಕೆ ಲಿಂಗ ವ್ಯತ್ಯಾಸಗಳನ್ನು ಗುರುತಿಸದೆ ಎಲ್ಲ ಪದಗಳನ್ನು ಪುಲ್ಲಿಂಗ ಸೂಚಕವಾಗಿ ವಿವರಿಸುತ್ತಿದ್ದಾರೆ.

ಹೀಗೆ ಭಾಷೆಯಲ್ಲಿನ ಭಿನ್ನತೆ ಅಸಮಾನತೆ ಮತ್ತು ವಾಸ್ತವಗಳನ್ನು ಸರಿಯಾಗಿ ತಿಳಿಯದೆ ಭಾಷೆ ನಡೆಯುತ್ತಿದೆ. ಭಾಷೆಯ ಸಹಜ ನಿಯಮಗಳನ್ನು ತಿಳಿಯುವಲ್ಲಿ ಹಲವು ರೀತಿಯಲ್ಲಿ ತಪ್ಪುಗಳು ನಡೆಯುತ್ತಿವೆ.

**ಅಡಿ ಟಿಪ್ಪಣಿಗಳು**

೧) ಸಚಿತ್ರ ಕನ್ನಡ-ಕನ್ನಡ ಕಸ್ತೂರಿ, ಕೋಶರಾಮಶ್ರಮ ಪಬ್ಲಿಕೇಶನ್, ಸಂ.ಪಂಡಿತ ಜೆ.ಎಂ.ಕವಲಿ

೨) ಪ್ರಸಾರಂಗ-ಮೈಸೂರು ವಿ.ವಿ ಮೈಸೂರು, ಇಂಗ್ಲಿಷ್-ಕನ್ನಡ ನಿಘಂಟು ಪು.ಸಂ.೬೭೮೪ ಸಂಪುಟ ೦೭

೩) ಅದೇ, ಪು.ಸಂ ೩೪೪೧ ಸಂಪುಟ ೦೩

೪) ಇಂಗ್ಲಿಷ್-ಇಂಗ್ಲಿಷ್-ಕನ್ನಡ ನಿಘಂಟು, ಪ್ರೋ.ಎಲ್.ಎಸ್.ಶೇಷಗಿರಿರಾವ್ ಪು.ಸಂ ೧೧೩೧,೩೭೭

೫) ಕನ್ನಡ-ಕನ್ನಡ-ಇಂಗ್ಲಿಷ್ ನಿಘಂಟು, ಜಿ.ವೆಂಕಟಸುಬ್ಬಯ್ಯ ಶೇಷಗಿರಿ ರಾವ್, ರಾಮಚಂದ್ರ ಮೂರ್ತಿ ಡಿ.ಬಿ.ಎಚ್.ಪ್ರಕಾಶನ

೬) ಕನ್ನಡ ವಿ.ವಿ. ವಿಶ್ವಕೋಶ೧, ಭಾಷೆಯ ಸಾಮಾಜಿಕ ಚಹರೆಗಳು ಡಾ.ಡಿ ಪಾಂಡುರಂಗಬಾಬು. ಪು.ಸಂ.೫೬

೭) ಗಂಗಾಧರ ಮಡಿವಾಳೇಶ್ವರ ತುರಮುರಿ, ಸಟೀಕಿನ ಶಬ್ದ ಮಂಜರಿ ಕೋಶ ಪು.೧೫೪ ಪ್ರಕಾಶನ ಪುಸ್ತಕ ಪ್ರಾಧೀಕಾರ ೧೯೬೯

೮) ಸಚಿತ್ರ ಕನ್ನಡ-ಕನ್ನಡ ಕಸ್ತೂರಿ, ಕೋಶರಾಮಾಶ್ರಮ ಪಬ್ಲಿಕೇಶನ್(ಸಂ) ಸಂ.ಪಂಡಿತ ಜೆ.ಎಂ.ಕವಲಿ

೯) ಭಾಷೆ ಮತ್ತು ಸಾಮಾಜಿಕ ಸಂದರ್ಭ, ಕೃಷ್ಣ ಪರಮೇಶ್ವರಭಟ್ಟ, ಪು.೨೩

೧೦) ಮಹಿಳಾ ಅಧ್ಯಯನ ಸಮಾಜ ಶಾಸ್ತ್ರೀಯ ದೃಷ್ಟಿಕೋನ, ಸುಧಾ ಸೀತಾರಾಮನ್, ಪು.ಸಂ.೧೦ ಸ್ತ್ರೀಲೇಖ ಪ್ರಕಟ-೨೧೦

೧೧) ಸ್ತ್ರೀವಾದ ತಾತ್ತ್ವಿಕತೆ-ಶ್ರೀಮತಿ ಪು.ಸಂ.೨೦೯-೨೧೦

೧೨) ಕೇಶಿರಾಜ ವಿರಚಿತ ಶಬ್ದಮಣಿದರ್ಪಣಂ, ಡಾ.ಟಿ.ವಿ ವೆಂಕಟಾಚಲನಶಾಸ್ತ್ರೀ ಪು.ಸಂ.೮೧ ಕನ್ನಡ ಸಾಹಿತ್ಯ ಪರಿಷತ್ತು, ೨೦೧೧

೧೩) ಕನ್ನಡ ವ್ಯಾಕರಣದರ್ಪಣ, ಕನ್ನಡ ಸಾಹಿತ್ಯ ಪರಿಷತ್ತು ೨೦೧೦ ಪು.ಸಂ.೬೭

೧೪) ಕನ್ನಡ ವ್ಯಾಕರಣ ದರ್ಪಣ, ಕನ್ನಡ ಸಾಹಿತ್ಯ ಪರಿಷತ್ತು ಪು.ಸಂ.೬೮

೧೫) ಕನ್ನಡ ವ್ಯಾಕರಣ ದರ್ಪಣ, ಕನ್ನಡ ಸಾಹಿತ್ಯ ಪರಿಷತ್ತು ಪು.ಸಂ.೬೮

# ಅಧ್ಯಾಯ-೬

# ಉಪಸಂಹಾರ

೬.೧. ಅಧ್ಯಯನದ ಮುಂಚಲನೆಗಳು

೬.೨. ಫಲಿತಗಳು

೬.೩. ಅಧ್ಯಯನದ ಹೊಸ ಸಾಧ್ಯತೆಗಳು

# ಅಧ್ಯಾಯ–೬

# ಉಪಸಂಹಾರ

ಮಾನವ ಉಳಿದೆಲ್ಲಾ ಜೀವರಾಶಿಗಳಿಗಿಂತಲೂ ಭಿನ್ನ ಎನ್ನುವುದಕ್ಕೆ ಮೂಲತಃ ಅವನಲ್ಲಿರುವ ವಿಚಾರವಂತಿಕೆ, ಸಾಂಸ್ಕೃತಿಕ ಐತಿಹಾಸಿಕತೆಯೇ ಸಾಕ್ಷಿಯಾಗಿದೆ. ವೈವಿಧ್ಯಮಯವಾದ ಸಾಂಸ್ಕೃತಿಕ ಚಹರೆಯನ್ನು ಹಲವು ಸಮುದಾಯಗಳು ಇಂದಿಗೂ ಕೆಲವು ಆಚರಣೆ ಸಂಪ್ರದಾಯ, ನಂಬಿಕೆ, ನಿಷೇಧ, ನಿರೂಪಣೆಗಳನ್ನು ಅನುಸರಿಸುತ್ತಲೇ ಬಂದಿವೆ. ಈ ಎಲ್ಲ ಅಂಶಗಳು ಆಯಾ ಸಮುದಾಯದ ಮಹತ್ವವನ್ನು ಬಿತ್ತರಿಸುತ್ತವೆ. ಸಮುದಾಯಗಳಲ್ಲಿ ಶ್ರೇಣೀಕರಣದ ವ್ಯವಸ್ಥೆಯ ಜೊತೆಗೆ, ಲಿಂಗ ಅಸಮಾನತೆಯು ಎದ್ದು ಕಾಣುತ್ತದೆ.

ಸಮಾಜದಲ್ಲಿ ಹಲವಾರು ಸಂಸ್ಕೃತಿ, ಸಂಪ್ರದಾಯ, ಆಚರಣೆಗಳು ರೂಢಿಯಲ್ಲಿವೆ. ಇವುಗಳು ಧಾರ್ಮಿಕ ಕ್ರಿಯಾಚರಣೆಯ ಪಾಲ್ಗೊಳ್ಳುವಿಕೆಯಲ್ಲಿ ಕುಟುಂಬ ವ್ಯವಸ್ಥೆಯಲ್ಲಿ ಆರ್ಥಿಕ ವ್ಯವಸ್ಥೆಯಲ್ಲಿ ರಾಜಕೀಯ ಪಾಲ್ಗೊಳ್ಳುವಿಕೆಯಲ್ಲಿ ಪಾತ್ರ ಹಂಚಿಕೆಯು ಭಿನ್ನವಾಗಿದೆ. ಇದಕ್ಕೆ ಪುರುಷ ಪ್ರಧಾನ ಸಮಾಜದ ನಿಷೇಧಗಳು, ನಿರ್ಬಂಧಗಳು ಕಾರಣವಾಗಿವೆ. ಈ ನಿಷೇಧಗಳಲ್ಲಿ ಲಿಂಗ ರಾಜಕಾರಣವಿದೆ. ಅಂದರೆ ಪುರುಷ ಪ್ರಧಾನತೆಯೇ ಲಿಂಗ ತಾರತಮ್ಯಕ್ಕೆ ಕಾರಣವಾಗುತ್ತದೆ. ಗಂಡು ಮೇಲು, ಹೆಣ್ಣು ಕೀಳು ಎನ್ನುವ ಮನೋಭಾವನೆ ಬೆಳೆದು ಹೆಣ್ಣನ್ನು ಹಲವು ಸಂದರ್ಭಗಳಲ್ಲಿ ಕೀಳಾಗಿ ಕಾಣುವ ಪ್ರಸಂಗಗಳು ಇವೆ.

ಈ ಮೇಲಿನ ಅಂಶಗಳನ್ನಾಧರಿಸಿದಂತೆ ಪ್ರಸ್ತುತ ಅಧ್ಯಯನವು "ಕನ್ನಡ ನುಡಿ ಬಳಕೆಯಲ್ಲಿ ಮಹಿಳೆ" ಎಂಬ ವಿಷಯವು ಹಲವಾರು ಉದ್ದೇಶಗಳನ್ನು ಮುಂದಿಟ್ಟುಕೊಂಡು ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಮೂಲತಃ ಭಾಷೆಯು ಸಂರಚಿತ ರೂಪ ಗಂಡು/ಹೆಣ್ಣು ಎಂಬ ತಾರತಮ್ಯದಿಂದ ರಚಿತವಾದದ್ದಲ್ಲ. ಆ ಸಮುದಾಯದ ಅಧಿಕಾರ ರೂಢವರ್ಗದ ಸುಪ್ತ ಚೇತನಗಳು ಸಂಜ್ಞೆಗಳಾಗಿ ಭಾಷೆಯಲ್ಲಿ

ಅಂತಸ್ಥಗೊಂಡು ಈ ರೀತಿಯ ವಿಭಜಿತ ನೆಲೆಗೆ ಬಂದು ನಿಂತಿವೆ. ಭಾಷೆಯಲ್ಲಿ 'ಗಂಡು ಭಾಷೆ', 'ಹೆಣ್ಣು ಭಾಷೆ' ಎಂಬ ಎರಡು ವಿಧಗಳಲ್ಲಿ ಎರಡು ಭಿನ್ನ ದೃಷ್ಟಿಕೋನಗಳಿವೆ ಅಷ್ಟೆ. ಈ ಭಿನ್ನ ದೃಷ್ಟಿಕೋನಗಳು ಇಬ್ಬರಲ್ಲೂ ಇರುವಂತಹವುಗಳು ಹಾಗೂ ಇಬ್ಬರಿಗೂ ಅನ್ವಯವಾಗುವಂಥವುಗಳು. ಆದರೆ ಪುರುಷ ಪ್ರಧಾನ ತಾತ್ವಿಕತೆ ಅವುಗಳನ್ನು ತನ್ನ ಹಿತಾಸಕ್ತಿಗೆ ಅನುಗುಣವಾಗಿ ಹೆಣೆದುಕೊಂಡಿರುವಂತಹ ಕ್ರಮವನ್ನು ಈ ಅಧ್ಯಯನದಿಂದ ಕಂಡುಕೊಳ್ಳಲು ಸಾಧ್ಯವಾಯಿತು.

ಮಹಿಳೆಯ ಭಾಷೆ ಒಳಗೊಂಡಿರುವ ಈ ಪುರುಷ ಪ್ರಾಧಾನ್ಯತೆಗೆ ವಿರುದ್ಧವಾಗಿ ತನ್ನ ಅಸ್ತಿತ್ವವನ್ನು ಭಾಷೆಯಲ್ಲಿ ಸ್ಥಾಪಿಸಿಕೊಳ್ಳಲು, ಮಹಿಳೆಯರದೇ ಆದ ಹೊಸ ಭಾಷೆಯನ್ನು ಸೃಷ್ಟಿಸಿಕೊಳ್ಳಲು ಪ್ರಯತ್ನಿಸಿದರು ಕೂಡ ಇನ್ನೂ ಸಾಧ್ಯವಾಗಿಲ್ಲ, ಆಗುವುದು ಇಲ್ಲ. ಕಾರಣ ಇಷ್ಟೇ ಸಾಮಾಜಿಕ ಸಂರಚನೆಯೇ ಹಾಗೆ ರೂಪುಗೊಂಡಿರುವ ಕಾರಣಕ್ಕಾಗಿ ಅನೇಕ ಶತಮಾನಗಳಿಂದ ಸ್ಥಾಪಿತವಾದ ಪುರುಷ ಪ್ರಧಾನ ಭಾಷೆಯನ್ನು ಏಕಾಏಕಿ ಬುಡಮೇಲು ಮಾಡಿ, ಅದೇ ಸ್ಥಳದಲ್ಲಿ ಹೊಸ ಸಾಧ್ಯತೆಯ ಭಾಷೆಯನ್ನು ಸೃಷ್ಟಿಸಲು ಸಾಧ್ಯವಾಗುವುದಿಲ್ಲ. ಈ ಬಗೆಯ ಬೆಳವಣಿಗೆ ಮತ್ತೊಂದು ತೊಂದರೆಗೆ ಎಡೆಮಾಡಿಕೊಡುತ್ತದೆ. ಆದ್ದರಿಂದ ಸಮಾಜದಲ್ಲಿಯ ಪ್ರತಿಯೊಬ್ಬರನ್ನು ಒಳಗೊಳ್ಳುವ ಜಾತಿ, ಲಿಂಗ, ಶ್ರೇಣಿ, ವರ್ಗಾತೀತವಾದ ಭಾಷೆಯನ್ನು ರೂಢಿಸಿಕೊಳ್ಳುವಂತಹ ಅಧ್ಯಯನ ಮಹತ್ವದ ವಿಚಾರಗಳನ್ನು ಮಂಡಿಸುತ್ತದೆ.

ಭಾಷೆ ಒಳಗೊಂಡಿರುವ ಸ್ತ್ರೀತ್ವ ಹಾಗೂ ಪುರುಷತ್ವದ ಸಾಂಸ್ಕೃತಿಕ ಬಂಧನಗಳ ಮಿತಿಗಳನ್ನು ಸೃಜನಶೀಲ ನೆಲೆಯಲ್ಲಿ ಮೀರುವಿಕೆ ಹಾಗೂ ಮಾನವರ ಸಮಗ್ರತೆಯ ಗ್ರಹಿಕೆಯನ್ನು ಬಿಟ್ಟು ಆಲೋಚಿಸುವವರೆಗೆ ಈ ಲಿಂಗಾತೀತವಾದ ಕಲ್ಪನೆ ಭಾಷೆಯನ್ನು ಒಳಗೊಂಡಂತೆ ಯಾವುದೇ ವಿಷಯದಲ್ಲೂ ಜಾರಿಗೆ ಬರುವುದಿಲ್ಲ. ಅದರಲ್ಲೂ ಕನ್ನಡ ಭಾಷೆಯ ಸಂದರ್ಭದಲ್ಲಿಯಂತೂ ಲಿಂಗಾತೀತವಾದ ಭಾಷಿಕ ರಚನೆ ಇನ್ನೂ ಸಾಧ್ಯವಾಗಿಲ್ಲ.

ಕನ್ನಡ ಸಂದರ್ಭದಲ್ಲಿ ಮಹಿಳೆಯರ ಭಾಷಿಕ ಚಹರೆಗಳನ್ನು ಶೋಧಿಸುವುದರ ಮೂಲಕ ಭಾಷೆಯಲ್ಲಿ ಮಹಿಳೆಯರ ಸ್ಥಾನಮಾನಗಳು ಯಾವ ಬಗೆಯಲ್ಲಿವೆ ಎಂಬುದನ್ನು ತೆರೆದಿಡುವಂತಹ ಪ್ರಯತ್ನ ಇಲ್ಲಿ ಆಗಿದೆ. ಭಾಷೆ ಮತ್ತು ಸಮಾಜ ಸದಾ ಚಲನಶೀಲವಾದದ್ದು. ಹೀಗಾಗಿ ಚಲನೆ ಎನ್ನುವುದು ನಿರಂತರ ನಡೆಯುವ ಪ್ರಕ್ರಿಯೆ. ಈ ಪ್ರಕ್ರಿಯೆಯಲ್ಲಿ ಸಮಾಜದಲ್ಲಿ ಮಹಿಳೆಯರ ಭಾಷೆಯಲ್ಲಿ ಎಲ್ಲಿ ನಿಂತಿದ್ದಾರೆ ಎಂಬ ನೆಲೆಯನ್ನು ಮತ್ತು ಹೋಗಬೇಕಾದ ದಾರಿಯನ್ನು ಪರಿಭಾವಿಸುವ ಬಗೆ ಎರಡೂ ಸಮಾಜದ ಅಧ್ಯಯನದ ದೃಷ್ಟಿಯಿಂದ ಮುಖ್ಯವಾಗುತ್ತದೆ. ಒಂದೇ ಭಾಷಿಕರು ಭಿನ್ನತೆಯಿಂದ ತಟಸ್ಥ ಮನೋಭಾವವನ್ನು ಹೊಂದುವ ದೃಷ್ಟಿಯಿಂದ ಅಧ್ಯಯನ ಮುಖ್ಯವಾಗುತ್ತದೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನ ಮಹತ್ವವಾಗಿದೆ.

### ೬.೧. ಅಧ್ಯಯನದ ಮುಂಚಲನೆಗಳು

ಸಾರ್ವಜನಿಕ ಮತ್ತು ಖಾಸಗಿ ವಲಯಗಳಲ್ಲಿ ಹೆಣ್ಣಿನ ಸ್ಥಾನ ಇಂದು ಮೇಲೇರಿದೆ. ಹಿಂದೆ ಗಂಡಸರದ್ದೆಂದು ಭಾವಿಸಲಾದ ಭಾಷಿಕ ವಲಯಗಳಲ್ಲಿ ಇಂದು ಹೆಣ್ಣಿನ ಚಹರೆ ಕಾಣುತ್ತದೆ. ಕೌಟುಂಬಿಕವಾಗಿ ಹೆಣ್ಣಿನ ಪಾತ್ರದ ಬದಲಾವಣೆಯಲ್ಲಿ ಅವಿಭಕ್ತ ಕುಟುಂಬ ವಿಭಕ್ತ ಕುಟುಂಬಗಳಾಗಿ ವಿಘಟನೆಗೊಂಡದ್ದು ಗಮನಾರ್ಹ ಸಂಗತಿಯಾಗಿದೆ. ವಿಭಕ್ತ ಕುಟುಂಬಗಳಿಂದಾಗಿ ಹೆಣ್ಣು ಎದುರು ಬಂದು ಮಾತಾಡಲೇಬೇಕಾದ ಪರಿಸ್ಥಿತಿ ನಿರ್ಮಾಣವಾಗಿದೆ. ಇದು ಪರೋಕ್ಷವಾಗಿ ಹೆಣ್ಣು ಮುಂಬರಲು ಕಾರಣವಾಗಿದೆ. ಇದರಿಂದ ಮಹಿಳೆಯರು ಅನಿವಾರ್ಯವಾಗಿಯಾದರೂ ಭಾಷಿಕವಾಗಿ ಹಲವಾರು ವಲಯಗಳಲ್ಲಿ ತೊಡಗಿಕೊಳ್ಳಲು ಕಾರಣಗಳಾಗಿವೆ. ಆಧುನಿಕ ಸಂದರ್ಭಗಳು ಮತ್ತು ಶಿಕ್ಷಣದಿಂದಾಗಿ ಹೆಣ್ಣಿಗೆ ಸಮಾನ ಅವಕಾಶಗಳು ಲಭ್ಯವಾಗಿರುವುದರಿಂದ ಸಾಂಪ್ರದಾಯಿಕವಾದ ಭಾಷಿಕ ವಲಯದ ಗಡಿಗಳು ಅಳಿಸಿಹೋಗಿವೆ. ಹಿಂದೆ ಹೆಣ್ಣು ಮಕ್ಕಳಿಗೆ ನಿಷೇಧವಾಗಿದ್ದ ಅನೇಕ ಸಂಗತಿಗಳು ಇಂದು ಕಾಣುವುದಿಲ್ಲ. ಹೆಂಗಸರು ಇಂದು ಸಾರ್ವಜನಿಕ ವಲಯಗಳಲ್ಲಿ ಗಂಡನ ಹೆಸರು ಹೇಳಲು ಆರಂಭಿಸಿದ್ದಾರೆ. ವ್ಯವಹಾರಿಕವಾಗಿ ಮಹಿಳೆಯರು ತೊಡಗಿಸಿಕೊಳ್ಳುವಂತೆ ಆಗಿದ್ದರಿಂದ ಮಹಿಳೆಯರು ವ್ಯವಹಾರದ ಭಾಷೆಯನ್ನು ಮಾತಾಡುವಂತೆ ಆಗಿದೆ. ಹಾಗೇನೆ ಕ್ರೀಡೆ, ರಾಜಕೀಯ ಹೀಗೆ ಎಲ್ಲ ವಲಯಗಳಲ್ಲಿ ಮಹಿಳೆಯರು ತೊಡಗಿಕೊಂಡು ಅಲ್ಲಿಯ ಭಾಷೆಯನ್ನು ಮಾತಾಡುವ ಹಲವು ಬದಲಾವಣೆಗಳಾಗಿವೆ.

ಅಧ್ಯಯನದ ಸಂದರ್ಭದಲ್ಲಿ ಹಲವು ತೊಡಕುಗಳು ಎದುರಾಗಿವೆ ಎಂದರೆ ಕನ್ನಡದಲ್ಲಿ ಈ ಬಗೆಯ ಅಧ್ಯಯನಗಳ ಕೊರತೆ. ಹೀಗಾಗಿ ಅಲ್ಲಿನ ಸಿದ್ಧಾಂತ ಮತ್ತು ಇಲ್ಲಿನ ವಾಸ್ತವಗಳ ನಡುವೆ ದಾರಿ ಕಂಡುಕೊಂಡು ಹೋಗಬೇಕಾದ ಸವಾಲು ಎದುರಾಗಿತ್ತು. ಪಾಶ್ಚಾತ್ಯ ಸಮಾಜದಲ್ಲಿ ನಡೆದ ಈ ಬಗೆಯ ಅಧ್ಯಯನಗಳು ಒಂದು ನೆಲೆಯಲ್ಲಿ ನಡೆದಂಥವು. ಅಂದರೆ ನಮ್ಮ ಸಮಾಜದಲ್ಲಿ ಜಾತಿ, ಧರ್ಮ, ನಿರ್ಧಾರವಾಗಿದೆ.

ಹೀಗಾಗಿ ಇಲ್ಲಿನ ವಾಸ್ತವವನ್ನು ಗ್ರಹಿಸಬೇಕಾದ ರೀತಿ ಬೇರೆ. ಹೀಗಾಗಿ ತಾತ್ವಿಕ ಚೌಕಟ್ಟು ರೂಪಿಸಿಕೊಳ್ಳುವುದು ಸವಾಲಿನ ಕೆಲಸವಾಗಿತ್ತು. ಈ ನೆಲೆಯಲ್ಲಿ ಮೊದಲು ಕ್ಷೇತ್ರಕಾರ್ಯ ನಡೆಸಿ ಆ ಸಮುದಾಯದ ಭಾಷಿಕ ನಡವಳಿಕೆಗಳು ವರ್ತನೆ, ಅಲ್ಲಿನ ಸಮುದಾಯ ರಚಿತಗೊಂಡಿರುವ ಪರಿ ಇವನ್ನು ಗಮನಿಸಿ, ನಂತರ ಓದು ಮತ್ತು ವಿದ್ವಾಂಸರೊಂದಿಗಿನ ಚರ್ಚೆಯಿಂದ ದಾರಿಯನ್ನು ಕಂಡುಕೊಳ್ಳಲಾಯಿತು. ಆದರೂ ಮಹಿಳೆ ಭಾಷೆ ಮತ್ತು ಸಮಾಜ ಇವೆರಡರ ವ್ಯಾಪ್ತಿಯೂ ಬಹುದೊಡ್ಡದು, ಇವುಗಳ ನಂಟೂ ಹಲವು ಮುಖವುಳ್ಳದ್ದು. ಇಲ್ಲಿ ಚರ್ಚಿತವಾದ ಪ್ರತಿಯೊಂದು

ಅಂಶದ ಕುರಿತು ಇನ್ನಷ್ಟು ವಿಸ್ತೃತ ಅಧ್ಯಯನವನ್ನು ಮುಂದಿನ ದಿನಗಳಲ್ಲಿ ನಡೆಸಬಹುದಾದ ಸಾಧ್ಯತೆ ಇದೆ.

**೬.೨. ಫಲಿತಗಳು**

೧. ನಮ್ಮ ಸಾಮಾಜಿಕ ಸಂದರ್ಭದಲ್ಲಿ ಮಹಿಳೆ–ಭಾಷೆ ಕುರಿತು ಇರುವ ನಿರೂಪಣೆಗಳು ನಮ್ಮ ಗ್ರಹಿಕೆಗೆ ತಕ್ಕಂತೆ ನಂಬಿಕೆಗಳು ಬಳಕೆಯಲ್ಲಿವೆ ಎಂಬುದು ಅಧ್ಯಯನದಿಂದ ತಿಳಿದುಬರುತ್ತದೆ.

೨. ಮಹಿಳಾ ಭಾಷೆ ಎಂದರೆ ಮಹಿಳೆಯದ್ದೇ ಭಾಷೆಯಲ್ಲ. ಅದು ಪುರುಷ ನಿರ್ಮಿತ ಭಾಷೆ ಎಂಬುದು ಅಧ್ಯಯನದ ಮಹತ್ವದ ಸಂಗತಿಯಾಗಿದೆ.

೩. ಪುರುಷ ಕೇಂದ್ರಿತವಾದ ಆಲೋಚನೆಗಳು ಸ್ತ್ರೀಕೇಂದ್ರಿತವಾದ ಆಲೋಚನೆಗಳೆಂದು ಮಂಡಿತವಾಗುತ್ತಿವೆ. ಇವುಗಳ ಅಂತರವನ್ನು ಅಧ್ಯಯನದಲ್ಲಿ ಸೂಕ್ಷ್ಮವಾಗಿ ಕಂಡುಕೊಳ್ಳಲಾಗಿದೆ.

೪. ನಮ್ಮ ಸಾಮಾಜಿಕ ಸಂದರ್ಭದಲ್ಲಿ ಲಿಂಗಾಧಾರಿತ ಮಾದರಿಯಲ್ಲೇ ಭಾಷಾ ಬಳಕೆಯಿದೆ. ಅಂದರೆ ಗಂಡಿಗೆ ಹೆಣ್ಣು ಅಧೀನಳಾಗಿರಬೇಕು ಎಂಬಂತೆ ಭಾಷಾ ಬಳಕೆಯಲ್ಲಿ ಕಾಣಿಸುತ್ತದೆ.

೫. ಮಹಿಳಾ ಭಾಷೆ ಸಮಾಜದ ಅಪೇಕ್ಷೇಗೆ ಇದೆಯೇ ಹೊರತು, ಮಹಿಳೆಯ ಅಪೇಕ್ಷೆಗೆ ಇಲ್ಲ ಎಂಬುದು ಅಧ್ಯಯನದಿಂದ ತಿಳಿದುಬರುತ್ತದೆ.

೬. ನಮ್ಮ ಸಾಮಾಜಿಕ ಸಂರಚನೆಯಲ್ಲಿ ಸಂಬೋಧನೆ, ಗಾದೆ, ಒಗಟು, ನುಡಿಗಟ್ಟು ಮುಂತಾದವುಗಳು ಮಹಿಳೆಯ ಜಾತಿ, ವರ್ಗ, ಶ್ರೇಣಿ, ಅಂತಸ್ತುಗಳಿಗೆ ಅನುಗುಣವಾಗಿ ಬಳಕೆಯಲ್ಲಿದೆ.

೭. ಹೆಣ್ಣಿನ ಭಾಷಾ ಬಳಕೆಯಲ್ಲಿ ಭಿನ್ನತೆಯನ್ನು ತಾರತಮ್ಯ ಎಂದು ವಿಶ್ಲೇಷಣೆ ಮಾಡಲಾಗಿದೆಯೇ ಹೊರತು, ಭಿನ್ನತೆ ಮತ್ತು ತಾರತಮ್ಯತೆಗೆ ವ್ಯತ್ಯಾಸವಿದೆ ಎಂಬುದನ್ನು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

೮. ಭಾಷೆಯಲ್ಲಿ ಹೆಣ್ಣಿನ ಪ್ರತಿನಿಧೀಕರಣ ಮಾಡುವಾಗ ಪುರುಷ ಕೇಂದ್ರಿತವಾದ ಪದಗಳನ್ನು ಸ್ತ್ರೀಕೇಂದ್ರಿತವಾಗಿ ಬದಲಾವಣೆ ಮಾಡಲಾಗುತ್ತಿದೆಯೇ ಹೊರತು, ಸ್ತ್ರೀಕೇಂದ್ರಿತವಾಗಿ ಹೊಸದಾಗಿ ಸೃಷ್ಟಿಸುತ್ತಿಲ್ಲ.

೯. ನಂಬಿಕೆ ಮತ್ತು ನಿಷೇಧಗಳನ್ನು ಪಾಲಿಸಲಿಕ್ಕೆ ಹಲವು ನಿರೂಪಣೆಗಳು ರಚನೆಗೊಂಡಿವೆ. ಇವು ಒಂದಕ್ಕೊಂದು ಪೂರಕ ಪೋಷಕಗಳಾಗಿ ಭಾಷೆಯಲ್ಲಿ ಕೆಲಸ ಮಾಡುತ್ತಿರುವುದು ಕಂಡುಬರುತ್ತದೆ.

೧೦. ಸಾಮಾಜಿಕ ಸಂರಚನೆಯ ಹಲವು ನಿಯಮಗಳು ಮಹಿಳೆಯರನ್ನು ಮಾತನಾಡದಂತೆ ನಿರ್ಬಂಧಿಸಿರುವ ತಡೆಗೋಡೆಗಳಾಗಿವೆ.

೧೧. ಮಹಿಳೆಗೆ ಸಮಾಜದಲ್ಲಿ ಮಾತನಾಡದಂತೆ ತಡೆಯುವಂತಹ ಹಲವು ಸಂಕಥನಗಳು ರಚನೆಗೊಂಡಿವೆ. ಅವುಗಳು ಸಮಾಜದ ರೂಢಿಯಲ್ಲಿ ಅಲಿಖಿತ ಕಾನೂನುಗಳಂತಿದ್ದು, ಪಾರಂಪರಿಕವಾಗಿ ಇಂದಿಗೂ ಮೌಖಿಕವಾಗಿಯೇ ಬಳಕೆಯಲ್ಲಿವೆ. ಇಂತಹ ವಿಚಾರಗಳ ಕುರಿತಾಗಿ ಅಧ್ಯಯನದಲ್ಲಿ ಚರ್ಚಿಸಲಾಗಿದೆ.

೧೨. ಮಹಿಳೆಯರ ಮಾತುಗಳಿಗೆ ಕೌಟುಂಬಿಕವಾಗಿ, ಸಾಮಾಜಿಕವಾಗಿ, ಧಾರ್ಮಿಕವಾಗಿ ಅನೇಕ ನಿಷೇಧಗಳು ನಿರ್ಬಂಧಗಳನ್ನು ಸಮಾಜದಲ್ಲಿ ಹೇರಲಾಗಿದೆ.

೧೩. ಸ್ತ್ರೀ ಮತ್ತು ಪುರುಷ ಎನ್ನುವುದು ಕೇವಲ ಜೈವಿಕ ಅನನ್ಯತೆಯನ್ನು ಗುರುತಿಸುವುದಲ್ಲದೆ, ಸಾಮಾಜಿಕವಾಗಿ ಅವರು ನಿರ್ವಹಿಸುವ ಪಾತ್ರದ ಆಧಾರದ ಮೇಲೆಯೇ ಲಿಂಗ ಎನ್ನುವುದನ್ನು ಗುರುತಿಸಲಾಗಿದೆ. ಅಂದರೆ ನಮ್ಮ ಸಾಮಾಜಿಕೀರಣ ವ್ಯವಸ್ಥೆಯಲ್ಲಿ ಸ್ತ್ರೀ ಪುರುಷ ನಿರ್ವಹಿಸಬೇಕಾದ ಕೆಲವು ಕೆಲಸಗಳಿಗೆ ಸೀಮಿತತೆ ಇದೆ. ಅದರಲ್ಲಿ ಲಿಂಗ ಅಸಮಾನತೆ ಎದ್ದು ಕಾಣುತ್ತದೆ. ಅದುವೇ ಇಂದಿನ ಲಿಂಗ ವ್ಯವಸ್ಥೆಯಾಗಿದೆ.

೧೪. ಸಾಮಾಜಿಕವಾಗಿ ಭಾಷೆಯನ್ನು ಗಮನಿಸಿದಾಗ ಅದರಲ್ಲಿ ಲಿಂಗ ಅಸಮಾನತೆ ಇದೆ ಎಂದೇ ಹೇಳಬೇಕು. ಏಕೆಂದರೆ ಭಾಷೆಯಲ್ಲಿ ಸ್ತ್ರೀಗೆ ವಿಧಿಸಿರುವಂತಹ ನಿಷೇಧ ನಿರ್ಬಂಧಗಳು ಪುರುಷನಿಗೆ ವಿಧಿಸಿಲ್ಲ. ಮಹಿಳೆಗೆ ಅಭಿವ್ಯಕ್ತಿ ಸ್ವತಂತ್ರ್ಯತೆಯೂ ಕಡಿಮೆ. ಜನನದಿಂದ ಮರಣದವರೆಗೆ ಸ್ತ್ರೀ ಒಂದಲ್ಲ ಒಂದು ವಿಧಿ ನಿಯಮದಲ್ಲಿ ಬದುಕಲೇಬೇಕಾಗಿದೆ. ಆದರೆ ಪುರುಷನಿಗೆ ವಿಧಿ ಬಂಧಗಳು ಇರುವುದಿಲ್ಲ.

೧೫. ಪ್ರತಿಯೊಂದು ಜಾತಿ ಸಮುದಾಯದಲ್ಲಿಯೂ ರೂಢಿ ಸಂಪ್ರದಾಯ ಆಚರಣೆ ನಂಬಿಕೆಗಳು ವಿಧಿ–ನಿಷೇಧಗಳು ಸರ್ವೇ ಸಾಮಾನ್ಯವಾಗಿರುತ್ತವೆ. ಕೆಲವು ಸಾಮ್ಯತೆ ಹೊಂದಿದ್ದರೆ, ಇನ್ನು ಕೆಲವು ವಿಭಿನ್ನವಾಗಿವೆ.

೧೬. ಜನಪದ ಗಾದೆ ಬೈಗುಳ, ಒಗಟು, ನುಡಿಗಟ್ಟು ಇತ್ಯಾದಿ ಸಂಕಥನಗಳ ನಿರೂಪಣೆಗಳನ್ನು ಗಮನಿಸಿದರೆ ಮಹಿಳೆಗೆ ಮಾತಿನ ಸ್ವಾತಂತ್ರ್ಯವು ನಿಷೇಧಾತ್ಮಕವಾಗಿಯೇ ಹೆಚ್ಚು ಬಳಕೆಯಲ್ಲಿವೆ ಎನಿಸುತ್ತದೆ.

೧೭. ಪ್ರಾದೇಶಿಕವಾಗಿ ಹೋಲಿಸಿದಾಗ ಭಾಷೆಯ ಮುಕ್ತತೆ ಮತ್ತು ಸ್ವತಂತ್ರತೆಯಲ್ಲಿ ಅನುಸರಣೆಯಲ್ಲಿ ವ್ಯತ್ಯಾಸವಿದೆ. ಆಯಾ ಕಾಲ, ಸಂದರ್ಭ, ಸ್ಥಳಕ್ಕನುಗುಣವಾಗಿ ನುಡಿಬಳಕೆಗೆ ಹಲವು ಸಡಿಲಿಕೆಗಳಿವೆ. ಶೈಕ್ಷಣಿಕವಾಗಿ ಪ್ರಗತಿ ಹೊಂದಿದ ಗ್ರಾಮೀಣ ಪ್ರದೇಶದ ಕೆಲವು ಕುಟುಂಬಗಳಲ್ಲಿ ಭಾಷೆ ಬಳಕೆ ಅಷ್ಟೊಂದು ನಿರ್ಬಂಧದಿಂದ ಕೂಡಿಲ್ಲ. ಜಾತಿಯಾಧಾರಿತವಾಗಿ ತಳಸಮುದಾಯದ ಶಿಕ್ಷಿತ ಮಹಿಳೆಗೂ ಮೇಲಿನ ಸಮುದಾಯದ ಅಶಿಕ್ಷಿತ ಮಹಿಳೆಗೂ ಭಾಷೆ ಬಳಕೆಯಲ್ಲಿ ಹಲವಾರು ವ್ಯತ್ಯಾಸಗಳಿವೆ. ಎಲ್ಲ ಕಡೆಗೂ ಒಂದೇ ಮಾದರಿ ಕಂಡುಬರುವುದಿಲ್ಲ.

ಒಟ್ಟಾರೆಯಾಗಿ ಸಮಾಜದಲ್ಲಿ ಪೂರ್ವಗ್ರಹಿತವಾಗಿರುವಂತಹ ಪುರುಷ ಪ್ರಧಾನ ಸಂರಚನೆಯ ಸಂಸ್ಕೃತಿಯನ್ನು ತೊಡೆದು ವೈಚಾರಿಕತೆಯ ಮನೋಭಾವ ಬೆಳೆಸಿಕೊಂಡಾಗ ಮಾತ್ರ ಲಿಂಗ ತಾರತಮ್ಯವನ್ನು ತೊಡೆದುಹಾಕಲು ಸಾಧ್ಯ. ಆಗಲೇ ಭಾಷೆಯಲ್ಲಿ ಲಿಂಗ ಸಮಾನತೆ ತರಲು ಸಾಧ್ಯ.

೧೮. ಕೌಟುಂಬಿಕ ವಲಯದಲ್ಲಿ ನಿರ್ಧಾರಗಳನ್ನು ತೆಗೆದುಕೊಳ್ಳುವ ಹಕ್ಕು ಮಹಿಳೆಗೆ ನಿಷೇಧವಾಗಿದೆ. ಮಹಿಳೆಯರ ಮಾತುಗಳಿಗೆ ಕೌಟುಂಬಿಕ ವಲಯದಲ್ಲಿ ಮೌಲ್ಯಗಳೇ ಇಲ್ಲ.

೧೯. ರಾಜಕೀಯವಾಗಿ ಮಹತ್ವದ ಹುದ್ದೆಯನ್ನು ಅಲಂಕರಿಸಿದ್ದರೂ ಮಹಿಳೆ ಮಾತಾಡದೆ ಇರುವಂತಹ ಪರಿಸ್ಥಿತಿ ಸಮಾಜದಲ್ಲಿ ಇನ್ನು ಜೀವಂತವಿದೆ. ಈ ಸ್ಥಿತಿಗೆ ಸಮಾಜದ ರೂಢಿ, ಸಂಪ್ರದಾಯ ಧೋರಣೆಗಳು ಕಾರಣವಾಗಿವೆ. ಅಂದರೆ ಮಹಿಳೆ ತಾನು ಸರಿಯಾಗಿ ಮಾತಾಡುವುದಿಲ್ಲ. ತಾನು ಮಾತನಾಡಿದರೆ ಸಭೆಯಲ್ಲಿರುವ ಗಂಡಸರು ನಗುತ್ತಾರೆ. ಇಂತಹ ಕೀಳರಿಮೆಯಿಂದಾಗಿ ಮಹಿಳೆ ಅಧಿಕಾರದಲ್ಲಿದ್ದರೂ, ತನ್ನ ಮಾತುಗಳಿಗೆ ಕಡಿವಾಣ ಹಾಕಿಕೊಳ್ಳುತ್ತಾಳೆ. ಪ್ರದೇಶ ಪರಿಸರ ವರ್ಗ ಮತ್ತು ಶಿಕ್ಷಣದ ಆಧಾರವಾಗಿ ಭಿನ್ನ ರೀತಿಯಲ್ಲಿ ಇರುವುದು ಕಂಡುಬರುತ್ತದೆ.

೨೦. ಹೆಚ್ಚು ಮಾತನಾಡುವ ಮಹಿಳೆಯರಿಗೆ ಹಲವು ಬಿರುದುಗಳಿಂದ ಅಪಮಾನ ಮಾಡುವುದರ ಮೂಲಕ ಇತರ ಮಹಿಳೆಯರು ಆ ಕಟ್ಟುಪಾಡುಗಳಿಗೆ ತಕ್ಕಂತೆ ನಡೆದುಕೊಳ್ಳುವಂತೆ ಸಮಾಜ ಎಚ್ಚರ ವಹಿಸುತ್ತದೆ.

೨೧. ಮಹಿಳೆಯರು ಕೆಲವು ವಿಚಾರಗಳನ್ನು ಬಹಿರಂಗವಾಗಿ ಮಾತನಾಡುವ ಹಾಗಿಲ್ಲ. ಒಂದು ವೇಳೆ ಹಾಗೆ ಮಾತನಾಡಿದಲ್ಲಿ ನಾಚಿಕೆ ಇಲ್ಲದವಳು ಎಂಬಂತಹ ರೀತಿಯಲ್ಲಿ ನಿಂದಿಸುತ್ತಾರೆ.

ಆ ವಿಚಾರಗಳನ್ನು ಗಂಡಸರು ಸರಾಗವಾಗಿ ಮಾತಾಡಬಹುದು, ಅದು ರಸಿಕತೆ ಎನಿಸಿಕೊಳ್ಳುತ್ತದೆ. ಮತ್ತು ಗಂಡಸರು ನಾಚಿಕೆ ಪಡಕೂಡದು. ಇದು ಸಮಾಜದ ನಿಯಮ.

೨೨. ಮಹಿಳೆಯರು ಶಿಳ್ಳು ಹಾಕಬಾರದು, ಜೋರಾಗಿ ನಗಬಾರದು, ಕಣ್ಣಿನ ಸನ್ನೆ ಮಾಡಕೂಡದು ಮತ್ತು ಅಶಾಬ್ದಿಕ ಸನ್ನೆಗಳನ್ನು ಮಾಡದಂತೆ ನಿಷೇಧಗಳನ್ನು ಹೇರಲಾಗಿದೆ.

**೬.೩. ಅಧ್ಯಯನದ ಹೊಸ ಸಾಧ್ಯತೆಗಳು**

ಮಹಿಳೆಯರ ಭಾಷೆ ಮತ್ತು ಸಮಾಜ ಬಹುಮುಖಿ ಆಯಾಮಗಳನ್ನು ಹೊಂದಿದ್ದು ಭಾಷೆ ಮತ್ತು ಸಮಾಜ ಕುರಿತು ಆಸಕ್ತಿ ಹೊಂದಿದವರಿಗೆ, ಹಲವು ನೆಲೆಯಿಂದ ಅಧ್ಯಯನ ನಡೆಸಬಹುದಾದ ಅವಕಾಶ ಇಲ್ಲಿದೆ.

ಮಹಿಳೆಯ ಭಾಷೆ ಕುರಿತಂತೆ ಪ್ರಾದೇಶಿಕವಾಗಿ ಸೂಕ್ಷ್ಮ ವ್ಯತ್ಯಾಸ ಗುರುತಿಸುವುದು ಸಾಧ್ಯವಿದೆ. ಪ್ರತಿ ಭೌಗೋಳಿಕ ಅಡೆತಡೆಗಳ ಕಾರಣದಿಂದ ಭಾಷೆಯಲ್ಲಿ ವ್ಯತ್ಯಾಸವಿದೆ. ಇವುಗಳನ್ನು ಲಿಂಗಾಧಾರಿತವಾಗಿ ಅಧ್ಯಯನ ನಡೆಸಲು ಅವಕಾಶವಿದೆ.

ಮಹಿಳೆ ಭಾಷೆಯ ಹಿನ್ನೆಲೆಯಿಂದ ಸಮಾಜದಲ್ಲಿನ ಗಾದೆಗಳ ಕುರಿತಂತೆ ನುಡಿಗಟ್ಟುಗಳ ಕುರಿತಂತೆ, ಸ್ಥಳನಾಮ, ಆಹಾರ ಪದ್ಧತಿ, ರೂಡಿ ಸಂಪ್ರದಾಯಕ್ಕೆ ಅನುಗುಣವಾಗಿ ಪೂರ್ಣಪ್ರಮಾಣದ ಅಧ್ಯಯನಗಳು ಇದುವರೆಗೆ ನಡೆದಿಲ್ಲ. ಇವುಗಳನ್ನು ಇರಿಸಿಕೊಂಡು ಗಂಭೀರ ಅಧ್ಯಯನ ನಡೆಸಬಹುದಾಗಿದೆ.

ಜನಪದ ಪಠ್ಯಗಳಲ್ಲಿ ಲಿಂಗ ಆಧಾರಿತ ಭಾಷಿಕ ವಿವರಗಳ ಕುರಿತು ಅಧ್ಯಯನ ಮಾಡಲು ಅವಕಾಶವಿದೆ.

ಸಾಹಿತ್ಯದ ಭಾಷೆ ಒಳಗಡೆ ಲಿಂಗ ಸಂಬಂಧಿ ಆಯಾಮಗಳನ್ನು ಗುರುತಿಸಬಹುದು, ಸಾಹಿತ್ಯ ಪಠ್ಯದೊಳಗಡೆ ನಡೆಯುತ್ತಿರುವಂತಹ ಭಾಷಿಕ ಬದಲಾವಣೆಗಳು ಲಿಂಗಾತೀತವಾಗಿ ಹೇಗೆ ರೂಪಗೊಂಡಿವೆ ಎಂಬುದನ್ನು ಕುರಿತಂತೆ ಅಧ್ಯಯನ ನಡೆಸಲು ಸಾಧ್ಯವಿದೆ.

ಹಾಗೇನೆ ಮಾಧ್ಯಮಗಳಲ್ಲಿನ ಲಿಂಗಾಧಾರಿತ ಭಾಷೆಯನ್ನು ಅಧ್ಯಯನ ಮಾಡಬಹುದಾದ ಹಲವು ಸಾಧ್ಯತೆಗಳಿವೆ.

ಆಡಳಿತದ ಭಾಷೆಯಲ್ಲಿ ಮಹಿಳೆಯರ ಒಳಗೊಳ್ಳುವಿಕೆ ಯಾವ ಬಗೆಯಲ್ಲಿದೆ ಎಂಬುದನ್ನು ಅಧ್ಯಯನ ಮಾಡಬಹುದಾಗಿದೆ.

ಪಠ್ಯಪುಸ್ತಕಗಳಲ್ಲಿ ಲಿಂಗಾಧಾರಿತವಾಗಿ ಭಾಷೆ ಹೇಗೆ ಬಳಕೆಗೊಳ್ಳುತ್ತಿದೆ ಎಂಬುದನ್ನು ಅಧ್ಯಯನಕ್ಕೆ ಒಳಪಡಿಸಬಹುದಾಗಿದೆ.

ನಿಘಂಟು ಮತ್ತು ಪದಕೋಶಗಳಲ್ಲಿ ಮಹಿಳೆಯರನ್ನು ವಿವರಿಸುತ್ತಿರುವಂತಹ ವಿಧಾನಗಳನ್ನು ಕುರಿತಂತೆ ಅಧ್ಯಯನ ಮಾಡಬಹುದಾಗಿದೆ.

# ಅನುಬಂಧಗಳು

1. ವಿದ್ವಾಂಸರ ಮಾಹಿತಿ
2. ಪ್ರಶ್ನಾವಳಿ
3. ವಕ್ತೃ ವಿವರ
4. ಪರಾಮರ್ಶನ ಗ್ರಂಥಗಳು

## ವಿದ್ವಾಂಸರ ಸಂದರ್ಶನ

1. ವೈಯಕಕ್ತಿಕ ಮಾಹಿತಿ

ಅ. ಹೆಸರು : ಡಾ. ಶೋಭಾದೇವಿ ಎಂ.ಜಿ.

ಆ. ವಿಳಾಸ : ನಿರ್ದೇಶಕರು, ಮಹಿಳಾ ಅಧ್ಯಯನ ಕೇಂದ್ರ ಕನ್ನಡ ವಿಶ್ವ ವಿದ್ಯಾಲಯ ಹಂಪಿ

ಇ. ಜಾತಿ : –

ಈ. ವೃತ್ತಿ : ನಿರ್ದೇಶಕರು

2. ಭಾಷೆಯಲ್ಲಿ ಗಂಡು/ಹೆಣ್ಣು ಎಂಬ ಎರಡು ವಿಧಗಳಿವೆಯೇ? ಅಥವಾ ದೃಷ್ಟಿಕೋನಗಳಿವೆಯೇ?

   ಭಾಷೆಯಲ್ಲಿ ಗಂಡು–ಹೆಣ್ಣು ವಿಧಗಳಿಲ್ಲ. ಆದರೆ ಭಾಷೆಯ ಬಳಕೆಯಲ್ಲಿ ವ್ಯತ್ಯಾಸವಿದೆ. ಇದನ್ನು ಗಂಡು–ಹೆಣ್ಣು ಎಂದು ನೊಡುವುದಕ್ಕಿಂತಲ್ಲೂ ವ್ಯಕ್ತಿ ಎಂದು ನೋಡಬೇಕಾಗಿದೆ. ಭಾಷೆಯ ಬಳಕೆ ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾಗಿರುತ್ತದೆ. ಆದರೆ ಭಾಷಾ ಬಳಕೆಯಲ್ಲಿ ಲಿಂಗತಾರತಮ್ಯ ಇದ್ದು, ನಮ್ಮ ಸಾಮಾಜೀಕರಣ ಪ್ರಕ್ರೀಯೆಯಿಂದ ಬಂದಿದೆ.

3. ಭಾಷೆಯನ್ನು ಗಂಡು ಭಾಷೆ ಮತ್ತು ಹೆಣ್ಣು ಭಾಷೆ ಎಂದು ವಿಭಾಗಿಸಿ ನೋಡುವ ಕ್ರಮ ಸೂಕ್ತವೆ?

   ಇಲ್ಲ.

4. ಭಾಷೆಯ ಸಂರಚಿತ ರೂಪವೇ ಗಂಡು/ಹೆಣ್ಣು ಎಂಬ ತಾರತಮ್ಯದಿಂದ ಕೂಡಿದೆಯೇ ಅಥವಾ ಸಮುದಾಯದ ಸೂಪ್ತ ಚೇತನಗಳ ಸಂಜ್ಞೆಗಳಾಗಿ ಭಾಷೆಯಲ್ಲಿ ಅಂತಸ್ಥಗೊಂಡು ವಿಭಜಿತ ನೆಲೆಗೆ ಬಂದು ನಿಂತಿವೆಯೇ?

   ಮೊದಲೇ ಹೇಳಿದಂತೆ ಭಾಷೆ ಪುರುಷಪ್ರಧಾನ ಸಮಾಜದಿಂದ ಹುಟ್ಟಿದೆ. ಹಾಗಾಗಿ ಪುರುಷ ಪರವಾಗಿದೆ. ಲಿಂಗತಾರತಮ್ಯದಿಂದ ಕೊಡಿದೆ.

5. ಭಾಷೆಯ ಶುದ್ಧತೆಯನ್ನು ಉಳಿಸಿಕೊಂಡು ಬರುವ ಗುಣ ಸ್ತ್ರೀಯರ ಭಾಷೆಯದು.

   ಇದು ಸರೀನಾ?

ಸರಿಯಲ್ಲ. ಭಾಷೆ ಕಾಲಕಾಲಕ್ಕೆ ಬದಲಾಗುತ್ತಲೇ ಇರುತ್ತದೆ. ಇದರಿಂದ ಭಾಷೆ ಉಳಿಯುತ್ತದೆ ಬೆಳೆಯುತ್ತದೆ. ಇದನ್ನು ಸ್ತ್ರೀಯರಿಗೆ ಮಾತ್ರ ಅನ್ವಯಿಸುವುದು ಸರಿಯಲ್ಲ.

6. ಮಹಿಳೆಯರದೇ ಹೊಸ ಭಾಷೆ ಸೃಷ್ಟಿಸಲು ಸಾಧ್ಯವಾಗಿದೆಯೇ?

   ಇಲ್ಲ. ಆದರೆ ಭಾಷೆಯ ಬಳಕೆಯಲ್ಲಿ ಲಿಂಗವಾಚಕಗಳನ್ನು ತೆಗೆಯುವ ಪ್ರಯತ್ನ ನಡೆದಿದೆ, ಬಹುವಚನ ಬಳಸಿದರೆ ಕೆಲವೊಮ್ಮೆ ಹುದ್ದೆಗಳನ್ನು ಹೆಸರಿಸುವಾಗ ಕನ್ನಡದಲ್ಲಿ ಸ್ತ್ರೀವಾಚಕ ಪ್ರತ್ಯಯ ಸೇರಿಸುವುದಿದೆ. ವಿದ್ಯಾರ್ಥಿ–ವಿದ್ಯಾರ್ಥಿನಿ, ನಿರ್ದೇಶಕ–ನಿರ್ದೇಶಕಿ ಇತ್ಯಾದಿ ಇವುಗಳಿಗೆ ಬಹುವಚನ ಪ್ರತ್ಯಯ ಸೇರಿದರೆ ಇಬ್ಬರಿಗೂ ಬಳಸಬಹುದು. ಪ್ರಯತ್ನ ನಡೆದಿದೆ ಆದರೆ ಇನ್ನೂ ಅದು ಸಾರ್ವತ್ರೀಕರಣಗೊಂಡಿಲ್ಲ.

7. ಮಹಿಳೆಯರದೇ ಪ್ರತ್ಯೇಕ ಭಾಷೆ ಸೃಷ್ಟಿಯಾದ ಮೇಲೆ ಅದು ಅಪ್ರಜ್ಞಾಪೂರ್ವಕವಾಗಿ ಇಡೀ ಸಮುದಾಯದ ಸಾಂಸ್ಕೃತಿಕ ಭಾಗವಾಗಿ ಬಳಕೆಯಾಗುವಷ್ಟು ಪ್ರಭಾವಯುತವಾಗಿದೆ? ಅಥವಾ ಕೇವಲ ಪ್ರಜ್ಞಾಪೂರ್ವಕ ನೆಲೆಯಲ್ಲಿ ಮಾತ್ರ ನಿಂತು ಬಿಟ್ಟಿದೆಯೇ?

   ಪ್ರಜ್ಞಾಪೂರ್ವಕ ನೆಲೆಯಲ್ಲಿಯೇ ನಿಂತಿದೆ ಹಿಂದಿನ ಪ್ರಶ್ನೆಯಲ್ಲಿ ಉತ್ತರಿಸಿದ್ದೇನೆ.

8. ಲಿಂಗಾತೀತವಾದ ಭಾಷೆಯನ್ನು ಸೃಷ್ಟಿಸಲು ಸಾಧ್ಯವಾಗಿದೆಯೇ?

   ಪ್ರಯತ್ನವಂತೂ ಸಾಗಿದೆ.

9. ಗಂಡು–ಹೆಣ್ಣಿನ ಅಲೋಚನೆ ಲೋಕಗ್ರಹಿಕೆ ಮತ್ತು ತಾತ್ವಿಕತೆ ಭಿನ್ನವೆ? ಹೌದಾದರೆ ಅದಕ್ಕೆ ಕಾರಣಗಳೇನು?

   ಸಾಮಾಜೀಕರಣ ಪ್ರಕ್ರೀಯೆ ಇದಕ್ಕೆ ಮೂಲಕಾರಣ, ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಗಂಡು ಮತ್ತು ಹೆಣ್ಣಿಗೆ ಚೌಕಟ್ಟುಗಳನ್ನು ನಿರ್ಮಿಸಿ ಅದರೊಳಗೆ ಇಬ್ಬರನ್ನೂ ಬೆಳೆಸುವುದರಿಂದ ಹೀಗಾಗಿದೆ. ಕೆಲವೊಮ್ಮೆ ಅಪರಾದಗಳು ಇವೆ.

10. ಸಾಮಾಜಿಕ ಸಂದರ್ಭದಲ್ಲಿ ಸ್ತ್ರೀವಾಚಕಗಳ ಬಳಕೆ ವೈಯಕ್ತಿಕ ನೆಲೆ ಹಾಗೂ ಸಮುದಾಯದ ನೆಲೆಗಳೆರಡರಲ್ಲಿಯು ಅಸ್ತಿತ್ವ ಪಡೆದಿವೆಯೇ? ಪಡೆಯುತ್ತಿವೆಯೇ/ಇಲ್ಲವೇ?

    ಇಲ್ಲ.

11. ಎಲ್ಲಾ ವಯೋಮಾನದ ಸ್ತ್ರೀ ಪುರುಷರಿಬ್ಬರಲ್ಲೂ ಸ್ತ್ರೀವಾಚಕಗಳು ಹಾಗೂ ಪುರುಷ ವಾಚಕಗಳನ್ನು ಪ್ರಜ್ಞಾಪೂರ್ವಕವಾಗಿ ಬಳಸುವ ಪರಿಪಾಠ ಶುರುವಾಗಿದೆಯೇ? ಅಥವಾ ಇಲ್ಲವೇ?

    ಈಗಾಗಲೇ ಹೇಳದಂತೆ ಶುರುವಾಗಿದೆ.

12. ಪುರುಷ ವಾಚಕಗಳ/ಸ್ತ್ರೀವಾಚಕಗಳು ಎಂದು ಗೆರೆ ಎಳೆದು ಬಳಸುವುದಕ್ಕಿಂತ ಹೊಸ ರೀತಿಯ ಪದಗಳನ್ನು ಸೃಷ್ಟಿಸಿ ಬಳಸುವ ಪರಿಪಾಠ ಇದೆಯೇ?

ಭಾಷೆಯಲ್ಲಿ ಬದಲಾವಣೆ ಸಹಜ. ಮಹಿಳಾವಾದದ ಹಿನ್ನೆಲೆಯಲ್ಲಿ ಹೊಸರೀತಿಯ ಪದಗಳು ಬಳಕೆಯಾಗುತ್ತಿದೆ. ಉದಾ:- Chair Person Human.

**2. ವೈಯಕ್ತಿಕ ಮಾಹಿತಿ**

ಅ. ಹೆಸರು : ಎಂ ಉಷಾ

ಆ. ವಿಳಾಸ : ಕನ್ನಡ ವಿಶ್ವವಿದ್ಯಾಲಯ ಹಂಪಿ

ಇ. ಜಾತಿ : ವೀರಶೈವ

ಈ. ವೃತ್ತಿ : ಅಧ್ಯಾಪನ

2. ಭಾಷೆಯಲ್ಲಿ ಗಂಡು/ಹೆಣ್ಣು ಎಂಬ ಎರಡು ವಿಧಗಳಿವೆಯೇ? ಅಥವಾ ಎರಡು ದೃಷ್ಟಿಕೋನಗಳಿವೆಯೇ?

ಅ) ಪಿತೃ ಪ್ರಧಾನ ಸಮಾಜವು ತನ್ನದೆ ವಿವರರಣೆಯೋಂದಿಗೆ 'ಗಂಡು ಭಾಷೆ' ಎಂಬುದನ್ನು ಬಳಸುತ್ತದೆ. ಉದಾ:- ಉತ್ತರ ಕರ್ನಾಟಕದ ನೆಲವನ್ನು ಗಂಡು ಮೆಟ್ಟಿನ ನಾಡು ಎಂದು ಅಲ್ಲಿನ ಕನ್ನಡವನ್ನು ಗಂಡು ಭಾಷೆ ಎಂದು ಅಲಂಕಾರಕವಾಗಿ ಬಳಸುವುದು. ಇವೆಲ್ಲ ಗಂಡು ಎಂಬ ವಿಶೇಷಣ 'ಒರಟು' ಕಠಿಣ ಕೃತಿಮತ್ತೆಗೆ ಹೊರತಾದ ಎಂಬ ಅರ್ಥಕಾಣುತ್ತದೆ. ಆದರೆ ಇದಕ್ಕೆ ಎದುರು ಪರಿಕಲ್ಪನೆಯಾಗಿ ಹೆಣ್ಣು ಬಾಷೆ ಎಂಬುದನ್ನು ಬಳಸಿದಂತೆ ಕಾಣುವುದಿಲ್ಲ.

ಆ) ಪಿತೃಪ್ರಧಾನ ಸಮಾಜವು ಆಂಗಿಕ ಭಾಷೆಯ ಸಂದರ್ಭದಲ್ಲಿ ಹೆಣ್ಣು-ಗಂಡು ಎಂಬ ವ್ಯಾತ್ಯಾಸವನ್ನು ಗುರುತಿಸುತ್ತದೆ. ಅಥವಾ ಪ್ರತಿಪಾದಿಸುತ್ತದೆ.

ಇ) ಭಾಷೆ ಸಾಮಾಜಿಕವಾದುದ್ದರಿಂದ ಸಮಾಜ ಪಿತೃಪ್ರಧಾನವಾದುದರಿಂದ ವಿಧಗಳ ಬಗೆಗೆ ಅಥವಾ ದೃಷ್ಟಿಕೋನಗಳ ಬಗೆಗೆ ತೀರ್ಮಾನವನ್ನು ಬರುವುದು ಕಷ್ಟಸಾಧ್ಯ.

3. ಭಾಷೆಯನ್ನು ಗಂಡುಬಾಷೆ ಮತ್ತು ಹೆಣ್ಣು ಭಾಷೆ ಎಂದು ವಿಭಾಗಿಸಿ ನೋಡುವ ಕ್ರಮ ಸೂಕ್ತವೆ?

ಸ್ತ್ರೀವಾದಿ ಚಿಂತನೆಯಲ್ಲಿ ಈ ಬಗ್ಗೆ ದ್ವಂದ್ವತೆ ಇದೆ. ಅದು ಒಂದೆಡೆ ಪಿತೃಪ್ರಧಾನ ಸಮಾಜದ ಗಂಡು–ಹೆಣ್ಣು ಎಂಬ ವಿಭಜನೆಯನ್ನು ಪ್ರಶ್ನಿಸುತ್ತದೆ. ಇನ್ನೊಂದೆಡೆ 'ಹೆಣ್ಣು ಭಾಷೆ'ಯ ಅಸ್ತಿತ್ವಕ್ಕಾಗಿ ತಡಕಾಡುತ್ತದೆ.

4. ಭಾಷೆಯ ಸಂರಚಿತ ರೂಪವೇ ಗಂಡು/ಹೆಣ್ಣು ಎಂಬ ತಾರತಮ್ಯದಿಂದ ಕೂಡಿದೆಯೇ ಅಥವಾ ಸಮುದಾಯದ ಸುಪ್ತ ಚೇತನಗಳ ಸಂಜ್ಞೆಗಳಾಗಿ ಭಾಷೆಯಲ್ಲಿ ಅಂತಸ್ಥಗೊಂಡು ವಿಭಜಿತ ನೆಲೆಗೆ ಬಂದು ನಿಂತಿವೆಯೇ?

   ಭಾಷೆಯನ್ನು ವಿಶ್ಲೇಷಿಸುವ ಸಂದರ್ಭದಲ್ಲಿ ಸಮಾಜದಲ್ಲಿ ಲಿಂಗತ್ವವಲ್ಲದೇ, ಪ್ರಾದೇಶಿಕ ಸಮುದಾಯಿಕ ಇತ್ಯಾದಿ ಹಲವು ಮಾನದಂಡಗಳು ಅಸ್ತಿತ್ವದಲ್ಲಿವೆ. ಇದರೊಂದಿಗೆ ವ್ಯಕ್ತಿ, ವೈಶಿಷ್ಟ್ಯ, ವ್ಯುತ್ಪತ್ತಿ, ರಾಜಕೀಯ, ನಿಲುವು ಹೀಗೆ ಹಲವು ವೈಯಕ್ತಿಕ ಸಾಲುಗಳು ಇವೆ. ಹಾಗಾಗಿ ಇವುಗಳಲ್ಲಿ ಒಳಗೊಂಡಂತೆ ಲಿಂಗತ್ವದ ನೆಲೆಯೇ ಸಂರಚನೆಯ ಒಳಗಾಗಲಿ, ಸುಪ್ತ ಚೇತನಗಳ ಸಂಜ್ಞೆಗಳ ಬಗೆಗಾಗಲಿ ಅಭಿಪ್ರಾಯ ಮಂಡಿಸಲು ನನ್ನ ಬಳಿ ಯಾವುದೇ, ದತ್ತಕೋಶವಾಗಿ ಅಧ್ಯಯನದ ಫಲಿತಗಳಾಗಲಿ ಇಲ್ಲ.

5. ಭಾಷೆಯ ಶುದ್ಧತೆಯನ್ನು ಉಳಿಸಿಕೊಂಡು ಬರುವ ಗುಣ ಸ್ತ್ರೀಯರ ಭಾಷೆಯದು. ಇದು ಸರೀನಾ?

   ಪಿತೃಪ್ರಧಾನ ವ್ಯವಸ್ಥೆಯಲ್ಲಿ ಸ್ತ್ರೀ ಇನ್ನೊಂದು ಮನೆಗೆ ಹೋಗಿ ಅಲ್ಲಿನ ಸಂಸ್ಕೃತಿಯನ್ನು ಉಳಿಸಿ ಬೆಳಸುವ ಹೊಣೆಗಾರಿಕೆ ಹೊತ್ತವಳಾದ್ದರಿಂದ ಅವಳು ತಾನು ಹುಟ್ಟನಿಂದ ಕಲಿತ ಭಾಷೆಯನ್ನು ಕಳೆದುಕೊಳ್ಳಬೇಕಾದ ಅನಿವಾರ್ಯ ಇರುತ್ತದೆ. ಇನ್ನು 'ಉಳಿಸಿಕೊಳ್ಳುವ' ಬಗೆ ಹೇಗೆ?

6. ಮಹಿಳೆಯರದೇ ಹೊಸ ಭಾಷೆ ಸೃಷ್ಟಿಸಲು ಸಾಧ್ಯವಾಗಿದೆಯೇ?

   ಇಲ್ಲ.

7. ಮಹಿಳೆಯರದೇ ಪ್ರತ್ಯೇಕ ಭಾಷೆ ಸೃಷ್ಟಿಯಾದ ಮೇಲೆ ಅದು ಅಪ್ರಜ್ಞಾಪೂರ್ವಕವಾಗಿ ಆ ಇಡೀ ಸಮುದಾಯದ ಸಾಂಸ್ಕೃತಿಕ ಭಾಗವಾಗಿ ಬಳಕೆಯಾಗುವಷ್ಟು ಪ್ರಬಾವಯುತವಾಗಿದೆ? ಅಥವಾ ಕೇವಲ ಪ್ರಜ್ಞಾಪೂರ್ವಕ ನೆಲೆಯಲ್ಲಿ ಮಾತ್ರ ನಿಂತು ಬಿಟ್ಟಿದೆಯೇ?

   ಭಾಷೆಯನ್ನು ಸೃಷ್ಟಿ ಮಾಡಿದ ಮೇಲೆ ತಾನೇ ಈ ಪ್ರಶ್ನೆ.

8. ಲಿಂಗಾತೀತವಾದ ಭಾಷೆಯನ್ನು ಸೃಷ್ಟಿಸಲು ಸಾಧ್ಯವಾಗಿದೆಯೇ?

ಸೃಷ್ಟಿ ಪದದ ಬದಲು ಬಳಕೆ ಹೆಚ್ಚು ಸೂಕ್ತ. ಭಾಷೆಯನ್ನು 'ಜೆಂಡರನೊಬ್ಬಾತ' ಮಾಡಿ ಬಳಸುವ ಬಗ್ಗೆ ಕೆಲವು ಸೂಚನೆಗಳನ್ನು ಸ್ತ್ರೀವಾದಿಗಳು ನೀಡುತ್ತಾರೆ. ಪ್ರಶ್ನೆ ಇರುವುದು ಜೆಂಡರನ್ನು ಸೂಚಿಸಬೇಕಾದ ಅಗತ್ಯವಿದ್ದಾಗ ಏನು ಮಾಡುವುದು? ಎನ್ನುವುದು. ಭಾರತದ ಜನಸಂಖ್ಯೆ 125ಕೋಟಿಗೆ ಮಿಕ್ಕಿದೆ ಎಂಬುದಷ್ಟೆ ಸಾಕೆ? ಅದರಲ್ಲಿ ಹೆಣ್ಣು-ಗಂಡಿನ ಪ್ರಮಾಣ ಎಷ್ಟು ಎನ್ನುವುದು ಬೇಡವೇ? ಅಂದರೆ ಭಾಷೆಗೆ ಲಿಂಗ/ ಲಿಂಗತ್ವ ಬೇಕು. ಲಿಂಗತ್ವ ತಾರತಮ್ಯ ಬೇಡ.

9. ಗಂಡು-ಹೆಣ್ಣಿನ ಅಲೋಚನೆ ಲೋಕಗ್ರಹಿಕೆ ಮತ್ತು ತಾತ್ವಿಕತೆ ಭಿನ್ನವೇ? ಹೌದಾದರೆ ಅದಕ್ಕೆ ಕಾರಣಗಳೇನು?

ವ್ಯಕ್ತಿಯ ಅಲೋಚನೆಯನ್ನು ಪ್ರಭಾವಿಸುವ ಇನ್ನು ಹಲವು ಸಂಗತಿಗಳಿದ್ದು, ಅವು ಗಂಡು-ಹೆಣ್ಣು ಎಂಬ ಏಕಾಕಾರದ ಗ್ರಹಿಕೆಗಳನ್ನು ಒಡೆಯುತ್ತದೆ. ಅರ್ಥಾತ ಹೆಚ್ಚಿನ ಲೋಕಗ್ರಹಿಕೆ ಇದ್ದಿರಬಹುದಾದರೂ ಅದು ಹೆಣ್ಣು ಲೋಕ ಗ್ರಹಿಕೆಗಳು ಆಗಿರುತ್ತದೆ.

10. ಸಾಮಾಜಿಕ ಸಂದರ್ಭದಲ್ಲಿ ಸ್ತ್ರೀವಾಚಕಗಳ ಬಳಕೆ ವೈಯಕ್ತಿಕ ನೆಲೆ ಹಾಗೂ ಸಮುದಾಯದ ನೆಲೆಗಳೆರಡರಲ್ಲಿಯೂ ಅಸ್ತಿತ್ವ ಪಡೆದಿವೆಯೇ? ಪಡೆಯುತ್ತಿವೆಯೇ/ಇಲ್ಲವೇ?

–

11. ಎಲ್ಲಾ ವಯೋಮಾನದ ಸ್ತ್ರೀ ಪುರುಷರಿಬ್ಬರಲ್ಲೂ ಸ್ತ್ರೀವಾಚಕಗಳು ಹಾಗೂ ಪುರುಷ ವಾಚಕಗಳನ್ನು ಪ್ರಜ್ಞಾಪೂರ್ವಕವಾಗಿ ಬಳಸುವ ಪರಿಪಾಠ ಶುರುವಾಗಿದೆಯೇ? ಅಥವಾ ಇಲ್ಲವೇ?

–

12. ಪುರುಷ ವಾಚಕಗಳು/ಸ್ತ್ರೀವಾಚಕಗಳು ಎಂದು ಗೆರೆ ಎಳೆದು ಬಳಸುವುದಕ್ಕಿಂತ ಹೊಸ ರೀತಿಯ ಪದಗಳನ್ನು ಸೃಷ್ಟಿಸಿ ಬಳಸುವ ಪರಿಪಾಠ ಇದೆಯೇ?

–

13. ಸ್ತ್ರೀವಾಚಕ ಪದಗಳ ಬಳಕೆಯ ಮಾತಂತಿರಲಿ ಅದರ ಗ್ರಹಿಕೆಯಾದರೂ ಆ ಸಮುದಾಯದ ಜನರೆಲ್ಲರಲ್ಲಿಯು ಮೂಡಿದೆಯೇ?

–

ಭಾಷಾಧ್ಯಯನದ ಬಗ್ಗೆ ನಾನು ಕೆಲಸ ಮಾಡಿಲ್ಲ. ಕನ್ನಡದ ಸಂದರ್ಭದಲ್ಲಿ ಭಾಷೆಯ ಲಿಂಗತ್ವ ಅಧ್ಯಯನಗಳು ಇನ್ನು ನಡೆದಿಲ್ಲವಾದ್ದರಿಂದ ನೀವು ಕೇಳಿರುವ ವಸ್ತುಸ್ಥಿತಿ ಆಧಾರಿತ ಪ್ರಶ್ನೆಗಳಿಗೆ ಉತ್ತರಿಸಲು ನನಗೆ ಸಾಧ್ಯವಿಲ್ಲ. ಹಾಗಾಗಿ ಈ ಪ್ರಶ್ನಾವಳಿ ತಾತ್ವಿಕ ಪ್ರಶ್ನೆಗಳಿಗೆ ಮಾತ್ರ ನನ್ನ ಅಭಿಪ್ರಾಯ ನೀಡುತ್ತೇನೆ.

3. **ವೈಯಕಕ್ತಿಕ ಮಾಹಿತಿ**

ಅ. ಹೆಸರು : ಡಾ. ಶಿವಾನಂದ .ಎಸ್ ವಿರಕ್ತ ಮಠ

ಆ. ವಿಳಾಸ : ಮಹಿಳಾ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ.

ಇ. ಜಾತಿ : –

ಈ. ವೃತ್ತಿ : ಪ್ರಾಧ್ಯಾಪಕರು.

2. ಭಾಷೆಯಲ್ಲಿ ಗಂಡು ಹೆಣ್ಣು ಎಂಬ ಎರಡು ದೃಷ್ಟಿಕೋನಗಳಿವೆಯೇ?

ಭಾಷೆ ಒಂದು ಕಮ್ಯೂನಿಕೇಷನ್, ಹೆಣ್ಣಿಗೆ ಒಂದು ದೃಷ್ಟಿಕೋನ ಗಂಡಿಗೆ ಒಂದು ದೃಷ್ಟಿಕೋನ, ಹೆಣ್ಣು ಮಕ್ಕಳ ಬಾಷೆ ಹೀಗೆ ಬಳಸಬೇಕು, ಯಾವ ನೆಲೆಯಲ್ಲಿ ಬಳಸಬೇಕು, ಅದರ ಪ್ರಯೋಜನ ಏನು ಎಂಬುದು ಅಮೂರ್ತವಾಗಿದೆ. ಹಾಗಾಗಿ ಭಾಷೆ ಬಳಕೆಯ ಬಗ್ಗೆ ಹೀಗೆ ಸಂಭಾಷಣೆ ಮಾಡಬೇಕು, ಹೀಗೆ ಸಂವಾದ ಮಾಡಬೇಕು ಎನ್ನುವ ನೆಲೆಗಳಿವೆ. ಹೆಣ್ಣು ಮಕ್ಕಳು ಮೃದುವಾಗಿ ಮಾತಾಡಬೇಕು, ಗಟ್ಟಿಯಾಗಿ ಮಾತನಾಡಬಾರದು, ಎಂಬ ಆರ್ಡರ್ ರೀತಿಯಲ್ಲಿ ಮಾತನಾಡಬಾರದು. ಕನೆಕ್ಟಿಂಗ್ ಆಗಿ ಮಾತಾಡಬೇಕು ಎನ್ನುವ ದೃಷ್ಟಿಕೋನ ಇದೆ. ಒಂದೇ ಭಾಷೆಯ ಕಮ್ಯೂನಿಕೇಷನ್‌ನಲ್ಲಿ ಯಾರು ಹೇಗೆ ಭಾಷೆಯನ್ನು ಕಮ್ಯುನಿಕೇಟ್ ಮಾಡಬೇಕು ಎನ್ನುವ ಧೋರಣೆ ಕಾಣಿಸುತ್ತದೆ. ಅದನ್ನು ನಿರ್ವಹಿಸಿದವರು ನಾವು ಬಹಳ ಖಚಿತವಾಗಿ ಹೇಳಲಿಕ್ಕೆ ಆಗುವುದಿಲ್ಲ. 'ಲಾಂಗ್ವೇಜ್ ಇಸ್ ಮ್ಯಾನ್ ಮೇಡ್' ಅಂದರೆ ಪೆಟ್ರಿಯಾರ್ಕಿ ಗಂಡು ಕೇಂದ್ರಿತವಾದ ಅಂಡ್ರೋಸಂಟ್ರೀಕ್ ಅಂಡ್ ನ್ಯಾನೂ ಸೆಂಟ್ರಿಕ್ ವಿಭಜನೆ ಮಾಡಿದ್ದೇವೆ. ಹಾಗೆ ಅಂಡ್ರೋಸಂಟ್ರೀಕ್ ಆಗೇನೆ ಅದು ರಚನೆಗೊಂಡ ಹಿನ್ನೆಲೆಯಲ್ಲಿ ಭಾಷೆ ನಿಯೋಗಿಗಳು ಹೀಗೆ ಇವರನ್ನು ಭಾಷೆಗೊಳಿಸಬೇಕು, ಇವರು ಹೀಗೆ ಭಾಷೆ ಬಳಸಬೇಕು ಎನ್ನುವ ಒಂದು ವರ್ಗ ಸ್ಥೂಲವಾಗಿ ಗಂಡಿನ ವರ್ಗ ಹಾಗೂ ಹೆಣ್ಣಿನ ವರ್ಗ ಎನ್ನುವ ಎರಡು ವರ್ಗವನ್ನು ಸ್ಥೂಲವಾಗಿ ವಿಭಜನೆ ಮಾಡಿರುವ ಹಾಗೇ ಕಾಣಿಸುತ್ತದೆ. ಭಾಷೆ ಬಳಕೆಯ ನೆಲೆಗಳಿಂದ ಕಾಣಿಸುತ್ತದೆ. ಹಾಗಾಗಿ ಮಹಿಳೆಯರ ಭಾಷೆಯನ್ನು ಬಳಸುವಾಗ

ವೈಯಕ್ತಿಕ, ಕೌಟುಂಬಿಕ, ಸಾರ್ವತ್ರಿಕ ಸಂದರ್ಭದಲ್ಲಿ ಹೇಗೆ ಬಳಸಬೇಕು? ಹೇಗೆ ಬಳಸಿದರೆ ಅವರಿಗೆ ಸೂಕ್ತ ಎನ್ನುವ ನೆಲೆಗಳಲ್ಲಿ ಭಾಷೆ ಕಲಿಕೆ, ಬಳಕೆ ಅವರ ಆಶಯಗಳು ಕಾಣಿಸುತ್ತದೆ. ಅವಳ ಮಾತಿಗೆ ಡಿಪ್ರೆಸ್ ಆಗುವಂತಹ ಸಂದರ್ಭದಲ್ಲಿ ಮಹಿಳೆ ಮಾತನಾಡುವುದಿಲ್ಲ. ಇಂತಹ ಸಮಯದಲಿ ಮಹಿಳೆಯ ಭಾಷೆ ಶಬ್ದರಹಿತವಾಗುತ್ತದೆ. ತಮ್ಮ ಮಾತಿಗೆ ಎಲ್ಲಿ ಬೆಲೆ ಇದೆ ಅಲ್ಲಿ ಮಾತ್ರ ಬಳಸುತ್ತಾಳೆ. ಇಲ್ಲದಿದ್ದರೆ ಮೌನ ವಹಿಸುತ್ತಾಳೆ. ಡಿಸೆಜೆನ್ ಮೇಕಿಂಗ್ ವಲಯದ ಬಳಕೆಯ ಸ್ವರೂಪವನ್ನು ಅವಳಿಂದ ಕಿತ್ತುಕೊಳ್ಳುವುದು. ಆದುದ್ದರಿಂದ ಅವಳು ಮೌನವಹಿಸುತ್ತಾಳೆ.

3. ಭಾಷೆಯನ್ನು ಗಂಡುಭಾಷೆ ಮತ್ತು ಹೆಣ್ಣುಭಾಷೆ ಎಂದು ವಿಭಾಗಿಸಿ ನೋಡುವ ಕ್ರಮ ಸೂಕ್ತವೆ?

ಇದು ಅಧ್ಯಯನ ಮಾಡುವುದಕ್ಕೆ ಮಾತ್ರ ಸೂಕ್ತ ಹೊರತು, ಭಾಷೆಯನ್ನು ವಿಭಾಗಿಸುವುದಕ್ಕೆ ಆಗಲ್ಲ. ಭಾಷೆಯ ಒಳಗಡೆ ಭಾಷೆಯನ್ನು ವಿಭಾಗಿಸುವುದಕ್ಕೆ ಆಗಲಿ, ಭಾಷೆಯ ಒಳಗಡೆ ಗಂಡಿನ ಭಾಷೆಯ ಸ್ವರೂಪ ಹೀಗೆ ಇದೆ ಎಂದು ನೋಡಬಹುದೇ ಹೊರತು, ಇದನ್ನು ಬೇರೆ ಬೇರೆ ಎಂದು ನೊಡುವುದಕ್ಕೆ ಆಗುವುದಿಲ್ಲ. ಆದುದರಿಂದ ವಿಭಾಗಿಸುವ ಕ್ರಮ ಸೂಕ್ತ ಅಲ್ಲ.

ಗಂಡಿನ ಭಾಷೆಯ ಸ್ವರೂಪ ಬೇರೆ ಇದೆ, ಹೆಣ್ಣಿನ ಭಾಷೆಯ ಸ್ವರೂಪ ಬೇರೆ ಇದೆ. ಅಧ್ಯಯನದಿಂದ ಇದರ ಬೇರೆ ಬೇರೆ ಸಂಗತಿಗಳು ಗೊತ್ತಾಗುತ್ತದೆ. ಕಂಟೆಂಟ್ ಆಧಾರದ ಮೇಲೆ ಭಾಷೆ ವಿಭಾಗೀಕರಣ ಇವು ಒಂದರೊಂದಿಗೆ ಒಂದು ಸೇರಿಕೊಳ್ಳುತ್ತವೆ. ಅದರ ನಿಯೋಗಗಳಲ್ಲಿ ವ್ಯತ್ಯಾಸ ಇದೆ. ಅವರು ಬೇರೆ ಭಾಷೆಯನ್ನು ಬಳಸಿಕೊಳ್ಳುವ ನೆಲೆಗಳಲ್ಲಿ ಈ ರೀತಿ ಇರುತ್ತದೆ. ಗಂಡಿನ ಭಾಷೆ ಜೊತೆಗೆ ಮಾತನಾಡಬೇಕಾದ ಸಂದರ್ಭದಲ್ಲಿ ಹೀಗೆ ಇರುತ್ತದೆ. ಹಾಗಾಗಿ ಅವರು ಹೆಚ್ಚು ಕಡಿಮೆ ಭಾಷೆ ಎನ್ನುವುದೇ ಪುರುಷ ಷಾಹಿಯಾಗಿರುವುದರಿಂದ ಪುರುಷವರ್ಗದ ಹಿತಾಶಕ್ತಿಗಳಿಗೆ ಅನುಗುಣವಾಗಿ ಭಾಷೆ ರಚಿಸಲ್ಪಟ್ಟಿರುವುದುರಿಂದ ಆ ರಚನೆ ಯಾವ ಉದ್ದೇಶಕ್ಕೆ ರಚನೆಯಾಗಿದೇ ಅದೇ ರೀತಿಯಲ್ಲಿ ಬಳಕೆಯಾಗುತ್ತಿದೆ.

4. ಭಾಷೆಯ ಸಂರಚಿತ ರೂಪವು ಗಂಡು/ಹೆಣ್ಣು ಎಂಬ ತಾರತಮ್ಯದಿಂದ ಕೂಡಿದೆಯೇ ಅಥವಾ ಸಮುದಾಯದ ಸುಪ್ತ ಚೇತನಗಳ ಸಂಜ್ಞೆಗಳಾಗಿ ಭಾಷೆಯಲ್ಲಿ ಅಂತಸ್ಥಗೊಂಡು ವಿಭಜಿತ ನೆಲೆಗೆ ಬಂದು ನಿಂತಿವೆಯೇ?

ರಚನೆ ಒಳಗಡೆ ಗಂಡು–ಗೆಣ್ಣು ಎಂಬ ತಾರತಮ್ಯ ಕೂಡಿದೆ. ರಚನೆಯಲ್ಲಿ ಇರುವುದರಿಂದ ಬಳಕೆಯಲ್ಲಿ ಬರುತ್ತದೆ. ಭಾಷೆ ರಚನೆ ಮಾಡುವವರು ಭಾಷೆ ಬಳಕೆ ಹೆಚ್ಚು ಇರುವುದು ಸಾರ್ವಜನಿಕ ವಲಯದಲ್ಲಿ ವಿಸ್ತಾರವಾಗುತ್ತಿದೆ. ಏಕೆಂದರೆ ಪುರುಷರು ಸಾರ್ವಜನಿಕ ವಲಯದಲ್ಲಿ ಇರುವುದರಿಂದ ತಮಗೆ ಬೇಕಾದ ಭಾಷೆಯನ್ನು ಅವರೆ ಕಟ್ಟುತ್ತಿದ್ದಾರೆ. ಹಾಗೂ ಅವರೆ ಬಳಸುತ್ತಿದ್ದಾರೆ. ಆದುದ್ದರಿಂದ ಸೊಸೈಟಿಯಲ್ಲಿ ಗಂಡು ಹೆಣ್ಣಿನ ಭೇದಭಾವ ಇರುವುದರಿಂದ ತಾರತಮ್ಯ ಧೋರಣೆ ವ್ಯವಸ್ಥೆ ಇರುವುದರಿಂದ ಅದು ನೇರವಾಗಿ ಭಾಷೆಯಲ್ಲಿ ಇಂಪ್ಲಿಕ್ಟ್ ಆಗುತ್ತದೆ. ಸಮಾಜದಲ್ಲಿನೆ ಗಂಡು ಹೆಣ್ಣು ಭಿನ್ನ ಇರುವುದರಿಂದ ಸಾಮಾಜಿಕ ವಲಯ ಇದೆ. ಅಧಿಕಾರ ಸಂಬಂಧವಿದೆ. ಆ ಆಧಿಕಾರ ಸಂಬಂದಿತವಾದ ಸಂಗತಿಗಳು ಅದರ ರಿಫ್ಲೆಕ್ಟ್ ಆಗಿರುವ ಭಾಷೆ ಭಾಷೆಯ ರಚನೆಯಲ್ಲಿ ಕೂಡ ಈ ತಾರತಮ್ಯಗಳು ನುಸುಳುತ್ತವೆ. ಸಾರ್ವಜನಿಕ ವಲಯದಲ್ಲಿ ಮಹಿಳೆಯರನ್ನು ಹೇಗೆ ಬಳಕೆ ಮಾಡಬೇಕು ಎಂಬುದನ್ನು ತಿರ್ಮಾನಿಸುವವರು ಪುರುಷರು. ಅಥವಾ ಅಧಿಕಾರ (ನರ್ಸ್, ಅಂಗನವಾಡಿ ಟೀಚರ್) ಇರುವವರು ಹೇಗೆ ಬೇರೆ ಬೇರೆ ವೃತ್ತಿ ಕಾರ್ಯವಿಧಾನಗಳು ನಿರ್ಧರಿಸುತ್ತಾರೆ. ಹಾಗಾಗಿ ಅವರ ಅನುಗುಣವಾಗಿ ಅವರ ಅಧೀನವಲಯದಲ್ಲಿ ಮತ್ತು ಪುರುಷರು ಪ್ರಧಾನ ವಲಯದಲ್ಲಿ ಇವರು ಏನ್ನುವ ಧೋರಣೆ ಅದಕ್ಕೆ ಅನುಗುಣವಾದ ರಿಫ್ಲೆಕ್ಟ್ ಆಗಿರುವ ಭಾಷೆ ಸಂವಹನಕ್ಕಾಗಿ ಬಳಕೆಯಲ್ಲಿರುವ ಭಾಷೆ ಕೂಡ ಆ ರಚನೆಯಲ್ಲಿ ಆಗಿದುದ್ದು ಬಳಕೆ ನೆಲೆಯಲ್ಲಿ ಸಂಬಂಧಿಸಿದೆ. ಸಂರಚನೆಯಲ್ಲಿ ಕೂಡ ಇರುತ್ತದೆ. ಸಂರಚನೆಯ ಸಾಮಾಜಿಕ ವಲಯ (ಜಂಡರ್) ಆಗಿರುವುದರಿಂದ ಅಲ್ಲಿ ಕೂಡ ರಿಫ್ಲೆಕ್ಟ್ ಆಗುತ್ತದೆ. ಹಾಗಾಗಿ ಅದನ್ನು ಸೂಕ್ತಚೇತನ ಎಂದೂ ಹೇಳಬಹುದು. ಅಥವಾ ಲಿಂಗರಾಜಕಾರಣ ಎಂದು ಹೇಳಬಹುದು ಪ್ರಜ್ಞಾಪೂರಕವಾಗಿ ಇದೆ.

5. ಭಾಷೆಯ ಶುದ್ಧತೆಯನ್ನು ಉಳಿಸಿಕೊಂಡು ಬರುವ ಗುಣ ಸ್ತ್ರೀಯರ ಭಾಷೆಯದು. ಇದು ಸರೀನಾ?

ಭಾಷೆಯ ಶುದ್ಧತೆ ಅಶುದ್ಧತೆ ಎನ್ನುವುದಕ್ಕಿಂತ ಭಾಷಾ ನಿಯೋಗವನ್ನು ಹೇಗೆ ಬಳಸಬೇಕು, ಆ ಭಾಷೆಯನ್ನು ಸಂವಹನಕ್ಕಾಗಿ ಹೇಗೆ ಬಳಸಬೇಕು ಎನ್ನುವ ನೆಲೆಯಿಂದ ಭಾಷೆಯನ್ನು ಸೃಷ್ಟಿಸುವವರಿಗೆ ಭಾಷೆಯನ್ನು ಹೀಗೆ ಬಳಸಬೇಕು ಎಂದು ಗೊತ್ತಾಗುತ್ತದೆ. ಸೃಷ್ಟಿಸಿದ ಭಾಷೆಯನ್ನು ಬೇರೆಯವರು ಬಳಸಬೇಕಾದ (ಮಹಿಳೆಯರ) ನಗರಗಳಲ್ಲಿ ಭಾಷೆಯನ್ನು ಲಾಭ, ಸುಳ್ಳು ಉದ್ದಿಮೆಗಳಿಗಾಗಿ ಬಳಸುತ್ತಾರೆ. ಆದರೆ ಭಾಷೆಯನ್ನು ಸಂವಹನಕ್ಕಾಗಿ

ಬಳಸುವವರು ಹಳ್ಳಿಗಳಲ್ಲಿ ಮಾತ್ರ. ಯಾವ ಹೆಣ್ಣು ಭಾಷೆಯನ್ನು ಸಂವಹನಕ್ಕಾಗಿ ಬಳಸುತ್ತಾಳೊ ಆಗ ಮಾತ್ರ ಭಾಷೆಯ ಸಹಜವಾಗಿ ಶುದ್ಧತೆ ಅಥವಾ ಪ್ರಾಮಾಣಿಕ ಅಥವಾ ಟ್ರಾನ್ಸ್‌ಪರೆಂಟ್ ಆಗಿ ಇರುತ್ತದೆ. ಮನಸ್ಸಿನಲ್ಲಿ ಕಲ್ಮಶ ಇಲ್ಲದಿರುವಾಗ ಸಂವಹನ ನಡೆಸಿದರೆ ಅದು ಶುದ್ಧತೆ ಲಾಭ ಪಡೆಯುವ ಸಂದರ್ಭದಲ್ಲಿ ಸಂವಹನ ನಡೆಸಿದರೆ ಅಲ್ಲಿ ಬೇರೆ ಯೋಚನೆಗಳು ಕೌಶಲ್ಯಗಳನ್ನು ಬಳಸಬೇಕಾಗುತ್ತದೆ. ಇದು ದುಡಿಯುವ ಮಹಿಳೆಯರಲ್ಲಿ ಅಸಂಘಟಿತ ವಲಯದಲ್ಲಿ ಭಾಷೆ ಬಳಕೆ ಟ್ರಾನ್ಸ್‌ಪರೆಂಟ್ ಆಗಿರುವುದರಿಂದ ಭಾಷೆ ಬಳಕೆಯಾಗುತ್ತದೆ. ಇಲ್ಲಿ ಸಂವಹನ ಬಹಳ ಮುಖ್ಯ.

6. ಮಹಿಳೆಯರದೇ ಹೊಸ ಭಾಷೆ ಸೃಷ್ಟಿಸಲು ಸಾಧ್ಯವಾಗಿದೆಯೇ?

ಇಲ್ಲ. ಅಂದರೆ ಅವರದೇ ಒಂದು ಸಮೂಹ/ಗುಂಪು ಇದ್ದಾಗ ಈ ತರಹದ ಸಾಧ್ಯತೆ ಇರುವುದಕ್ಕೆ ಸಾಧ್ಯ. ಅವರದೇ ಆದ ಗುಂಪು ಉಂಟಾಗುವುದಕ್ಕೆ ಸಾಮಾಜಿಕ ಸ್ಥಳವಕಾಶ ಎಲ್ಲಿದೆ? ಆ ಸ್ಥಳಾವಕಾಶಕ್ಕೆ ಗಂಡಸರು ಬಿಡುವುದಿಲ್ಲ. ಆದುದ್ದರಿಂದ ಬೆಳಗಿನ ಜಾವ, ನೀರು ತುಂಬುವ ಸಂದರ್ಭದಲ್ಲಿ ಹೆಣ್ಣು ಮಕ್ಕಳು ಜಾಸ್ತಿ ಮಾತನಾಡುತ್ತಾರೆ ಅದಕ್ಕೆ ಕಾರಣವೇ ಇದು.

ಹೆಣ್ಣು ಮಕ್ಕಳು ಸ್ವಂತಂತ್ರವಾಗಿ ಒಂದು ಕಡೆ ಇರಲು ಸಾಧ್ಯವಾಗದೆ ಇರುವುದರಿಂದ ಅವರದೇ ಆದ ಭಾಷೆ ಹುಟ್ಟಲು ಸಾಧ್ಯವಾಗಿಲ್ಲ. ಇನ್ನೊಂದು ಸಾಧ್ಯತೆ ಅಂದರೆ ಹೆಣ್ಣು ಮಕ್ಕಳೆ ಸೇರಿ ಸಂವಹನ ನಡೆಸುವಾಗ ಅಲ್ಲಿ ಕೆಲವು ಪದರು(Layer) ಸಿಗುತ್ತದೆ. ಅಲ್ಲಿ ಅವರದೇ ಆದ ಸಂವಹನ ಕೌಶಲ್ಯಗಳು ಸ್ವರೂಪಗಳು ಆಯಾ ಮಟ್ಟದಲ್ಲಿ ಇರುವುದಕ್ಕೆ ಸಾಧ್ಯ. ಸ್ತ್ರೀಯರದೇ ಒಂದು ಭಾಷಾ ಬಳಕೆ ನೆಲೆಗಳು ಇರುವುದಕ್ಕೆ ಸಾಧ್ಯ. ಇಂತಹ ಸಂವಹನಗಳು ಸ್ತ್ರೀಯರು ಆತ್ಮಚರಿತ್ರೆ ಬರೆಯುವಾಗ ತನ್ನ ಬಗ್ಗೆ ತಾನು ಹೇಳಿಕೊಳ್ಳುವಾಗ ಈ ನೆಲೆಗಳು ಸಿಗುವ ಸಾಧ್ಯತೆ ಇದೆ. (ಹಾಸ್ಟೆಲ್, ಗಾರ್ಮೆಂಟ್‌ಗಳಲ್ಲಿ) ಕಾವ್ಯ, ಕಥನ, ನಾಟಕ, ಸಂವಾದಗಳಲ್ಲಿ ಹೆಣ್ಣಿನ ಭಾಷೆ ಅನುಭವ ಅಸ್ತಿತ್ವವನ್ನು ರಿಫ್ಲೆಕ್ಟ್ ಮಾಡುವ ಭಾಷಾ ಬಳಕೆಯನ್ನು ಈ ತರಹದ ದೃಶ್ಯಗಳಲ್ಲಿ ಕಂಟೆಂಟ್‌ಗಳಲ್ಲಿ ಅದು ಪ್ರಜ್ಞಾಪೂರ್ವಕವಾಗಿ ರಚನೆ ಮಾಡುತ್ತಿದ್ದಾರೆ. ಸ್ತ್ರೀವಾದಿ ಭಾಷೆ ಎಂದು ಸಹ ಕರೆಯುತ್ತಾರೆ. ವೈದೇಹಿ ಬರಹಗಳಲ್ಲಿ, ಕಥನದಲ್ಲಿ, ನಾಟಕದಲ್ಲಿ, ಸಾರಾ ಅಬೂಬಕ್ಕರ್ ಬರಹಗಳಲ್ಲಿ ಹಾಗೂ 70ರ ದಶಕದ ನಂತರದ ಸ್ತ್ರೀಯರ ಬರಹಗಳಲ್ಲಿ ಪ್ರಜ್ಞಾಪೂರಕವಾದ ಹೆಣ್ಣುಮಕ್ಕಳ ಭಾಷೆ ಸಿಗುತ್ತದೆ.

7. ಮಹಿಳೆಯರದೇ ಪ್ರತ್ಯೇಕ ಭಾಷೆ ಸೃಷ್ಟಿಯಾದ ಮೇಲೆ ಅದು ಅಪ್ರಜ್ಞಾಪೂರ್ವಕವಾಗಿ ಆ ಇಡೀ ಸಮುದಾಯದ ಸಾಂಸ್ಕೃತಿಕ ಭಾಗವಾಗಿ ಬಳಕೆಯಾಗುವಷ್ಟು ಪ್ರಭಾವಯುತವಾಗಿದೆ? ಅಥವಾ ಕೇವಲ ಪ್ರಜ್ಞಾಪೂರ್ವಕ ನೆಲೆಯಲ್ಲಿ ಮಾತ್ರ ನಿಂತು ಬಿಟ್ಟಿದೆಯೇ?

ಖಂಡಿತ ಅದು ಪ್ರಜ್ಞಾಪೂರ್ವಕವಾದ ನೆಲೆಯಲ್ಲಿ ನಿಂತು ಬಿಟ್ಟಿದೆ. ಸಮೂಹ ಅಥವಾ ಗುಂಪು ಅದನ್ನು ಅಭಿವೃದ್ಧಿ ಮಾಡಲಿಕ್ಕೆ ಹೋಗಿಲ್ಲ. ಹೊಗಬೇಕೆಂದರೆ ಅವರಿಗೆ ಎಲ್ಲಾ ಬಗೆಯ ಸ್ವಾತಂತ್ರ್ಯ ಸಿಕ್ಕಾಗ ಮಾತ್ರ ಅದು ಬಳಸಲಿಕ್ಕೆ ಸಾಧ್ಯವಾಗುತ್ತದೆ. ಅದನ್ನು ಮತ್ತೆ ಮತ್ತೆ ಕೊಂಕುಮಾಡಿ ಪೆಟ್ರಿಯಾರ್ಕಿಗೆನೆ ಸೇಟ್ ಮಾಡುವುದಕ್ಕೆ ಪ್ರಯತ್ನ ಮಾಡುವುದರಿಂದ ಮತ್ತೆ ಮತ್ತೆ ಸ್ಥಿರ ಮಾದರಿಗೆ ಹೆಣ್ಣು ಮಕ್ಕಳನ್ನು ಕಟ್ಟಿ ಹಾಕೋಕೆ ಸಮಾಜ ಪ್ರಯತ್ನ ಮಾಡುವುದರಿಂದ ಪೆಟ್ರಿಯಾರ್ಕಿ ಆಚೆಗೆ ಹೆಣ್ಣು ಮಕ್ಕಳನ್ನು ಬಿಡೊಲ್ಲ. ಹೀಗೆ ಬಿಡದೇ ಇರುವುದರಿಂದ ಪೆಟ್ರಿಯಾರ್ಕಿ ಲಿಂಗ ಮುಕ್ತವಾದ ಸಮಾಜ ರಚನೆಗೆ ಬೆಂಬಲ ಮಾಡಿದರೆ ಸರಿಹೋಗುತ್ತದೆ. ಪ್ರಜ್ಞಾಪೂರ್ವಕ ವಲಯದಲ್ಲಿ ಈ ಭಾಷೆ ಬೆಳವಣಿಗೆಯಾಗಿದೆ.

8. ಲಿಂಗಾತೀತವಾದ ಭಾಷೆಯನ್ನು ಸೃಷ್ಟಿಸಲು ಸಾಧ್ಯವಾಗಿದೆಯೇ?

ಲಿಂಗಾತೀತವಾದ ಭಾಷೆ ಬಳಕೆ ಸೃಷ್ಟಿಸಲು ಸಾಧ್ಯವಾಗಿಲ್ಲ. ಸಾಧ್ಯವಾಗಬೇಕೆನ್ನುವುದು ಆಶಯ. ಆದರೆ ಅದು ಆಗಿಲ್ಲ ಎನ್ನುವುದು ವಾಸ್ತವ.

9. ಗಂಡು–ಹೆಣ್ಣಿನ ಅಲೋಚನೆ ಲೋಕಗ್ರಹಿಕೆ ಮತ್ತು ತಾತ್ವಿಕತೆ ಭಿನ್ನವೆ? ಹೌದಾದರೆ ಅದಕ್ಕೆ ಕಾರಣಗಳೇನು?

ಪುರುಷಲೋಕ ಗ್ರಹಿಕೆ ಇದೆ. ಸ್ತ್ರೀಲೋಕ ಗ್ರಹಿಕೆ ಇದೆ. ಆದರೆ ಅದು ಅಭಿವ್ಯಕ್ತಿ ಆಗಿಲ್ಲ. ಪುರುಷಲೋಕ ಗ್ರಹಿಕೆಯನ್ನೇ ಸ್ತ್ರೀಯರ ಮೇಲೆ ಹೇರಲಾಗುತ್ತದೆ. ಪುರುಷರ ಆಲೋಚನ ಕ್ರಮ, ಗ್ರಹಿಕೆ, ಅಭಿವ್ಯಕ್ತಿ ಎಲ್ಲಾವನ್ನು ಮಹಿಳೆಯ ಮೇಲೆ ಹೇರಲಾಗುತ್ತದೆ. ಹೆಣ್ಣಿನ ಲೋಕಗ್ರಹಿಕೆಗೆ ಸಾಮಾಜಿಕ ಚಲನೆ ಇಲ್ಲ. ಅಭಿವ್ಯಕ್ತಿ ಕೂಡ ಇಲ್ಲ. ಸ್ತ್ರೀಲೋಕ ಗ್ರಹಿಕೆ ಮತ್ತು ತಾಂತ್ರಿಕತೆ ವರ್ತಮಾನಕ್ಕೆ ಸಂಬಂಧಿಸಿದ ಪುರುಷ ಲೋಕಗ್ರಹಿಕೆಗೆ ಭೂತ ಮತ್ತು ಭವಿಷ್ಯತ್ತಿಗೆ ಸಂಬಂಧಿಸಿದ ಹೆಣ್ಣು, ವರ್ತಮಾನದಲ್ಲಿ ಬದುಕುವ ಹೆಣ್ಣು ವರ್ತಮಾನವನ್ನೇ ಆಲೋಚನೆ ಮಾಡಬೇಕು. ಪುರುಷಲೋಕಕ್ಕೆ ವರ್ತಮಾನದಿಂದ ಭವಿಷ್ಯತ್ತಿಗೆ ಜಿಗಿಯುವ ವ್ಯವಸ್ಥೆ ಇದೆ.

10. ಸಾಮಾಜಿಕ ಸಂದರ್ಭದಲ್ಲಿ ಸ್ತ್ರೀವಾಚಕಗಳ ಬಳಕೆ ವೈಯಕ್ತಿಕ ನೆಲೆ ಹಾಗೂ ಸಮುದಾಯದ ನೆಲೆಗಳೆರಡರಲ್ಲಿಯು ಅಸ್ತಿತ್ವ ಪಡೆದಿವೆಯೇ? ಪಡೆಯುತ್ತಿವೆಯೇ/ಇಲ್ಲವೇ?

ಶ್ರಮದ ವಲಯದಲ್ಲಿ ಇದೆ. ಆದರೆ ಸ್ತ್ರೀವಾಚಕಗಳಲ್ಲಿ ಪರಿವರ್ತಿಸುತ್ತವೆ. ಆ್ಯಂಡ್ರೋಸೆಂಟ್ರಿಕ್ ಪ್ರಕಾರ ಸ್ತ್ರೀಯರು ಏಕತನತೆಯ ಕೆಲಸವನ್ನು ಮಾಡುತ್ತಾರೆ. ಚೌಕಟ್ಟನ್ನು ಪುರುಷ ಸಿದ್ದಪಡಿಸುವುದು, ಅನುಸರಣೆಯನ್ನು ಮಹಿಳೆ ಮಾಡುತ್ತಾಳೆ. ಲಾಭದ ಸಂಗತಿಗಳಲ್ಲಿ ಪುರುಷವಾಚಕ ಮುಂದುವರೆಯುತ್ತದೆ. ಏಕಾತನತೆ ಕೆಲಸ ಬಂದಾಗ ಮಹಿಳೆಯತ್ತ ತಿರುಗಿಸುತ್ತದೆ. ಮುಂದೆ ಬಂದಂತೆಲ್ಲಾ ಬದಲಾವಣೆಯಾಗುತ್ತದೆ. ಸಣ್ಣ ಪುಟ್ಟ ಕೆಲಸಗಳಲ್ಲಿ ಪುರುಷ ವಾಚಕಗಳೆಲ್ಲವು ಸ್ತ್ರೀ ವಾಚಕಗಳಾಗಿ ಬದಲಾವಣೇ ಆಗುತ್ತದೆ(ಲಾಭ ಬಂದಾಗ ಮಾತ್ರ). ನಿರ್ಧಾರ ಮಾಡುವವರು ಪುರುಷರಾಗಿದ್ದರೆ, ಅವುಗಳಿಗೆ ಸಹಾಯಕವಾಗಿ ಸ್ತ್ರೀಯರು ಇರುತ್ತಾರೆ. ಉದಾ:- ಹೋಟೇಲ್‌ಗಳಲ್ಲಿ ಮ್ಯಾನೇಜರ್ ಮಾತ್ರ ಪುರುಷರು, ಮಹಿಳೆಯರು ಸ್ವಚ್ಚತೆ ಕೆಲಸ, ಅಡುಗೆ ಮಾಡುವವರು, ಸಹಾಯಕರಾಗಿರುತ್ತಾರೆ. ಪುರುಷವಾಚಕಗಳು ಸ್ತ್ರೀವಾಚಕಗಳಾಗಿ ಬದಲಾವಣೆಯಾದಾಗ ಯಾರಿಗೆ ಲಾಭವಾಗುತ್ತದೆ ಎಂಬುದು ತಿಳಿಯುತ್ತದೆ.

11. ಎಲ್ಲಾ ವಯೋಮಾನದ ಸ್ತ್ರೀ ಪುರುಷರಿಬ್ಬರಲ್ಲೂ ಸ್ತ್ರೀವಾಚಕಗಳು ಹಾಗೂ ಪುರುಷ ವಾಚಕಗಳನ್ನು ಪ್ರಜ್ಞಾಪೂರ್ವಕವಾಗಿ ಬಳಸುವ ಪರಿಪಾಠ ಶುರುವಾಗಿದೆಯೇ? ಅಥವಾ ಇಲ್ಲವೇ?

    ಪ್ರಜ್ಞಾಪೂರ್ವಕವಾಗಿ ಇದೆ. ಅಪ್ರಜ್ಞಾ ಪೂರ್ವಕವಾಗಿ ಉಳಿಸುವ ಸಂದರ್ಭ ಬರುವುದಿಲ್ಲ.

12. ಪುರುಷ ವಾಚಕಗಳು/ಸ್ತ್ರೀವಾಚಕಗಳು ಎಂದು ಗೆರೆ ಎಳೆದು ಬಳಸುವುದಕ್ಕಿಂತ ಹೊಸ ರೀತಿಯ ಪದಗಳನ್ನು ಸೃಷ್ಟಿಸಿ ಬಳಸುವ ಪರಿಪಾಠ ಇದೆಯೇ?

    ಯಾವುದಕ್ಕೆ ಸಾಮಾಜಿಕ ಚಹರೆ ಇದೆ ಅದು ಉಳಿದುಕೊಳ್ಳುತ್ತದೆ. ಸ್ತ್ರೀವಾಚಕಗಳು ಮುಕ್ತ ಬಳಕೆ ಇದ್ದರೂ ಪುರುಷರು ಅದನ್ನು ಬಳಸುತ್ತಾರೆ. ಲಾಭ ಬಂದಾಗ ಪುರುಷರು ಇರುತ್ತಾರೆ. ನಷ್ಟಬಂದಾಗ ಸ್ತ್ರೀಯರು ಇರುತ್ತಾರೆ. ಅಡುಗೆ ಎಂಬ ಶಬ್ದ ಬಂದಾಗ ಮಹಿಳೆ ಬರುತ್ತಾಳೆ. ಮ್ಯಾನೆಜರ್ ಎಂಬ ಶಬ್ದ ಬಂದಾಗ ಪುರುಷ ಗೋಚರವಾಗುತ್ತಾನೆ. ಹೆಸರು ಮಾತ್ರ ಸಾಮಾನ್ಯ ಲಿಂಗ ಇರುತ್ತದೆ. ಅದರಲ್ಲಿ ಕಾಣಿಸುವುದು ಮಾತ್ರ ಪುರುಷವಾಚಕ. ಸ್ತ್ರೀವಾಚಿ ಇರುವುದಿಲ್ಲ.

13. ಸ್ತ್ರೀವಾಚಕ ಪದಗಳ ಬಳಕೆಯ ಮಾತಂತಿರಲಿ ಅದರ ಗ್ರಹಿಕೆಯಾದರೂ ಸಮುದಾಯದ ಜನರೆಲ್ಲರಲ್ಲಿಯು ಮೂಡಿದೆಯೇ?

ಇದು ಸವಾಲಿನ ಪ್ರಶ್ನೆ, ಜಾಗೃತಿ ಮೂಡಿಸಬೇಕು. ಸ್ತ್ರೀ ವಾಚಕಗಳನ್ನು ಸಮುದಾಯಗಳಲ್ಲಿ ಮೂಡಿಸುವುದು ನಮ್ಮ ಆಶಯ, ಆದರೆ ಅದು ನಿಜವಾಗಿ ನಡೆಯುತ್ತಿದೆಯಾ? ಸ್ವಲ್ಪ ಮಟ್ಟಿಗೆ ಈ ಬಗ್ಗೆ ಮಾಧ್ಯಮಗಳು ಸ್ವಲ್ಪ ಪ್ರಮಾಣದಲ್ಲಿ ಈ ಕೆಲಸ ಮಾಡುತ್ತಿವೆ. ಅದರಿಂದಾಗಿ ಜಾಗೃತಿ ಮೂಡುತ್ತಿದೆ. ಸ್ತ್ರೀ ವಾಚಕಗಳು ಸ್ತ್ರೀಯರ ಅಸ್ತಿತ್ವ ಪ್ರಶ್ನೆಗಳು ಎನ್ನುವ ಯೋಚನೆ ಅವರಲ್ಲಿ ಮೂಡಿಸುತ್ತಿದೆ. ಈ ತರಹದ ಅನೇಕ ಸಂಗತಿಗಳು ಕಂಡುಬರುತ್ತಿವೆ. ಉದಾ:- ಮದುವೆಯ ವಿಷಯ, ಉದ್ಯೋಗ ವಿಷಯಗಳು ಬಂದಾಗ ಉದ್ಯೋಗ ಖಾತ್ರಿಯೋಜನೆಯಲ್ಲಿ, ಅನ್ನಭಾಗ್ಯಯೋಜನೆ, ರೇಷನ್‌ಕಾರ್ಡ್, ಸರ್ಕಾರದ ಮನೆ ನಿರ್ಮಾಣದ ವಿಷಯಗಳಲ್ಲಿ ಮಹಿಳೆಯ ಅಸ್ತಿತ್ವ ಕಂಡುಬರುತ್ತಿದೆ.

**೫. ವೈಯಕ್ತಿಕ ಮಾಹಿತಿ**

**ಅ. ಹೆಸರು: ಬಸವರಾಜ ಕೋಡಗುಂಟಿ**

ಆ. ವಿಳಾಸ : ಸಹಾಯಕ ಪ್ರಾಧ್ಯಾಪಕ, ಕನ್ನಡ ವಿಭಾಗ, ಕರ್ನಾಟಕ 'ಕೇಂದ್ರೀಯ ವಿಶ್ವವಿದ್ಯಾಲಯ, ಕಡಗಂಚಿ, ಕಲಬುರಗಿ

ಇ. ಜಾತಿ ಪದ್ಮಶಾಲಿ, ೨ ಎ:

ಈ. ವೃತ್ತಿ ಸರಕಾರಿ ನೌಕರಿ

೧. ಭಾಷೆಯಲ್ಲಿ ಗಂಡು/ಹೆಣ್ಣು ಎಂಬ ಎರಡು ವಿಧಗಳಿವೆಯೇ? ಅಥವಾ ಎರಡು ದೃಷ್ಟಿಕೋನಗಳಿವೆಯೇ?

ಎರಡು ದೃಷ್ಟಿಕೋನಗಳು ಎಂದೆನ್ನಬಹುದು.

೨. ಭಾಷೆಯನ್ನು ಗಂಡುಭಾಷೆ ಮತ್ತು ಹೆಣ್ಣು ಭಾಷೆ ಎಂದು ವಿಭಾಗಿಸಿ ನೋಡುವ ಕ್ರಮ ಸೂಕ್ತವೆ?

ಗಂಡು ಮತ್ತು ಹೆಣ್ಣು ಎಂಬುವುದು ಇರುವುದರಿಂದ ಇದು ಸೂಕ್ತ

೩. ಭಾಷೆಯ ಸಂರಚಿತ ರೂಪವೇ ಗಂಡು/ಹೆಣ್ಣು ಎಂಬ ತಾರತಮ್ಯದಿಂದ ಕೂಡಿದೆಯೇ ಅಥವಾ ಸಮುದಾಯದ ಸುಪ್ತ ಚೇತನಗಳ ಸಂಜ್ಞೆಗಳಾಗಿ ಭಾಷೆಯಲ್ಲಿ ಅಂತಸ್ಥಗೊಂಡು ವಿಭಜಿತ ನೆಲೆಗೆ ಬಂದು ನಿಂತಿವೆಯೇ?

ಭಾಷೆಯ ಸಂರಚಿತ ರೂಪ ಸಮುದಾಯದ ಅಂತಸ್ಸತ್ವದಿಂದ ರೂಪುಗೊಂಡಿರುವುದು. ಇದು ತಾರತಮ್ಯವೆ ಎಂಬುದನ್ನು ನೋಡಬೇಕು. ಭಿನ್ನತೆಗಳೆಲ್ಲ ತಾರತಮ್ಯಗಳಲ್ಲ. ಇಲ್ಲಿ ಭಿನ್ನತೆ ಸಮುದಾಯದ ಅಂತಸ್ಸತ್ವವನ್ನು ರೂಪಿಸುವುದು ಮತ್ತು ತಾರತಮ್ಯ ಸಾಮಾಜಿಕತೆಯಿಂದ ರೂಪುಗೊಳ್ಳುವುದು.

೪. ಭಾಷೆಯ ಶುದ್ಧತೆಯನ್ನು ಉಳಿಸಿಕೊಂಡು ಬರುವ ಗುಣ ಸ್ತ್ರೀಯರ ಭಾಷೆಯದು. ಇದು ಸರೀನಾ?

ಭಾಷೆಯ ಶುದ್ದತೆ ಎಂಬುದು ಇರುವುದಿಲ್ಲ.

೫. ಮಹಿಳೆಯರದೆ ಹೊಸ ಭಾಷೆ ಸೃಷ್ಟಿಸಲು ಸಾಧ್ಯವಾಗಿದೆಯೇ?

ಕುತ್ರಿಮ ಪ್ರಯತ್ನಗಳು ಏನನ್ನು ಬೇಕಾದರೂ ಹುಟ್ಟಿಸಲು ಸಾದ್ಯವಾಗಬಹುದು. ಆದರೆ, ಭಾಷೆ ಎನ್ನುವುದು ಸೃಷ್ಟಿಸುವಂತದ್ದೆ, ಬೆಳೆಯುವಂತದ್ದೆ ಎಂಬುದನ್ನು ಗಮನಿಸಬೇಕು.

೬. ಮಹಿಳೆಯರದೇ ಪ್ರತ್ಯೇಕ ಭಾಷೆ ಸೃಷ್ಟಿಯಾದ ಮೇಲೆ ಅದು ಅಪ್ರಜ್ಞಾಪೂರ್ವಕವಾಗಿ ಆ ಇಡೀ ಸಮುದಾಯದ ಸಾಂಸ್ಕೃತಿಕ ಭಾಗವಾಗಿ ಬಳಕೆಯಾಗುವಷ್ಟು ಪ್ರಭಾವಯುತವಾಗಿದೆ? ಅಥವಾ ಕೇವಲ ಪ್ರಜ್ಞಾಪೂರ್ವಕ ನೆಲೆಯಲ್ಲಿ ಮಾತ್ರ ನಿಂತು ಬಿಟ್ಟಿದೆಯೇ?

ಹಾಗೊಂದು, ಒಂದು ಲಿಂಗದ ಭಾಷೆ ಎಂಬುದರ ಸೃಷ್ಟಿಯ ವಿಚಾರವೆ ಸೂಕ್ತವಲ್ಲ, ಇನ್ನು ಅದರ ಅಸ್ತಿತ್ವದ ಬಗೆಗೆ ಮಾತನಾಡುವುದು ಇನ್ನೂ ಕಷ್ಟ.

೭. ಲಿಂಗಾತೀತವಾದ ಭಾಷೆಯನ್ನು ಸೃಷ್ಟಿಸಲು ಸಾಧ್ಯವಾಗಿದೆಯೇ?

ಲಿಂಗಾತೀತ ಸಮಾಜ ಸಾದ್ಯವಿಲ್ಲದಿರುವುದರಿಂದ, ಲಿಂಗಾತೀತ ಭಾಷೆ ಕೂಡ ಅಸಾದ್ಯ. ಬೇಕಿರುವುದು ಲಿಂಗ ತಾರತಮ್ಯವಿಲ್ಲದ ಭಾಷೇಯೆ ಹೊರತು ಲಿಂಗಾತೀತ, ಇಲ್ಲವೆ ಲಿಂಗವಿಲ್ಲದ ಭಾಷೆ ಅಲ್ಲ.

೮. ಗಂಡು-ಹೆಣ್ಣಿನ ಆಲೋಚನೆ ಲೋಕಗ್ರಹಿಕೆ ಮತ್ತು ತಾತ್ವಿಕತೆ ಭಿನ್ನವೇ? ಹೌದಾದರೆ ಅದಕ್ಕೆ ಕಾರಣಗಳೇನು?

ಗಂಡು ಮತ್ತು ಹೆಣ್ಣು ಎರಡು ಭಿನ್ನ ಲಿಂಗಗಳು, ಎರಡು ಭಿನ್ನ ಸೃಷ್ಟಿಗಳು, ಎರಡು ಭಿನ್ನ ರಚನೆಗಳು. ಸಹಜವಾಗಿವೆ ಅವುಗಳ ನಡುವೆ ಭಿನ್ನತೆ ಇದೆ, ಇರುತ್ತದೆ, ಇರಬೇಕು ಕೂಡ.

೯. ಸಾಮಾಜಿಕ ಸಂದರ್ಭದಲ್ಲಿ ಸ್ತ್ರೀವಾಚಕಗಳ ಬಳಕೆ ವೈಯಕ್ತಿಕ ನೆಲೆ ಹಾಗೂ ಸಮುದಾಯದ ನೆಲೆಗಳೆರಡರಲ್ಲಿಯು ಅಸ್ತಿತ್ವ ಪಡೆದಿವೆಯೇ? ಪಡೆಯುತ್ತಿವೆಯೇ/ಇಲ್ಲವೇ?

ಕ್ಷಮೆ ಇರಲಿ, ನನಗೆ ಸ್ತ್ರೀವಾಚಕ ಎಂದರೆ ಸಂಭೋದನ ರೂಪಗಳೆ ಹೇಗೆ ಎಂಬುದು ಸರಿಯಾಗಿ ಗೊತ್ತಾಗುತ್ತಿಲ್ಲ,

೧೦. ಎಲ್ಲಾ ವಯೋಮಾನದ ಸ್ತ್ರೀಪುರುಷರಿಬ್ಬರಲ್ಲೂ ಸ್ತ್ರೀವಾಚಕಗಳು ಹಾಗೂ ಪುರುಷ ವಾಚಕಗಳನ್ನು ಪ್ರಜ್ಞಾಪೂರ್ವಕವಾಗಿ ಬಳಸುವ ಪರಿಪಾಠ ಶುರುವಾಗಿದೆಯೇ? ಅಥವಾ ಇಲ್ಲವೇ?

ಕ್ಷಮೆ ಇರಲಿ, ನನಗೆ ಸ್ತ್ರೀವಾಚಕ ಎಂದರೆ ಸಂಭೋದನ ರೂಪಗಳೆ ಹೇಗೆ ಎಂಬುದು ಸರಿಯಾಗಿ ಗೊತ್ತಾಗುತ್ತಿಲ್ಲ,

೧೧. ಪುರುಷ ವಾಚನಕಗಳ/ಸ್ತ್ರೀವಾಚಕಗಳು ಎಂದು ಗೆರೆ ಎಳೆದು ಬಳಸುವುದಕ್ಕಿಂತ ಹೊಸ ರೀತಿಯ ಪದಗಳನ್ನು ಸೃಷ್ಟಿಸಿ ಬಳಸುವ ಪರಿಪಾಠ ಇದೆಯೇ?

೧೨. ಸ್ತ್ರೀವಾಚಕ ಪದಗಳ ಬಳಕೆಯ ಮಾತಂತಿರಲಿ ಅದರ ಗ್ರಹಿಕೆಯಾದರೂ ಆ ಸಮುದಾಯದ ಜನರೆಲ್ಲರಲ್ಲಿಯು ಮೂಡಿದೆಯೇ?

# ಪ್ರಶ್ನಾವಳಿ

೧. **ವೈಯಕ್ತಿಕ ಮಾಹಿತಿ**

ಅ. ಹೆಸರು : ವಿದ್ಯಾಶ್ರೀ ಎಸ್.

ಆ. ವಿಳಾಸ : ಬೀದಿಬಾವಿ ಓಣಿ, ಹಿರೇಜಂತಕಲ್ ಗಂಗಾವತಿ

ಇ. ವಿದ್ಯಾರ್ಹತೆ : ಬಿ.ಇಡಿ.

ಈ. ಜಾತಿ : ಬಲಿಜ

ಉ. ವೃತ್ತಿ ; ವಿದ್ಯಾರ್ಥಿನಿ

ಊ. ವಯಸ್ಸು : ೧೯

೨. ನೀವು ಆಡುವ ಭಾಷೆ ಯಾವುದು? :

ಕನ್ನಡ

೩. ನಿಮ್ಮ ಮನೆತನದ ಹೆಸರೇನು? (ಕುಲನಾಮ) ಅದಕ್ಕೆ ಹಿನ್ನೆಲೆ ಏನಾದರೂ ಇದೆಯೇ?

ಬೀದಿಭಾವಿ. ಈ ಕುಲನಾಮ ನಮ್ಮ ಪೂರ್ವಜರ ಕಾಲದಿಂದಲೂ ರೂಢಿಯಲ್ಲಿದ್ದು, ಇಂದಿಗೂ ಜಾರಿಯಲ್ಲಿದೆ. ನಮ್ಮ ಮನೆಯ ಮುಂದೆ 'ಬಾವಿ' ಇರುವುದರಿಂದ ಇದು ವಾಡಿಕೆಯಾಗಿದೆ.

೪. ನಿಮ್ಮ ಮನೆತನದ ವೃತ್ತಿ ಯಾವುದು? ಅದರ ಪರಿಕರಗಳು ಯಾವುವು?

ವ್ಯವಸಾಯ, ಪರಿಕರಗಳು: ಎತ್ತಿನಬಂಡಿ, ಟ್ರ್ಯಾಕ್ಟರ್, ಇತ್ಯಾದಿ

೫. ನಿಮ್ಮ ಮನೆಯಲ್ಲಿ ಆಚರಿಸುವ ವಿಶೇಷ ಆಚರಣೆಗಳು ಯಾವುವು? ಯಾವುದಾದರೂ ಒಂದು ಆಚರಣೆಯನ್ನು ವಿವರಿಸಿ

–

೬. ನಿಮ್ಮ ಮನೆಯಲ್ಲಿ ಹೆಚ್ಚು ಮಾತನಾಡುವವರು ಯಾರು? ಏಕೆ?

ನಾನೇ. ಯಾಕೆ ಅಂದ್ರೆ ಮಾತನಾಡಲು ಕಾರಣವನ್ನು ಹುಡುಕದೇ ನಿರಂತರವಾಗಿ ಮಾತಾಡ್ತಾನೇ ಇರ್ತೀನಿ

೭. ನಿಮ್ಮ ಮನೆಯ ನಿರ್ಧಾರಗಳನ್ನು ತೆಗೆದುಕೊಳ್ಳುವವರು ಯಾರು? ತಂದೆ/ತಾಯಿ ಮತ್ತು ಯಾಕೆ ಅವರೇ/ಅವಳೇ ತೆಗೆದುಕೊಳ್ಳುತ್ತಾರೆ?

ನಿರ್ದಿಷ್ಟವಾಗಿ ಹೇಳೋದಾದ್ರೆ ತಂದೆ ಎಲ್ಲಾ ನಿರ್ಧಾರಗಳನ್ನು ಮಾಡುತ್ತಾರೆ. ಕಾರಣ ಹೆಚ್ಚು ಸಾಮಾನ್ಯ ಜ್ಞಾನ ಹೊಂದಿರುವುದರಿಂದಾಗಿ.

೮. ಕೆಳಗೆ ಕೊಟ್ಟಿರುವ ಕೆಲಸಗಳಲ್ಲಿ ಯಾರು ಯಾವ ಕೆಲಸವನ್ನು ಮಾಡಬೇಕು? ಮತ್ತು ಯಾಕೆ?

| ಕ್ರಸಂ. | ಕೆಲಸ | ಪುರುಷ | ಮಹಿಳೆ | ಯಾಕೆ |
|---|---|---|---|---|
| ೧. | ಟೈಲರಿಂಗ್ | ✓ | ✓ | ಬಟ್ಟೆ ಹೊಲಿಯುವುದು ಪುರುಷ ಮತ್ತು ಮಹಿಳೆಯರಿಗೆ ಅವಶ್ಯಕವಾದ ವೃತ್ತಿಯಾಗಿದೆ. |
| ೨. | ಏಮ್‌ರೈಡಿಂಗ್ |  | ✓ | ಮಹಿಳೆಯರು ಹೆಚ್ಚಾಗಿ ಹೊಸತನ್ನು ಬಯಸುವುದರಿಂದ ಈ ಕಸೂತಿ ಕಲೆ ಅವರಿಗೆ ಸೀಮಿತ. |
| ೩. | ಪೋಲಿಸ್ | ✓ | ✓ | ಇದು ಇಬ್ಬರಿಗೂ ಸರಿಹೊಂದುತ್ತದೆ |
| ೪. | ಡಾಕ್ಟರ್ | ✓ | ✓ | ಇದು ಇಬ್ಬರಿಗೂ ಸರಿಹೊಂದುತ್ತದೆ. |
| ೫. | ನರ್ಸ್ |  | ✓ | ಇದು ಇಬ್ಬರಿಗೂ ಸರಿಹೊಂದುತ್ತದೆ. |
| ೬. | ಲಾಯರ್ | ✓ | ✓ | ಇದು ಇಬ್ಬರಿಗೂ ಸರಿಹೊಂದುತ್ತದೆ. |
| ೭. | ಟೀಚರ್ | ✓ | ✓ | ಇದು ಇಬ್ಬರಿಗೂ ಸರಿಹೊಂದುತ್ತದೆ. |
| ೮. | ರೈತ | ✓ |  | ಇದು ಇಬ್ಬರಿಗೂ ಸರಿಹೊಂದುತ್ತದೆ. |
| ೯. | ಮಿಲಿಟರಿ | ✓ |  | ಪುರುಷರಿಗೆ ಸೂಕ್ತವಾದುದ್ದಾಗಿದೆ. |
| ೧೦. | ಪೈಲೆಟ್ | ✓ |  | ಇದು ಇಬ್ಬರಿಗೂ ಸರಿಹೊಂದುತ್ತದೆ. |
| ೧೧. | ಡ್ರೈವರ್ | ✓ |  | ಪುರುಷರಿಗೆ ಸೂಕ್ತವಾದುದ್ದಾಗಿದೆ. |
| ೧೨. | ಕಂಡಕ್ಟರ್ | ✓ |  | ಪುರುಷರಿಗೆ ಸೂಕ್ತವಾದುದ್ದಾಗಿದೆ. |
| ೧೩. | ಸಮಾಜ ಸುಧಾರಕರು | ✓ | ✓ | ಇಬ್ಬರಿಗೂ ಅನ್ವಯಿಸುತ್ತದೆ. |
| ೧೪. | ಮನೆ ಕೆಲಸ, ಅಡುಗೆ, ಬಟ್ಟೆ ತೊಳೆಯುವುದು, ಕಸ ಗುಡಿಸುವುದು. | ✓ | ✓ | ಇಬ್ಬರಿಗೂ ಅನ್ವಯಿಸುತ್ತದೆ. |
| ೧೫. | ಸೂಳೆ |  |  | ಅನೈತಿಕ ಚಟುವಟಿಕೆ ಸಮಾಜಕ್ಕೆ ಮಾರಕ |

೯. ಕೆಳಗೆ ಕೊಟ್ಟಿರುವ ಶಿಕ್ಷಣ ಪದವಿಗಳಲ್ಲಿ ಯಾರು ಯಾವ ಬಗೆಯ ಶಿಕ್ಷಣ ಪಡೆಯಬೇಕು? ಯಾಕೆ?

| ಕ್ರಸಂ. | ಪದವಿ | ಪುರುಷ | ಮಹಿಳೆ | ಯಾಕೆ |
|---|---|---|---|---|
| ೧. | ಪಿ.ಯು.ಸಿ. ಆರ್ಟ್ಸ್, ಸೈನ್ಸ್, ಕಾಮರ್ಸ್ | ✓ | ✓ | ವಿದ್ಯಾಭ್ಯಾಸ ಮಾಡಲು |
| ೨. | ಡಿಪ್ಲೊಮಾ | ✓ | | ಪುರುಷರಿಗೆ ಸೂಕ್ತ |
| ೩. | ಡಿ.ಎಡ್., ಬಿ.ಎಡ್. | ✓ | ✓ | ಮಹಿಳೆಯರಿಗೆ ಸೂಕ್ತ |
| ೪. | ಐಟಿಐ | ✓ | | ಪುರುಷರು ತಂತ್ರಜ್ಞಾನವನ್ನು ಇಷ್ಟಪಡುತ್ತಾರೆ. |
| ೫. | ಜೆ.ಓ.ಸಿ. | ✓ | ✓ | ಮಹಿಳೆಯರೊಂದಿಗೆ ಭವಿಷ್ಯ ರೂಪಿಸುತ್ತಾರೆ. |
| ೬. | ಎಂ.ಕಾಂ | ✓ | ✓ | ಉನ್ನತ ಶಿಕ್ಷಣ ಇಬ್ಬರಿಗೂ ಸೂಕ್ತ |
| ೭. | ಇಂಜಿನಿಯರಿಂಗ್ | ✓ | ✓ | ಉನ್ನತ ಶಿಕ್ಷಣ ಇಬ್ಬರಿಗೂ ಸೂಕ್ತ |
| ೮. | ಬಿ.ಎ. | ✓ | ✓ | ಉನ್ನತ ಶಿಕ್ಷಣ ಇಬ್ಬರಿಗೂ ಸೂಕ್ತ |
| ೯. | ಪಿಎಚ್.ಡಿ. | ✓ | ✓ | ಉನ್ನತ ಶಿಕ್ಷಣ ಇಬ್ಬರಿಗೂ ಸೂಕ್ತ |

೧೦. ಮನೆಯಲ್ಲಿ ಹೊರಗಡೆ ಯಾರು ಮಾತನಾಡಬೇಕು? ಹೆಣ್ಣು/ಗಂಡೋ ಮತ್ತು ಯಾಕೆ?

ನಮ್ಮ ಸಮಾಜ ಪುರುಷ ಪ್ರಧಾನವಾಗಿರುವುದರಿಂದ ಮನೆಯ ಹೊರಗಡೆ ಪುರುಷ (ಗಂಡು) ಮಾತನಾಡುವುದೇ ಒಳಿತು.

೧೧. ನಿಮಗಿಂತ ಮೇಲಿನ ಜಾತಿಯವರೂ ನಿಮ್ಮನ್ನು ಹೇಗೆ ಮಾತನಾಡಿಸುತ್ತಾರೆ.

ಹೀಯಾಳಿಸಿ ಮಾತನಾಡಿಸುತ್ತಾರೆ.

೧೨. ನಿಮಗಿಂತ ಕೆಳಗಿನ ಜಾತಿಯವರೂ ನಿಮ್ಮನ್ನು ಹೇಗೆ ಮಾತನಾಡಿಸುತ್ತಾರೆ.

ಗೌರವದಿಂದ ಮಾತನಾಡಿಸುತ್ತಾರೆ.

೧೩. ನಿಮಗೆ ಇಷ್ಟವಾದ ಹಬ್ಬದ ಆಚರಣೆಯನ್ನು ವಿವರಿಸಿ. ನಿಮಗೆ ಇಷ್ಟವಾದ ಕಥೆಯನ್ನು ಹೇಳಿ.

'ಯುಗಾದಿ' : ಹಿಂದೂ ಪುರಾಣಗಳ ಪ್ರಕಾರ ಯುಗಾದಿ ಭಾರತೀಯ ಹೊಸ ವರ್ಷದ ಪ್ರಾರಂಭ ಕಾಲ ವಸಂತ ಕಾಲ, ಗಿಡಮರಗಳ ಹೊಸತಾಗಿ ಜಿಗಿಯುತ್ತವೆ. ಯುಗಾದಿ ಬೇವು-ಬೆಲ್ಲದ ಹಬ್ಬವಾಗಿರುವುದರಿಂದ ಇದು ಕಷ್ಟ-ಸುಖದ ಪ್ರತೀಕವಾಗಿದೆ.

೧೪. ನಿಮಗೆ ತಿಳಿದಿರುವ ಎರಡು ಗಾದೆ ಮಾತುಗಳನ್ನು ವಿವರಿಸಿ? ಇಲ್ಲಿ ಕೊಟ್ಟಿರುವ ಗಾದೆಯನ್ನು ವಿವರಿಸಿ.

'ಹಂಡೆ ಬಾಯಿ ಕಟ್ಟಬಹುದು. ಮುಂಡೆ ಬಾಯಿ ಕಟ್ಟಲಾಗದು.'

ಹಂಡೆ ಬಾಯಿ ಚಿಕ್ಕದಿರುವುದರಿಂದ ಅದನ್ನು ಮುಚ್ಚಬಹುದು. ಈ ಮಾತಿನ ಪ್ರಕಾರ ಇಲ್ಲಿ ಮುಂಡೆ ಎಂದರೆ ಜನರನ್ನು ಸೂಚಿಸುತ್ತದೆ. ಈ ಗಾದೆಗೆ ಹೋಲಿಸುವಂತೆ ಇನ್ನೊಂದು ಮಾತಿದೆ. ಮಡಕೆಯ ತೂತನ್ನು ಮುಚ್ಚಬಹುದು. ಜನರ ಬಾಯಿ ಮುಚ್ಚಲಾಗದೆ.

'ಮಾತು ಬಲ್ಲವನಿಗೆ ಜಗಳವಿಲ್ಲ'.

# ಪ್ರಶ್ನಾವಳಿ

೧. **ವೈಯಕ್ತಿಕ ಮಾಹಿತಿ**

| | | |
|---|---|---|
| ಅ. ಹೆಸರು | : | ಪುಷ್ಪಾವತಿ ಎನ್. |
| ಆ. ವಿಳಾಸ | : | ಜವುಕು, ಹೊಸಪೇಟೆ ತಾಲೂಕು, ಬಳ್ಳಾರಿ ಜಿಲ್ಲೆ. |
| ಇ. ವಿದ್ಯಾರ್ಹತೆ | : | ಬಿ.ಎ. |
| ಈ. ಜಾತಿ | : | ನೇಕಾರ |
| ಉ. ವೃತ್ತಿ | ; | ವಿದ್ಯಾರ್ಥಿನಿ |
| ಊ. ವಯಸ್ಸು | : | ೨೦ |

೨. ನೀವು ಆಡುವ ಭಾಷೆ ಯಾವುದು?

ಕನ್ನಡ, ತೆಲುಗು

೩. ನಿಮ್ಮ ಮನೆತನದ ಹೆಸರೇನು? (ಕುಲನಾಮ) ಅದಕ್ಕೆ ಹಿನ್ನೆಲೆ ಏನಾದರೂ ಇದೆಯೇ?

ಪದ್ಮಶಾಲಿ : ಈ ಕುಲನಮ ನಮ್ಮ ಪೂರ್ವಜರ ಕಾಲದಿಂದಲೂ ರೂಢಿಯಲ್ಲಿದ್ದು, ಇಂದಿಗೂ ಜಾರಿಯಲ್ಲಿದೆ. ನೇಕಾರ ಜಾತಿಯಲ್ಲಿ ಬರುವ ನಮ್ಮ ಕುಲನಾಮ 'ಪದ್ಮಶಾಲಿ' ಯಾಗಿದೆ.

೪. ನಿಮ್ಮ ಮನೆತನದ ವೃತ್ತಿ ಯಾವುದು? ಅದರ ಪರಿಕರಗಳು ಯಾವುವು?

ವ್ಯವಸಾಯ, ಪರಿಕರಗಳು: ಎತ್ತಿನಬಂಡಿ, ಟ್ರ್ಯಾಕ್ಟರ್, ಇತ್ಯಾದಿ

೫. ನಿಮ್ಮ ಮನೆಯಲ್ಲಿ ಆಚರಿಸುವ ವಿಶೇಷ ಆಚರಣೆಗಳು ಯಾವುವು? ಯಾವುದಾದರೂ ಒಂದು ಆಚರಣೆಯನ್ನು ವಿವರಿಸಿ

–

೬. ನಿಮ್ಮ ಮನೆಯಲ್ಲಿ ಹೆಚ್ಚು ಮಾತನಾಡುವವರು ಯಾರು? ಏಕೆ?

ನಮ್ಮ ಮನೆಯಲ್ಲಿ ಹೆಚ್ಚು ಮಾತನಾಡುವವರು ಅಜ್ಜಿ. ಕಾರಣವನ್ನು ಹುಡುಕದೇ ನಿರಂತರವಾಗಿ ಮಾತಾಡ್ತಾನೆ ಇರುತ್ತಾರೆ.

೭. ನಿಮ್ಮ ಮನೆಯ ನಿರ್ಧಾರಗಳನ್ನು ತೆಗೆದುಕೊಳ್ಳುವವರು ಯಾರು? ತಂದೆ/ತಾಯಿ ಮತ್ತು ಯಾಕೆ ಅವನೇ/ಅವಳೇ ತೆಗೆದುಕೊಳ್ಳುತ್ತಾರೆ?

ನಿರ್ದಿಷ್ಟವಾಗಿ ಹೇಳೋದಾದ್ರೆ ತಂದೆ ಎಲ್ಲಾ ನಿರ್ಧಾರಗಳನ್ನು ಮಾಡುತ್ತಾರೆ. ಕಾರಣ ಹೆಚ್ಚು ಸಾಮಾನ್ಯ ಜ್ಞಾನ ಹೊಂದಿರುವುದರಿಂದಾಗಿ.

ಮುದ್ದು ಮುದ್ದಾದ ಮಾತಿನ ಕಣಿ

ಬುದ್ದಿ ವಂತಿ.......ಬಾಳ್ವೆ ಮಾಡತಾಳ

*        ಕೈಯಾಗ ಕೂಡಾ

ಸಣ್ಣನ್ನ ನಡಾ

ಬೈಲಿಯಾಕ ನಿಂತ್ರ

ಬಾಯಿ ಮುಚ್ಚುದಿಲ್ಲ ಗಡಾ.......

*        ತಲ್ಯಾಗ ಇಲ್ಲ ಕೂದ್ಲ

ಮೈಯಾಗಿಲ್ಲ ರಕ್ತ

ಬಾಯಾಗ ಮಾತ್ರ ವಟವಟಾ......

*        ಮಧುರ ಮಾತಕೇಳಿ

ಚದುರಿ ಮಬಸೋತ್ತಾಳ

ಇದರ್ಗೆ ನಿಂತ ಮಾತಾಡ್ತಳ.......

*        ಮ್ಯಾಲ ಮ್ಯಾಲ ಬೆಳಕs

ಒಳಗ ಮಾತ್ರ ಹುಳಕs

ಬಾಯಿ ಮಾತ್ರ ಬಲು ಹರಕs.......

ಪೂಜಾಯ ಭಟ್ಟ

ಜುಟ್ಟ ಹಿಡಿಯುತನಕ

ಮಾತಾಡೋದಿಲ್ಲ

ಬಳಕೆಯ ಭಾಷೆಯೊಳಗಡೆ ಕೆಲವೊಂದು ರೂಪಗಳನ್ನು ಮಹಿಳೆ ಬಳಸದಂತೆ ನಿಷೇಧಿಸಲಾಗಿದೆ.

**ಸಂಭೋಧನ ರೂಪ:** ಗಂಡನನ್ನು ಮಾವನನ್ನು ಸಂಭೊಧಿಸುವಾಗ ಮಹಿಳೆ ಬಹುವಚನದಿಂದಲೇ ಸಂಭೋದಿಸಬೇಕು. ಗಂಡನನ್ನು ಹೆಸರಿನಿಂದ ಸಂಭೋದಿಸುವ ಹಾಗಿಲ್ಲ. ಇದನ್ನೆಲ್ಲ ಮಹಿಳೆಗೆ ನಿಷೇಧಿಸಲಾಗಿದೆ.

ಕನ್ನಡದ ನಿರೂಪಣೆಗಳಲ್ಲಿ ಮಹಿಳೆಯರು ತಮ್ಮ ಗಂಡನನ್ನು ಹೆಸರಿಡಿದು ಸಂಭೋದಿಸುವಂತಿಲ್ಲ ಎಂಬ ನಿಷೇದದಿಂದ ಆಗುವಂತ ತೊಂದರೆಗಳನ್ನು ತಮ್ಮ ಒಡಪುಗಳಲ್ಲಿ ವ್ಯಕ್ತಪಡಿಸುವಂತಹ ಕ್ರಮ ಹೀಗಿವೆ. ಇವು

೧. ನತ್ತ ಇಟ್ಕೊಂಡ ನಗಲಿಹ್ಯಾಂಗ

ಹಾದಿ ಮ್ಯಾಲ ಕುತ್ತಾನ ಹಾಯಲಿ ಹ್ಯಾಂಗ

ಕಚೇರ್‍ಯಾಗ ಕುತ್ತಾನ ಕರೀಲಿ ಹ್ಯಾಂಗ

೨. ಸರಪಳಿ ಇಟ್ಟನಿ, ಸಾಗಲಿ ಹ್ಯಾಂಗ

ಒಡ್ಯಾಣ ಇಟ್ಟವನಿ, ಬಾಗಲಿ ಹ್ಯಾಂಗ

ನತ್ತ ಇಟ್ಟನಿ ನಗಲಿ ಹ್ಯಾಂಗ

ಹತ್ತ ಮಂದ್ಯಾಗ ಕುತ್ತವರನ

ಕರೀಲಿ ಹ್ಯಾಂಗ

ಕನ್ನಡ ಭಾಷೆ ಬಳಕೆ ಸಂದರ್ಭದಲ್ಲಿ ಹೆಣ್ಣಿಗಾಗಿಯೇ ಕೆಲವು ಪದಗಳಿವೆ. ಹೆಣ್ಣಿಗೆ ಮಾತ್ರ ಸೀಮಿತಗೊಂಡಿರುವಂತಹ ಪದಗಳು ಅವು. ಸಮಾಜ ವ್ಯವಸ್ಥೆ ಒಳಗಡೆ ಪುರುಷನಿಗೆ ಪ್ರತಿಯಾಗಿ ಅಂತಹ ಪದಗಳಿಲ್ಲ.

**ಉದಾಹರಣೆಗೆ:** ಶ್ರೀಮತಿ, ಕುಮಾರಿ, ಮುತ್ತೈದೆ, ವಿಧವೆ, ರಂಡೆ ಮುಂಡೆ, ಬಂಜೆ, ಗೃಹಿಣಿ, ಗಯ್ಯಾಳಿ, ಬಜಾರಿ, ಗಂಡುಬೀರಿ, ಸುವರ್ಣ ಇತ್ಯಾದಿ.

ಸಮಾಜವು ಗಂಡು ಹೆಣ್ಣುಗಳ ವಿವಾಹದ ಹಂತದಲ್ಲಿ ತೋರುವ ತಾರತಮ್ಯದ ಅಂಶಗಳು ವ್ಯಕ್ತಿಯ ಹೆಸರುಗಳನ್ನು ಹೇಳುವಾಗ ಆಡುವ ಭಾಷೆಯಲ್ಲಿ ಸ್ಪಷ್ಟವಾಗಿ ಗೋಚರವಾಗುತ್ತದೆ. ಮದುವೆಯಾದ ಹೆಣ್ಣನ್ನು ಶ್ರೀಮತಿ ಎಂದು ಮದುವೆಯಾಗದ ಹೆಣ್ಣನ್ನು ಕುಮಾರಿ ಎಂದು ಗುರುತಿಸಲಾಗುತ್ತದೆ. ಆದರೆ ಗಂಡಸಿಗೆ ವಿವಾಹವಾಗಲಿ ಬಿಡಲಿ ಅವನು ಯಾವಾಗಲು ಶ್ರೀ ಯಾಗಿಯೇ ಉಳಿದಿರುತ್ತಾನೆ. ಕುಮಾರ ಎಂಬ ರೂಪವಿದ್ದರೂ ಅದು ಅಷ್ಟು ಮಹತ್ವ ಪಡೆದಿಲ್ಲ. ಅದನ್ನು ಹೆಚ್ಚಿಗೆ ಬಳಸುವುದಿಲ್ಲ. ಅವನು ವಿವಾಹಿತ ಅಥವಾ ಅವಿವಾಹಿತ ಎಂದು ಗುರುತಿಸುವ ಪ್ರತ್ಯೇಕ ಪದ ಭಾಷೆಯಲ್ಲಿ ಇದುವರೆಗೂ ರಚನೆಯಾಗಿಯೇ ಇಲ್ಲ. ಆದರೆ ಹೆಣ್ಣು ವಿವಾಹವಾಗುವವರೆಗೂ ಕುಮಾರಿಯಾಗಿದ್ದು, ವಿವಾಹದ ನಂತರ ಶ್ರೀಮತಿಯಾಗುತ್ತಾಳೆ. ಒಂದು ಹಂತದವರೆಗೆ ಕುಮಾರಿಯಾಗಿದ್ದು ಕುಮಾರಿ ಎನ್ನುವ ಪದದ ಬಳಕೆ ಸರಿಯೇನೋ. ಆದರೆ ಒಂದು ಹಂತವನ್ನು ದಾಟಿದ ಮೇಲೆ ಈ ಪದವೇ ಹೆಣ್ಣಿಗೆ ಅಪಮಾನಕ್ಕೆ ಮಾನಸಿಕ ಹಿಂಸೆಗೆ ಕಾರಣವಾಗುತ್ತದೆ. ಹೇಗೆಂದರೆ ಹೆಣ್ಣು ಅವಿವಾಹಿತಳಾಗಿಯೇ ಇದ್ದರೆ ಆಕೆಯನ್ನು 'ಕುಮಾರಿ' ಎಂದು ಕರೆಯುವ ಮೂಲಕ ನಗೆಗೆ ಅಥವಾ ಹಾಸ್ಯಕ್ಕೆ ಗುರಿಮಾಡಲಾಗುತ್ತದೆ. ಹಾಗೆಯೇ 'ಋತುಮತಿ'ಯಾಗದ ಹುಡುಗಿಯನ್ನು 'ಸುವರ್ಣ' ಎಂದು ಗುರುತಿಸಲಾಗುತ್ತದೆ.

ಇಷ್ಟೆ ಅಲ್ಲದೇ ವಿವಾಹವಾದ ನಂತರ ಗಂಡ ಇರುವ ಹೆಣ್ಣಿಗೆ 'ಮುತ್ತೈದೆ' ಎಂದೂ ಗಂಡ ಸತ್ತ ಹೆಣ್ಣಿಗೆ ವಿಧವೆ, ರಂಡೆ, ಮುಂಡೆ ಎಂದೂ ಕರೆಯಲಾಗುತ್ತದೆ. ಹೆಂಡತಿ ಸತ್ತ ಗಂಡಸಿಗೆ 'ವಿಧುರ' ಎಂಬ ಪದವಿದ್ದರೂ ಅದರ ಬಳಕೆ ಕಡಿಮೆ. ಅವನು ಮತ್ತೊಂದು ವಿವಾಹವಾಗಲು ಯಾವುದೇ ನಿರ್ಬಂಧವಿಲ್ಲದ ಕಾರಣ ಅದು ಸಮಾಜದಲ್ಲಿ ಅಷ್ಟೊಂದು ಪರಿಣಾಮಕಾರಿಯಾಗಿ ಬಳಕೆಯಲ್ಲಿಲ್ಲ. ಹಾಗೆಯೇ ಮಕ್ಕಳಾಗದ ಹೆಣ್ಣಿಗೆ 'ಬಂಜೆ' ಎನ್ನುವ ಪದವಿದೆ. ಮಕ್ಕಳಾಗದಿರುವಿಕೆಗೆ ಹೆಣ್ಣು-ಗಂಡು ಯಾರು ಬೇಕಾದರೂ ಕಾರಣರಾಗಿರಬಹುದು. ಆದರೆ ಸಮಾಜ ಹೆಣ್ಣನ್ನು 'ಬಂಜೆ' ಎಂದು ಕರೆಯುವ ಮೂಲಕ ಮಕ್ಕಳಾಗದಿರುವಿಕೆಗೆ ಆಕೆಯನ್ನು ಮಾತ್ರ ಹೊಣೆಗಾರಳನ್ನಾಗಿಸುತ್ತದೆ. ಸಾರ್ವತ್ರಿಕವಾಗಿ ವ್ಯಕ್ತಪಡಿಸಲು ಮತ್ತು ಕೇಳುಗ ಆಡುಗರಿಬ್ಬರಿಗೂ ಮುಜುಗರ ಉಂಟು ಮಾಡುವ ಅನೇಕ ವಿಷಯಗಳು ಇವೆ. ಇವುಗಳ ನಿರ್ವಹಣೆಗೆ ಭಾಷೆಯಲ್ಲಿ ಸಾಮಾಜಿಕರು ನಿವಾರಣಾತ್ಮಕ ರೂಪಗಳ ಮೂಲಕ ಅಥವಾ ಬೇರೊಂದು ಭಾಷೆಯ ಪದಗಳ ಮೂಲಕ ಸಂದರ್ಭವನ್ನು ನಿರ್ವಹಿಸುತ್ತಾರೆ. ಉದಾಹರಣೆಗೆ: ಬಹುಪಾಲು ಲೈಂಗಿಕ ಆವಯವ ಕ್ರಿಯೆಗಳ ಹೆಸರುಗಳನ್ನು ಔಪಚಾರಿಕ ಬರೆಹ ಮಾತಿನ ಬಳಕೆಯಲ್ಲಾಗಲಿ ಸಾಮಾನ್ಯವಾಗಿ ಪರ್ಯಾಯ ಇಂಗ್ಲಿಷ್ ಅಥವಾ ಸಂಸ್ಕೃತ ರೂಪಗಳನ್ನು ಬಳಸುತ್ತಾರೆ. ಇವುಗಳ ಮೂಲಕ ನೇಡ್ನ ಪದಗಳನ್ನು ಬಯ್ಗುಳದ ಸಂದರ್ಭದಲ್ಲಿ ಮತ್ತು ಅನೌಪಚಾರಿಕ ಆಪ್ತ ವಲಯದ ಮಾತುಗಳಲ್ಲಿ ಬಳಸುತ್ತಾರೆ. ವಿವರಣಾತ್ಮಕ ಪರ್ಯಾಯ ರೂಪದ ಪದಗಳನ್ನು ಬಳಸುವುದರಿಂದ ಆ ಪದದ ಮೂಲ ರೂಪ, ವಿಷಯ ಬಳಕೆಯಿಂದ ಉಂಟಾಗುವ ಮುಜುಗರವನ್ನು ತಪ್ಪಿಸಲಾಗುತ್ತದೆ.

ಉದಾಹರಣೆಗೆ:

ಋತುಮತಿ ಮೈನೆರೆ, ದೊಡ್ಡವಳಾಗು, ವಯಸ್ಸಿಗೆ ಬಾ

ಮುಟ್ಟುಮೆನ್ಸಸ್, ಹೊರಗಾಗು, ರಜವಾಗು

ಮಲ-ವಿಸರ್ಜನೆಗೆ ಬಾತ್‌ರೂಮಿಗೆ ಹೋಗು, ಚೆಂಬುತಗೊಂಡ ಹೋಗು, ದೊಡ್ಡಿಗೆ ಹೋಗು ಇತ್ಯಾದಿ.

ಮೂತ್ರ ವಿಸರ್ಜನೆ-ಕಾಲಮಡಿಯಲು, ವಂದಕ್ಕೆ, ರೀಸಿಸ್‌ಗೆ

ಮೇಲಿನ ಉದಾಹರಣೆ ಸಮಾಜಕರಲ್ಲಿ ಸರ್ವಸಾಮಾನ್ಯವಾಗಿ ಬಳಕೆಯಲ್ಲಿದ್ದರೆ ಇವುಗಳನ್ನು ಮಹಿಳೆಯರೂ ಗುಟ್ಟಾಗಿ ಬಳಸುವುದು ಕಂಡುಬರುತ್ತದೆ.

ಇದೇ ವಿಚಾರವನ್ನು ಮಾತನಾಡುವಾಗಲು ಮಹಿಳೆ ಮೇಲುಧ್ವನಿಯಲ್ಲಿ ಇವುಗಳ ಬಗ್ಗೆ ಮಾತನಾಡುತ್ತಾಳೆ. ಗಂಡಸರ ಎದುರಿಗೆ ಮಾತನಾಡಿದರೆ ಅಥವಾ ಇವುಗಳ ಬಗ್ಗೆ ಯಾವುದೇ ಮುಜುಗರ ವ್ಯಕ್ತಪಡಿಸದೆ ಸಲೀಸಾಗಿ ಮಾತನಾಡಿದರೆ ಅಂತಹ ಮಹಿಳೆಯನ್ನು 'ಬಜಾರಿ' ಗಂಡುಬೀರಿ

ಎಂದು ಸಮಾಜ ಅವಳನ್ನು ನಿಂದಿಸುತ್ತದೆ. ಬೈಗುಳ ಸಂದರ್ಭದಲ್ಲಿ ಈ ಬಗೆಯ ಲೈಂಗಿಕ ವಿಚಾರ ಕುರಿತಾದ ರೀತಿಯ ಬೈಗುಳಗಳನ್ನು ಬಳಸುತ್ತಾಳೆ. ಲೈಂಗಿಕವಾದ ಬೈಗುಳಗಳನ್ನು ಬಳಸುವ ಮಹಿಳೆಯನ್ನು ಸಮಾಜ ಗುರುತಿಸುವುದು 'ಬಜಾರಿ', 'ಗೈಯ್ಯಾಳಿ' ಎಂದು ಇವುಗಳನ್ನು ಮಾತಾಡದ ರೀತಿಯಲ್ಲಿ ಮಹಿಳೆಯ ಮೇಲೆ ನಿರ್ಬಂಧಗಳನ್ನು ಹೇರಲಾಗಿದೆ. ಸಮಾಜ ವ್ಯವಸ್ಥೆಯು ತನ್ನ ಹಿತಾಸಕ್ತಿಗಾಗಿ ಭಾಷೆಯನ್ನು ನಿಯಂತ್ರಿಸುತ್ತದೆ. ಏಕೆಂದರೆ ಭಾಷೆಯನ್ನು ನಿಯಂತ್ರಿಸುವುದೆಂದರೆ ಜನರು ಏನನ್ನು ಕುರಿತು ಯೋಚಿಸಬಲ್ಲರೋ ಯಾವುದು ಅವರ ಯೋಚನೆಗೆ ನ್ಯಾಯ ಬದ್ದವಾದದ್ದೋ ಅದನ್ನು ನಿಯಂತ್ರಿಸುವುದು ಎಂದರ್ಥವಾಗುತ್ತದೆ.

ಮಹಿಳೆಗೆ ಯಾವುದನೆಲ್ಲ ನಿಷೇಧಿಷಿದೆ ಎಂಬುದನ್ನು ಕೆಳಗಿನ ಜನಪದ ಗೀತೆಯಲ್ಲಿ ನಿರ್ದೇಶಿಸಿರುವುದು ಕಂಡುಬರುತ್ತದೆ.

**ಉದಾಹರಣೆಗೆ:** ಬಾಳಿಪಟ್ಟೇಯ ಸೇರಿ ಬಾಳಹೊತ್ತ್ ಉಡ್ ಬ್ಯಾಡ
ಬಾಗುಲಿ ಚಾಚಿ ನಿಲಬ್ಯಾಡ
ಬಾಗುಲಿ ಚಾಚಿ ನಿಲಬ್ಯಡ ತಂಗ್ಯಮ್ಮ
ಬಾವನಿಗೆ ಉತ್ರುವೇ ಕೊಡ್ ಬ್ಯಾಡ
ಅಕ್ಕಿಯ ಕಲ್ಲೆಕ್ಕಿ ಅಂಗಳದಲ್ ಕೆಡಿಬ್ಯಾಡ
ಮಾಯಿಗುತ್ತರವ ಕೊಡಬ್ಯಾಡ್"

ಸಮಾಜ ಮಹಿಳೆಯ ನಡವಳಿಕೆ ಹೇಗಿರಬೇಕು ಹೇಗಿರಬಾರದು ಎಂಬುದನ್ನು ನಿರ್ದೇಶಿಸುತ್ತದೆ. ಅವಳ ನಡವಳಿಕೆಗಳಲ್ಲಿ ಯಾವುದು ಇರಬಾರದು ಎಂದು ಸಲಹೆ ನೀಡಿ ಕಾಲದಿಂದ ಕಾಲಕ್ಕೆ ಇದನ್ನು ಮುಂದುವರೆಸಿಕೊಂಡು ಬರುವುದನ್ನು ಗಮನಿಸಬಹುದಾಗಿದೆ.

ಸಾರ್ವಜನಿಕ ಮತ್ತು ಆರ್ಥಿಕ ವಲಯಗಳಲ್ಲಿ ಹೆಣ್ಣಿನ ಸ್ಥಾನ ಇಂದು ಮೇಲೇರಿದೆ. ಹಿಂದೆ ಗಂಡಸರದೆಂದು ಭಾವಿಸಲಾದ ಭಾಷಿಕ ವಲಯಗಳಲ್ಲಿ ಇಂದು ಹೆಣ್ಣಿನ ಹಾಜರಿ ಕಾಣುತ್ತದೆ. ಕೌಟುಂಬಿಕವಾಗಿ ಹೆಣ್ಣಿನ ಪಾತ್ರದ ಬದಲಾವಣೆಯಲ್ಲಿ ಅವಿಭಕ್ತ ಕುಟುಂಬ ವಿಭಕ್ತ ಕುಟುಂಬಗಳ ವಿಘಟನೆಗೊಂಡದ್ದು ಗಮನಾರ್ಹ ಸಂಗತಿಯಾಗಿದೆ. ವಿಭಕ್ತ ಕುಟುಂಬಗಳಿಂದಾಗಿ ಹೆಣ್ಣು ಎದುರು ಬಂದು ಮಾತಾಡಲೇಬೇಕಾದ ಪರಿಸ್ಥಿತಿ ನಿರ್ಮಾಣವಾಗಿದೆ. ಇದು ಪರೋಕ್ಷವಾಗಿ ಹೆಣ್ಣು ಮುಂಬರಲು ಕಾರಣವಾಗಿದೆ. ಆಧುನಿಕ ಸಂದರ್ಭಗಳು ಮತ್ತು ಶಿಕ್ಷಣದಿಂದಾಗಿ ಹೆಣ್ಣಿಗೆ ಸಮಾನ ಅವಕಾಶಗಳು ಲಭ್ಯವಾಗಿದೆ. ಇದರಿಂದ ಸಾಂಪ್ರದಾಯಿಕವಾದ ಭಾಷಿಕ ವಲಯದ ಗಡಿಗಳು ಸಡಿಲವಾಗುತ್ತಿವೆ. ಹಿಂದೆ ಹೆಣ್ಣು ಮಕ್ಕಳಿಗೆ ನಿಷೇಧವಾಗಿದ್ದ ಅನೇಕ ಸಂಗತಿಗಳು ಇಂದು ಕಾಣುವುದಿಲ್ಲ. ಹೆಂಗಸರು

ಇಂದು ಸಾರ್ವಜನಿಕ ವಲಯಗಳಲ್ಲಿ ಗಂಡನ ಹೆಸರು ಹೇಳಲು ಆರಂಭಿಸಿದ್ದಾರೆ. ಆದರೆ ಮನೆಯೊಳಗೆ ಹೆಸರು ಹೇಳಿ ಕರೆಯುವುದಿಲ್ಲ. ಆದರೆ ಸಂದರ್ಭ ಬಂದಾಗ ಬೇರೆಯವರಿಗೆ ತಿಳಿಸಲು ಹಿಂಜರಿಯುವುದಿಲ್ಲ. ಆಧುನಿಕ ಸಂದರ್ಭದಲ್ಲಿ ಕಛೇರಿ ಶಾಲೆ ಚುನಾವಣೆಯ ಸಂದರ್ಭಗಳಲ್ಲಿ ಗಂಡನ ಹೆಸರು ತಿಳಿಸಲೇಬೇಕಾದ ಸಂದರ್ಭಗಳು ಹೆಚ್ಚಾಗಿದೆ. ಈಗ ಮೊದಲಿದ್ದ ನಿಷೇಧ ಅಳಿದು ಹೋಗಿದೆ.

ಜನಪದದಲ್ಲಿ ಮಹಿಳೆಯರ ಕೆಲವು ನಿರೂಪಣೆಗಳನ್ನು ಗಮನಿಸಿದರೆ ಆ ಮಾತುಗಳು ನಿಷೇಧಿಸಿರುವ ಸಮಾಜಕ್ಕೆ ಮೀರಿ ಮಾತಾಡುತ್ತಿರುವ ಮಹಿಳೆಯೊಬ್ಬಳು ಜನಪದ ತ್ರಿಪದಿಯೊಂದರಲ್ಲಿ ಕಂಡುಬಂದಿದೆ. ಉದಾಹರಣೆಗೆ

"ಮಾತ್ಕ್ಗಿ ನಿನ್ ಮನೆಬೇಯ್ತದೆ ಅಂದ್ರೆ

ನಿಂತ್ ಬೇಯ್ಲಿ, ನಿಧಾನುಕ್ ಬೇಯ್ಲಿ

ಕೊಂತ್ ಬೇಯ್ಲಿ ಕುಮುಸ್ಕೊಂಡ್‌ಬೇಯಿಲ್ಲಿ

ಮಾತೊಂದುಂಟಾದ್ರೆ ಮರುದ್ ತಳುದಲ್

ಆಟ್ಕೊಂಡ್ ಉಣ್ತೇನಿ ಅಂದ್ಲಂತೆ."

ಮಹಿಳೆಯು ಸಮಾಜ ನಿಷೇಧಿಸಿರುವ ಮಾತಾಡದಂತೆ. ಕಟ್ಟಿರುವ ಅವಳ ಬಾಯಿಯನ್ನು ಯಾವುದೋ ಸಂದರ್ಭದಲ್ಲಿ ಬಿಚ್ಚಿದ್ದರೆ ಅದನ್ನು ಹೀಯಾಳಿಸುವ ರೀತಿಯ ನಿರೂಪಣೆಯಾಗಿ ಬರುತ್ತದೆ.

ಈ ಮಾತ್ಗತಿಯ ಮಾತು ಮೌಲ್ಯವಿರುತ್ತದೊ ಅಥವಾ ಬೇರೆಯಾದೋ ಎಂಬುದು ಸ್ಪಷ್ಟತೆಯಿಲ್ಲ. ಏಕೆಂದರೆ ಶತಮಾನಗಳಿಂದ ಮುಚ್ಚಿದ ಬಾಯಿಯನ್ನೂ ಎಲ್ಲೋ ಮಹಿಳೆಯರು ಒಟ್ಟಿಗೆ ಸೇರಿಕೊಂಡಾಗ ಮಾತಾಡುತ್ತಿರುವಂತಹ ಸ್ಥಿತಿಯಾಗಿದೆ.

### ೪.೩. ಮುಕ್ತತೆ ಮತ್ತು ಸ್ವತಂತ್ರತೆಯ ನೆಲೆಗಳು

ಮಹಿಳೆಯರು ಸ್ವತಂತ್ರ್ಯಕ್ಕೆ ಅರ್ಹರಲ್ಲ ಎಂಬ ಧರ್ಮಶಾಸ್ತ್ರವನ್ನು ಕಟ್ಟುನಿಟ್ಟಾಗಿ ಜಾರಿಗೆ ತರುತ್ತಾ ಬಂದ ವಿಲಕ್ಷಣವಾದ ಪರಂಪರೆ ಈ ಸಮಾಜದ್ದು. ಆದ್ದರಿಂದಲೇ ವೈದಿಕರನ್ನು ಒಳಗೊಂಡಂತೆ ಎಲ್ಲಾ ಆಳುವ ಸಮಾಜ ಹೆಣ್ಣಿಗೆ ಸಂಕೋಲೆಗಳನ್ನು ತೊಡಿಸಿವೆ. ಅವಳು ಯಾವ ಕ್ಷೇತ್ರದಲ್ಲೂ ನಿರ್ಣಯದ ಅಧಿಕಾರ ಪಡೆದಿಲ್ಲ. ಅವಳ ದೇಹದ ಮೇಲೆ ಮನಸ್ಸಿನ ಮೇಲೆ ಪುರುಷನು ಸರ್ವಾಧಿಕಾರ ಸ್ಥಾಪಿಸಿದ್ದಾನೆ. ಅವಳ ರೆಕ್ಕೆ ಪುಕ್ಕಗಳನ್ನು ಕತ್ತರಿಸಲಾಗಿದೆ. ಹೀಗಾದ ನಂತರ ಸಾಮುದಾಯಿಕ ವ್ಯವಹಾರದ ಪ್ರತಿನಿಧಿತ್ವವೆಲ್ಲ ಕುಟುಂಬಕ್ಕೆ ಪ್ರಮುಖನಾದ ಪುರುಷನಿಗೆ ದೊರೆಯುತ್ತದೆ.

ಜಾತಿ–ಪಂಚಾಯತಿಗಳಲ್ಲಿ ವಿವಾಹವನ್ನು ನಿಶ್ಚಯಿಸುವ ಅಥವಾ ವಿಚ್ಛೇದಿಸುವ ಇಲ್ಲವೇ ಸಮಾಜದ ವ್ಯವಹಾರಗಳಲ್ಲಿ ಸಂರಕ್ಷಣೆಯ ಸಂಗತಿಗಳಲ್ಲಿ ಪುರುಷರೇ ನಿರ್ಣಯಗಳನ್ನು ತೆಗೆದುಕೊಳ್ಳುತ್ತಾರೆ. ಕುಟುಂಬದ ಈ ರೀತಿಯ ಕಟ್ಟಳೆಯ ಮೂಲಕ ಸಾಮಾಜಿಕ ವ್ಯವಹಾರಗಳಲ್ಲಿ ಮಹಿಳೆಗೆ ಸ್ಥಾನವೇ ಇಲ್ಲವಾಯಿತು.

ಹೀಗಿದ್ದಾಗ ಮಹಿಳೆ ತನಗೆ ಅಗತ್ಯವಾಗಿರುವಂತಹ ಮುಕ್ತ ವಾತಾವರಣವನ್ನು ತನಗೇ ತಾನೆ ಸೃಷ್ಟಿಸಿಕೊಂಡಿದ್ದಾಳೆ. ಶತಶತಮಾನಗಳಿಂದ ತನ್ನ ಒಳಗಡೆ ಹುದುಗಿರುವಂತಹ ಎಷ್ಟು ವಿಚಾರಗಳನ್ನು ಹೊರಗಿಡುವಂತಹ ಅವಕಾಶವನ್ನು ತನಗೆ ತಾನೆ ಕಲ್ಪಿಸಿಕೊಂಡಿದ್ದಾಳೆ.

ಮಹಿಳೆ ತಾನು ಕಲ್ಪಿಸಿಕೊಂಡಿರುವ ಅವಕಾಶದ ಮೂಲಕ ಸಮಾಜವನ್ನು ವಿಮರ್ಶಿಸುತ್ತಾಳೆ ಮತ್ತು ತನ್ನ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಾಳೆ. ಶತಮಾನಗಳಿಂದಲೂ ತುಳಿತಕ್ಕೆ ಒಳಪಡಿಸಿರುವ ಪುರುಷ ವ್ಯವಸ್ಥೆಗೆ ಇದು ಪ್ರತಿಕ್ರಿಯೆಯಾಗಿರುತ್ತದೆ. ಮಹಿಳೆ ತಾನು ಸೃಷ್ಟಿಸಿಕೊಳ್ಳುವ ಈ ಮುಕ್ತ ವಾತಾವರಣ ನೆಲೆಗಳು ಮುಖ್ಯವಾಗಿ ಜಾನಪದೀಯ ರಚನೆಯೊಳಗಡೆ ಕಂಡುಬರುತ್ತದೆ. ಮಹಿಳೆಯರು ಸಭೆ ಸಮಾರಂಭಗಳಲ್ಲಿ ಹಾಡುವ ಜನಪದ ಗೀತೆಗಳಲ್ಲಿ ಗಂಡನ ಹೆಸರನ್ನು ಹೇಳುವ ಸಂದರ್ಭದ ಒಡಪುಗಳಲ್ಲಿ ಮಹಿಳೆ ತನಗೆ ಮುಕ್ತವಾದ ಭಾಷಾ ಬಳಕೆಗೆ ಸ್ವಾತಂತ್ರ್ಯವನ್ನು ಪಡೆದುಕೊಳುತ್ತಾಳೆ.

**ಉದಾಹರಣೆಗೆ:** “ಅಕ್ಕಿಚೀಲ ಮ್ಯಾಲ ಕುಂತ

ಲೆಕ್ಕಾ ಮಾಡ್ತಾನ

ಲೆಕ್ಕ ಬರದಾಗಾನಾ

ಅಕ್ಕನ್ನ ಕರೀತಾನ”

“ಇನೂರ ರೂಪಾಯಿ ಬುಕ್ಕ

ಮುನ್ನೂರ ರೂಪಾಯಿ ಪೋಷಾಕ

ಆರೇಳ ಸಲ ನಾಪಾಸಾಗಿ ಇನ್ನು

ಕಲಿತೇ ನಂತಾನ .........”

“ದುಡ* ಬಿಚ್ಚಾಂವಲ್ಲಾದೊಪಾಹಾಕಾವಲ್ಲಾ

ಮಂತ್ರಾ ಮಾತ್ರ ಮಣಾರ ಹೆತ್ತಾನ.......”

“ಮಾತಿನ್ಯಾಗ ಸೋಲಾವರಲ್ಲ

ರೀತಿ ಬಿಟ್ಟ ನಡ್ಯಾವರಲ್ಲ

ಪಿರತಿ ಒಂದಿದ್ದರ

ಅಂತಾವರ ಮತ್ಯಾರಿಲ್ಲ......."

"ಉಪ್ಪಿಟ್ಟಿಗೆ ಹಾಕೊದು ಉಪ್ಪ

ಕಾಪಿ ಕುಡೋದ ಕಪ್ಪ

ಮುಪ್ಪಿನಾವನ್ನ ಮಾಡಿಕೊಳ್ಳೋದು ಬ್ಹಾಳ ತಪ್ಪ......"

"ದಮ್ಮ ಅಕ್ಕಿ ಉಣ್ಣವಲ್ಲ

ಸಣ್ಣ ಅಕ್ಕಿ ತರವಲ್ಲ

ಮನ್ಯಾಗ ಇರವಲ್ಲ, ಮಾತ ಕೇಳವಲ್ಲ

ಇದ್ದಾಂತಾದ್ದ ನೀಡಾಣಾ ಎದ್ದೆದ್ದ ಹೊಕ್ಕಾನ...."

"ಕಸಕಸಿ ಉಂಡಿ, ಕಾಸಿದ ತುಪ್ಪ

ಕಾಸ್ಯಾಡಿ ಮಾತಿಗೆ ವಾಸ್ಯಾಡಿ

ಹೋಗತಾನ..."

ಮಹಿಳೆ ಗಂಡನ ಹೆಸರನ್ನು ಸಭೆ ಸಮಾರಂಭಗಳಲ್ಲಿ ಹೇಳುವಂತಹ ಸಂದರ್ಭಗಳಲ್ಲಿ ಆಕೆಯ ಗಂಡನ ಅಸಮರ್ಥತನ ಅವನ ಅವಗುಣಗಳು ಗಂಡನ ದಡ್ಡನ ಹೀಗೆ ವಿಚಾರಗಳನ್ನು ಮಹಿಳೆ ಒಡಪುಕಟ್ಟಿ ಹೇಳುತ್ತಾಳೆ. ಮತ್ತೆ ವಯಸ್ಸಾಗಿರುವವನನ್ನು ಅವಳಿಗೆ ಮದುವೆ ಮಾಡಿಸಿದರೆ ಅದನ್ನು ತಪ್ಪು ಎಂದು ವಿವರಿಸುತ್ತಾಳೆ. ಮಹಿಳೆಗೆ ಮುಕ್ತ ಸ್ವತಂತ್ರ ವಾತಾವರಣ ಇರೋದು ಸಮಾನ ವಯಸ್ಸಿನವರ ಮಧ್ಯೆಯಲ್ಲಿ ಮಹಿಳೆಗೆ ಎಲ್ಲಾ ವಲಯದಲ್ಲು ಬಾಯಿ ಮುಚ್ಚಿಸಲಾಗುತ್ತದೆ. ಆದರೆ ಮಹಿಳೆ ಸಮಾನ ಮನಸ್ಥಿತಿಯವರಲ್ಲಿ ಮುಕ್ತ ವಾತಾವರಣ ಇರೋದರಿಂದಲೇ ಅವಳು ತನ್ನ ಮನದಾಳದ ಮಾತುಗಳನ್ನು ಹಂಚಿಕೊಳ್ಳುತ್ತಾರೆ. ಗೆಳೆತನದ ಸಂಭಾಷಣೆಯಲ್ಲಿ ಯಾವುದೇ ನಿರ್ಬಂಧ ಇರೋದಿಲ್ಲ. ಪರಸ್ಪರ ಮಹಿಳೆಯರು ತಮ್ಮ ನೋವು ಕಷ್ಟಗಳನ್ನು ಹಂಚಿಕೊಳ್ಳುತ್ತಾಳೆ. ಈ ಸಂದರ್ಭವನ್ನು ಪ್ರತಿನಿಧಿಸುವ ಒಂದು ಉದಾಹರಣೆಯು ಜನಪದ ಹಾಡುಗಳಲ್ಲಿ ಸಿಗುತ್ತದೆ. ತಂದೆ-ತಾಯಿ ಅಕ್ಕ ಇತ್ಯಾದಿ ಸಂಬಂಧಗಳ ಒಳಗಡೆ ಹೇಳಿಕೊಳ್ಳಲಾರದ ವಿಷಯವನ್ನು ಗೆಳತಿಯರ ಮುಂದೆ ಹೇಳುವುದು ಜನಪದ ಗೀತೆ "ಕೆರೆಗೆ ಹಾರ" ಜನಪದ ಕಥನ ಗೀತೆಯಲ್ಲಿ ಸಿಗುತ್ತದೆ.

ಭಾಗೀರತಿಯನ್ನು ಕೆರೆಗೆ ಹಾರವಾಗಿ ಮಾಡಬೇಕು ಎಂದು ನಿರ್ಧರಿಸಿರುವಂತಹ ವಿಚಾರ ಭಾಗೀರತಿಗೆ ತಿಳಿದಿರುತ್ತದೆ. ಅಂತಹ ಸಂದರ್ಭದಲ್ಲಿ ಅವಳು ತವರುಮನೆಗೆ ಬಂದು ತನ್ನ ಕಷ್ಟವನ್ನು ಹೇಳಿಕೊಳ್ಳುವ ಸಂದರ್ಭ ಕೆಳಗಿನಂತಿವೆ.

"ಅತ್ತೆವ್ವಾ ನಾ ನಮ್ಮ ತವರುಮನಿಗೆ ಹೋಗಲೇನು!"

"ಸರ್ರನೆ ಹೋಗವ್ವಾ ಭರ್ರನೆ ಬಾರವ್ವ"

"ಸಣ್ಣ ಸೊಸಿ ಭಾಗಿರತಿ ತಮರುಮನೆಗೆ ಹೋದಾಳು

ಮನೆಮಂದ ಹೋಗುದಕ ಅವರಪ್ಪ ಬಂದಾನು"

"ಎಂದಿಲ್ಲದ ಭಾಗಿರತಿ ಇಂದ್ಯಾಕ ಬಂದೆವ್ವ?

ಬಾಡಿದ ಮಾರ್‍ಯಕ ಕಣ್ಣಾಗ ನೀರ್‍ಯಾಕ?"

"ನಮ್ಮೂವ ನಮ್ಮತ್ತೆ ಬ್ಯಾರೆ ಇಡುತಾರಂತೆ,"

"ಇಟ್ಟರೆ ಇಡಲೇಳು ಹೊಲಮನಿ ಕೊಡತೇನು"

"ಹೊಲಮನಿ ಒಯ್ದು ಹೊಳಿ ದಂಡ್ಯಾಗ್ಯಾಕಪ್ಪ"

"ಅತತ್ತ ಹೋಗುತಲಿ ಅವರವ್ವ ಬಂದಾಳು

"ಎಂದಿಲ್ಲದ ಭಾಗೀರತಿ ಇಂದ್ಯಾಕಳುತಾ ಬಂದೆ?"

"ನಮ್ಮತ್ತೆ ನಮ್ಮಾವ ಬ್ಯಾರೆ ಇಡುತಾರಂತೆ"

"ಇಟ್ಟರೆ ಇಡಲೇಳು ವಾಲಿಜೋಡು ಕೊಡುತೇನೆ"

"ವಾಲಿಯ ಜೊಡೋಲಾಯ್ದು ಒಲಿಯಾಗ ಹಾಕವ್ವ"

ಮುಂದಕತ್ತ ಹೋಗುತಲೆ ಅವರಕ್ಕ ಬಂದಳು

"ಎಂದಿಲ್ಲದ ಭಾಗೀರತಿ ಇಂದ್ಯಾಕ ಈ ದುಕ್ಕ?"

"ನಮ್ಮತ್ತೆ ನಮ್ಮಾವ ಬ್ಯಾರೆ ಇಡುತಾರಂತೆ"

"ಇಟ್ಟರೆ ಇಡಲೇಳ ಮಕ್ಕಳ ಜೋಡಿಗೆ ಕಳವತೇನೆ"

"ಮಕ್ಕಳಿಲ್ಲದ್ದರೇನಕ್ಕ ದುಕ್ಕ ಕಳದಾವೇನಾ?"

"ಸಣ್ಣಸೂಸಿ ಭಾಗೀರತಿ ತವರುಮನೆಯ ಬಿಟ್ಟು

ತಮರ ಮನೆಯ ಬಿಟ್ಟು ಗೆಣತಿ ಮನೆಗೆ ನಡೆದಳು

ತಲಬಾಗಿಲದಾಗ ಗೆಳತಿನ್ನ ಕಂಡಳು

"ಎಂದಿಲ್ಲದ ಭಾಗೀರತಿ ಇಂದ್ಯಾಕ ಈ ಅಳುವು"

ಅಂಜಿ "ಹೇಳಲಿ ಗೆಳತಿ"ಅಳುಕಿ "ಹೇಳಿಲಿ ಗೆಳತಿ?"

"ಅಂಜಬ್ಯಾಡ ಗೆಳತಿ ಅಳುಕಬ್ಯಾಡ ಗೆಳತಿ"

"ನಮ್ಮತ್ತೆ ನಮ್ಮಾವ ಕೆರೆಗ್ಹಾರಕೊಡತಾರಂತೆ"

"ಕೊಟ್ಟರೆ ಕೊಡಲೇಳು ಇಟ್ಹಾಂಗ ಇರಬೇಕು!

ಸರ್ರನೆ ಹೋದಳು ಭರ್ರನೆ ಬಂದಳು"

ಈ ಇಡೀ ಸಂದರ್ಭದಲ್ಲಿ ಮಹಿಳೆ ತನ್ನ ನೋವು ಸಂಕಷ್ಟವನ್ನು ಸಾಂಕೇತಿಕವಾಗಿ ತಂದೆ-ತಾಯಿ ಅಕ್ಕನಿಗೆ ವಿವರಿಸುತ್ತಾಳಾದರೂ, ನೇರವಾಗಿ ಅವಳು ಅವರ ಹತ್ತಿರ ಹೇಳಿಕೊಳ್ಳುವುದಿಲ್ಲ. ಅವಳಿಗೆ ಮುಕ್ತವಾಗಿ ಸ್ವತಂತ್ರವಾಗಿ ಹೇಳಿಕೊಳ್ಳುವುದಿಲ್ಲ. ಮಾತನಾಡುವಂತಹ ವಾತಾವರಣ ಎಂದರೆ ತನ್ನ ಸಮವಯಸ್ಸಿನ ಗೆಳೆತನದಲ್ಲೇ ಬಹುಷಃ ಈ ಕಾರಣಕ್ಕಾಗಿಯೆ ಇರಬೇಕು. ಮಹಿಳೆ ತನ್ನ ಮಾತುಗಳಿಗೆ ಮುಕ್ತ ಅವಕಾಶ ಇರುವಂತಹದು ಸಮವಯಸ್ಕನಲ್ಲಿಯೇ. ಹಾಗಾಗಿ ಮಹಿಳೆಯರು ಒಂದೆಡೆ ಸೇರಿದಾಗ ಹೆಚ್ಚು ಮಾತನಾಡುವುದು ಇರಬಹುದು. ಆದರೆ ಸಮಾಜ ಇದಕ್ಕೂ ಹರಟೆ ಎಂಬ ಅಪವಾದವೆಂಬಂತೆ ಅದನ್ನು ಒದಗದಂತೆ ನೋಡಿಕೊಳ್ಳುತ್ತಿದೆ. ಗೆಳತಿಯ ಬಳಿಯಲ್ಲಿ ಮಾತಾಡಿದ ತಕ್ಷಣ ತನ್ನ ಸಮಸ್ಯೆ ಪರಿಹಾರ ಆಗೊಲ್ಲ ಎಂದು ತಿಳಿದರೂ ಅವಳಿಗೆ ದೊರೆತಿರೋದು ಮುಕ್ತತೆಯ, ಸ್ವತಂತ್ರತೆಯ ವಲಯ ಆದೊಂದೆಯಾಗಿದೆ. ಇನ್ನು ಜನಪದ ಕಥೆಗಳ ವಿಷಯಕ್ಕೆ ಬಂದರೆ ಶತಮಾನಗಳಿಂದ ಅಜ್ಜಿ ಕಥೆಗಳಿವೆ, ವಿನಹಃ 'ಅಜ್ಜನ ಕಥೆಗಳಿಲ್ಲ'. ಮಹಿಳೆ ತನ್ನ ವಿಚಾರವನ್ನು ಹಂಚಿಕೊಳ್ಳಲು ಸಮಾಜದಲ್ಲಿ ಅವಕಾಶ ಇಲ್ಲದಂತಹ ಸಂದರ್ಭದಲ್ಲಿ ಈ ಕಥೆಗಳು ಬಹುಮಟ್ಟಿಗೆ ಹುಟ್ಟಿಕೊಂಡಿರಬೇಕು.

ಜೊತೆಗೆ ದೈನಂದಿನ ಬದುಕಲ್ಲಿ ಮಾತಿನ ಮೇಲೆ ನಿರ್ಬಂಧ ಇದ್ದ ಸಮುದಾಯದಲ್ಲಿ ಜನಪದ ಸಾಹಿತ್ಯ ಹೆಣ್ಣಿನೊಂದಿಗೆ ಬೆಸೆದುಕೊಂಡಿರುವುದು ಗಮನಿಸಬೇಕಾದ ಸಂಗತಿ. ಜನಪದ ಕಥೆಗಳು ಹೆಣ್ಣಿನ ಹೆಸರಿನಲ್ಲಿ ರಿಜಿಸ್ಟರ್ ಆಗುವುದನ್ನು ಗುರುತಿಸುತ್ತಾರೆ.[೧೦] ವಾಸ್ತವದ ಬದುಕಿನ ಆಕೆಯ ಪಾಡು ಮೌನ ಮಾತು ಪಡೆಯುವುದು ಜನಪದ ಕಥೆಗಳಲ್ಲಿ.

ಹೀಗಾಗಿ ಜನಪದ ಕಥೆಗಳು ಹಾಡುಗಳು ಮುಖ್ಯವಾಗಿ ಮಹಿಳೆಯ ಅಭಿವ್ಯಕ್ತಿಯ ದಾರಿಗಳಾಗಿವೆ. ಅವರು ಕ್ಷೇತ್ರಕಾರ್ಯಕ್ಕೆ ಹೋದ ಸಂದರ್ಭದಲ್ಲಿ ಮಹಿಳೆಯೊಬ್ಬಳ ಹೇಳಿದ ಮಾತು "ದಿನಾಲು ಕತೆ ಹೇಳು ಅಂಥ ಮಕ್ಕಳು ಹಟಮಾಡುತ್ತವೆ. ನನಗೂ ಕತೆ ಹೇಳ್ದೇ ಮಲಗಿದರೆ ನಿದ್ದೆ ಹತ್ತಲ್ಲ" ಎಂದು ಹೇಳುತ್ತಾಳೆ. ಮಹಿಳೆ ಕಥೆ ಹೇಳುವ ಉದ್ದೇಶ ತನ್ನ ಇಡೀ ದೈನಂದಿನ ದಿನಗಳಲ್ಲಿ ಸಹಿಸಿದ ಕಷ್ಟ ನೋವು ಮೌನದ ಹಿಂದಿನ ಆಕ್ರೋಶ ಎಲ್ಲವನ್ನು ಮಕ್ಕಳಿಗೆ ಮೊಮಕ್ಕಳಿಗೆ ಕಥೆ ಹೇಳುವುದರ ಮೂಲಕ ಅವುಗಳ ಅಭಿವ್ಯಕ್ತಿಸುತ್ತಾರೆ.

ಮಹಿಳೆ ತನ್ನ ಅಭಿವ್ಯಕ್ತಿ ಸ್ವತಂತ್ರಕ್ಕಾಗಿ ಈ ಬಗೆಯ ಮುಕ್ತ ವಾತಾವರಣವನ್ನು ಒದಗಿಸಿಕೊಂಡಿದ್ದಾಳೆ. ತಾಯಿ ತನ್ನ ಮಕ್ಕಳೊಟ್ಟಿಗೆ ಮಾತಾಡಲು ಮುಕ್ತ ಅವಕಾಶವಿದೆ. ಅಂದರೆ ಒಂದು ಹಂತದ ಒಂದು ವಯಸ್ಸಿನ ಮಕ್ಕಳ ಜೊತೆಗಷ್ಟೆ. ಪ್ರಾಯಕ್ಕೆ ಬಂದ ಮಕ್ಕಳು ತಾಯಿ ಮಾತನ್ನು ಕೇಳುವುದಿರಲಿ ತಾಯಿ ವಿಚಾರವನ್ನು ಲೆಕ್ಕಿಸುವುದಿಲ್ಲ. ಅವಳನ್ನು ನಿನಗೆ ಗೊತ್ತಾಗೊಲ್ಲ, ಸುಮ್ಮನಿರಮ್ಮ ಎಂದು ಬಾಯಿ ಮುಚ್ಚಿಸುತ್ತಾರೆ. ಜೀವನದ ಪ್ರಮುಖ ಘಟ್ಟಗಳಾದ ಬಾಲ್ಯ ಯೌವ್ವನ ಮದುವೆ ಸಾವುಗಳಲ್ಲಿ ಮತ್ತು ಗುಂಪಿನ ಅನೇಕ ಪ್ರಮುಖ ಚಟುವಟಿಕೆಗಳಲ್ಲಿಯೂ ಜನಪದ ಗೀತೆಗಳನ್ನು ಹಾಡಲಾಗುತ್ತದೆ. ಜೋಗುಳದ ಹಾಡುಗಳು, ಒಸಗೆಯರ ಹಾಡುಗಳು ಮದುವೆಯ ಹಾಡುಗಳು ಮರಣದ ಸಮಯದಲ್ಲಿ ಹಾಡುವ, ಹೊಗಳುವ ಪದಗಳು ಹೀಗೆ ಜೀವನದ ವಿವಿಧ ಘಟ್ಟಗಳಿಗೆ ಸಂಬಂಧಿಸಿದ ಹಾಡುಗಳಿವೆ.

ಈ ಹಾಡುಗಳು ಸಾಮಾನ್ಯವಾಗಿ ಹೆಂಗಸರ ಹಾಡುಗಳೆಂದೇ ಪ್ರಸಿದ್ಧವಾಗಿವೆ. ಜೀವನದುದ್ದಕ್ಕು ನೋವು ತಿರಸ್ಕಾರ ಮತ್ತು ಅಪಮಾನಗಳಿಗೆ ಬಲಿಯಾದ ಸ್ತ್ರೀ ಹೃದಯವನ್ನು ಕುರಿತವಾಗಿವೆ. ಕೆಲವು ಗೀತೆಗಳಲ್ಲಿ ಅಪರಿಚಿತರೊಡನೆ ಕಾಲ ನೂಕುವ ಹೆಣ್ಣಿನ ಭಾವನಾತ್ಮಕ ಪ್ರತಿಕ್ರಿಯೆಯಿದ್ದರೆ ಮತ್ತೆ ಕೆಲವು ಗೀತೆಗಳಲ್ಲಿ ಅವಳ ನೋವಿನ ಬದುಕಿನ ಚಿತ್ರಣವಿದೆ. ಸಹಾನುಭೂತಿ ಪರರಲ್ಲದ ಅತ್ತೆ ಮಾವಂದಿರು ಮೂದಲಿಸುವ ನಾದನಿಯರು ಅವಳ ಬಾಳನ್ನು ತೊಡೆಕುಗೊಳಿಸಿದುರ ವರ್ಣನೆಯಿದೆ. ಹೆಣ್ಣಿನ ನೋವು ಸಂಕಷ್ಟ ಸಮಾಜದ ಬಗೆಗಿನ ತಿರಸ್ಕಾರ ಬಗೆಗೆ ಈ ಹಾಡುಗಳು ಮಾತಾಗುತ್ತವೆ.

ಮಹಿಳೆಗೆ ಸಮಾಜದಲ್ಲಿ ಇಲ್ಲದೆ ಇದ್ದ ಮಾತಿನ ಅವಕಾಶ ಅಥವಾ ಅಭಿಪ್ರಾಯ ಹಂಚಿಕೊಳ್ಳುವುದಕ್ಕೆ ಇಲ್ಲದ ವಾತವಾರಣವನ್ನು ಈ ಸಂದರ್ಭಗಳು ಒದಗಿಸಿಕೊಡುತ್ತವೆ. ಈ ಅಭಿವ್ಯಕ್ತಿಯಲ್ಲಿ ಮಹಿಳೆ ಸಮಾಜದ ನಿರಂಕಷ ಮನೋಭಾವವನ್ನು ವಿರೋಧಿಸುತ್ತ ಹಾಡುತ್ತಾಳೆ.

**ಮರಣ ಸಂದರ್ಭದಲ್ಲಿ ಹಾಡುವ/ಹೊಗಳುವ/ತೆಗಳುವ ಪದಗಳು**

ಇವು ವ್ಯಕ್ತಿಯೊಬ್ಬ ತೀರಿಕೊಂಡಾಗ ಅವರ ರಕ್ತ ಸಂಬಂಧಿಗಳು ಶವದ ಮೇಲೆ ಬಿದ್ದು ಹೊರಳಾಡುತ್ತ/ತೆಗಳುತ್ತ ಎದೆಗುದ್ದಿಕೊಳ್ಳುತ್ತ ರಾಗಾಲಾಪ ಮಾಡುತ್ತ ಲಯಬದ್ಧವಾಗಿ ಹೇಳುವಂಥವಾಗಿವೆ. ಸಾವಿನ ಸಂದರ್ಭದಲ್ಲಿ ಮಾತ್ರ ಕೇಳಿಬರುವ ಈ ರಚನೆಗಳನ್ನು ಹಾಡುವುದರಲ್ಲಿ ಹೆಂಗಸರದ್ದೇ ಮೈಲುಗೈ. ಮೃತನ ಪ್ರಸಿದ್ಧಿ ಸಾಧನೆ ಧೈರ್ಯ ಸ್ಥೈರ್ಯಾದಿಗಳನ್ನು ನೆನೆದುಕೊಂಡು ರಾಗಾಲಾಪಗೈಯುತ್ತಾರೆ. ಸಾವು ಮಾನವ ಬದುಕಿನ ಕೊನೆಯ ಘಟ್ಟವಾದ್ದರಿಂದ ಆ ಸಂದರ್ಭದಲ್ಲಿ ಹಾಡುವ ಹೊಗಳುವ ಪದಗಳಿಗೆ ವಿಶೇಷ ಮಹತ್ವವಿದೆ. ಗಂಡನನ್ನು ಕಳೆದುಕೊಂಡ ಹೆಂಡತಿಯೊಬ್ಬಳು ಪ್ರಲಾಪಿಸುವ ಬಗೆ ಇಂತಿದೆ.

"ಅಯ್ಯೋನನ ದೇವ್ರೆ ನಿಮಗೇನು ಬಂದಿತಪ್ಪಾ

ಬಾಳೀನಂತ ಬಾಳೇನ ಹಾಕಿದ್ರಿ

ಬಾಳಗೊಡದೇ ಹೋದ ಯಮದೋನು

ಆದ ಅನ್ನಾಬಿಟ್ಟು ಕಾದ ನೀರು ಬಿಟ್ಟು

ನಮ್ಮನೆಲ್ಲಾ ಬಿಟ್ಟುಮನೆ ಬಿಟ್ಟು ಹೊಗ್ತೀರಲ್ಲಾ ದೇವ್ರೋ

ನಮುಗಿನ್ಯಾರಪ್ಪ ದೇವ್ರೇ"

ಹೀಗೆ ಈ ಮರಣದ ಸಂದರ್ಭದಲ್ಲಿ ಮಹಿಳೆ ಮಾತ್ರ ಭಾವೋದ್ವೇಗಗೊಂಡು ಅಳುತ್ತಾಳೆ. ತನ್ನ ಅಭಿಪ್ರಾಯವನ್ನು ಅಳುವುದರ ಜೊತೆಗೆ, ರಾಗಬದ್ಧವಾಗಿ ಹಾಡಿಕೊಳ್ಳುತ ಸತ್ತ ವ್ಯಕ್ತಿಯ ಬಗ್ಗೆ ಗುಣದೋಷಗಳನ್ನು ಹೇಳುತ್ತಾರೆ. ಸಮಾಜದಲ್ಲಿ ಮಹಿಳೆಗೆ ಬರಬಹುದಾದ ಮುಂದಿನ ತೊಂದರೆಗಳ ಬಗೆಗೆ ಈ ಹಾಡುಗಳಲ್ಲಿ ವಿವರಿಸುತ್ತಾಳೆ.

ಮಹಿಳೆಯರು ಗಾದೆಗಳಲ್ಲಿ ತಮಗೆ ಸಮಾಜ ನೀಡಿರುವಂತಹ ಲೈಂಗಿಕ ಮಾತುಕಥೆಗೆ ಸಂಬಂಧಿಸಿದ ನಿಷೇಧವನ್ನು ಅವರು ಮೀರೂವಂತಹದ್ದು, ಮಹಿಳೆಯರು ಬಳಸುವಂತಹ ಗಾದೆಗಳಲ್ಲಿ ಕಂಡುಬರುತ್ತದೆ. ಉದಾಹರಣೆಗೆ

"ಹಗೆಯವರು ಬರ್ತಾರೆ ಹಲ್ಲು ಮುಚ್ಚು ಅಂದ್ರೆ"

"ನಾನೇನು ಮಾಡಾನೆ ತುಟಿ ತುಂಡ ಅಂದ್ಲಂತೆ"

"ಕಡಿಲಾರದ ಕತ್ತಿ ಕೈಯ್ಯಾಗಿದ್ರೇನಂತ ಮಾಡಲಾರದ ಗಂಡ್ಸು ಮಗ್ಗಲಾಗಿದ್ರೇನಂತ"

"ಏಳಲಾರದೊನ್ಗೆ ಏಳಜನ ಹೆಂಡ್ರು ಮೇಲೋಬ್ಬಳು ಸೂಳೆ ಎದ್ದು ಮಾಡ,

ನಿದ್ದೇನು ಕೊಡ"

ಹೀಗೆ ಮಹಿಳೆಯರು ಸ್ನೇಹ ಸಂಬಂಧದೊಳಗಡೆ ತಮ್ಮ ಅಭಿವ್ಯಕ್ತಿಗೆ ಬೇಕಾದ ಅವಕಾಶವನ್ನು ಮಾಡಿಕೊಳ್ಳುತ್ತಾರೆ. ಗಂಡನನ್ನು ಕುರಿತು ಹೆಣ್ಣು ಅದೇಷ್ಟೆ ಧೈರ್ಯದಿಂದ ತನ್ನ ಸ್ವಂತದ ವಿಷಯವನ್ನು ತೋಡಿಕೊಂಡಿದ್ದಾಳೆ. ಮತ್ತೆ ಇದೆ ಬಗೆಯ ಇನ್ನೊಬ್ಬ ಮಹಿಳೆ ಅತ್ಯಂತ ಸುಲಭದ ಕೆಲಸಕ್ಕೆ ಮುನ್ನುಗ್ಗುವ ತನ್ನ ಗಂಡನನ್ನು ತನ್ಮೂಲಕ ಆತನ ಪುರುಷ ಶಕ್ತಿಯನ್ನು ನಯವಾಗಿ ಗಾದೆಯ ಮೂಲಕ ಛೇಡಿಸಿದ್ದಾಳೆ.

"ಭಾಲೆದಿಂಡು ಕಡಿಯಕೆ ನನ್ನ ಗಂಡ ಗೂಳಿಹಾಗೇ"

ಹೆಣ್ಣಿನ ಎಲ್ಲ ಹಂತಗಳೂ ಸ್ವಾತಂತ್ರ್ಯವನ್ನು ನಿರಾಕರಿಸಿದೆ ಎಂದು ಹೇಳಲು ಬರುವುದಿಲ್ಲ. ಆಕೆ ಪುರುಷ ಆಲೋಚನೆಯ ಪರದಿಯೊಳಗೆ ಸ್ವಾತಂತ್ರ್ಯದ ಉಸಿರಾಡಿಕೊಂಡಿರಬಹುದಾದ ಅವಕಾಶ ಕೊಟ್ಟಿದೆ. ಆದರೆ ಹೆಣ್ಣು ತಾನೇ ಸ್ವಂತ ವಿವೇಚನೆ ನಡೆಸಲು ಮತ್ತು ತನ್ನ ಇಚ್ಛೆಯಂತೆ ನಡೆದುಕೊಳ್ಳಲು ನಿರಾಕರಿಸುತ್ತದೆ. ಹೆಣ್ಣು ಪುರುಷನಿಗೆ ಹಿತವಾಗುವಂತೆ ನಡೆದುಕೊಳ್ಳುವುದು ಸ್ವತಂತ್ರ್ಯವೆಂದೂ ತನಗೆ ಹಿತವಾಗುವಂತೆ ಸ್ವೇಚ್ಛೆಯಿಂದ ನಡೆದುಕೊಳ್ಳುವುದು ಸ್ವಚ್ಛಾಚಾರವೆಂದು ನಿರೂಪಿಸಿ ಹೇಳಿ ನಿರ್ಬಂಧಿಸುತ್ತದೆ. ಅಧೀನತೆಯ ಸ್ವತಂತ್ರ್ಯ ಎಂಬ ದೃಷ್ಟಿಕೋನವನ್ನು ಇಲ್ಲಿ ವಿರೋಧಿಸಲಾಗಿದೆ.

ಹೀಗೆ ಸಾಮಾಜಿಕ ಸಂರಚನೆಯಲ್ಲಿ ಇರುವಂತಹ ಏಣಿ ಶ್ರೇಣಿಗಳಿಂದಾಗಿ ಮಹಿಳೆಯರು ಸಂಕಷ್ಟಕ್ಕೆ ಗುರಿಯಾಗುತ್ತಿದ್ದಾರೆ. ಬೈಗುಳಗಳಲ್ಲಿ, ಗಾದೆಮಾತಿನಲ್ಲಿ ಹೀಗೆ ಎಲ್ಲ ಭಾಷಿಕ ನಿರೂಪಣೆಗಳು ಸ್ಪಷ್ಟವಾಗಿ ಕಂಡುಬರುತ್ತದೆ. ಹೀಗೆ ಅಧ್ಯಾಯದ ಉದ್ದಕ್ಕೂ ಹಲವು ನಿದರ್ಶನಗಳ ಮುಖಾಂತರ ಸಮಾಜದಲ್ಲಿ ಜೀವಂತವಾಗಿರುವ ಜಾತಿ ಪದ್ಧತಿ, ವರ್ಗ ಆಧಾರಿತ ತಾರತಮ್ಯ ಭಾಷೆಯಲ್ಲಿ ಹೇಗೆ ಪ್ರತಿಫಲಿತವಾಗಿದೆ ಎಂಬುದನ್ನು ಈ ಅಧ್ಯಾಯದಲ್ಲಿ ಕಂಡುಕೊಳ್ಳಲಾಗಿದೆ. ಸಮಾಜದಲ್ಲಿ ಮಹಿಳೆಯರ ಮಾತಿಗೆ ಎಂತಹ ಸಂದರ್ಭಗಳಲ್ಲಿ ನಿಷೇಧಗಳಿವೆ, ಯಾವ ನಿರ್ಬಂಧಗಳಿವೆ ಎಂಬುದನ್ನು ಈ ಅಧ್ಯಾಯದಲ್ಲಿ ಕಂಡುಕೊಳ್ಳಲಾಗಿದೆ.

**ಅಡಿಟಿಪ್ಪಣಿ**

೧. ದಿ ಸಕೆಂಡ್ ಸೆಕ್ಸ್ (ಅನು), ಎಚ್.ಎಸ್.ಶ್ರೀಮತಿ, ಪು.೧೬-೧೭, ೨೦೦೭

೨. ಭಾರತೀಯ ಸಮಾಜ ರಚನೆ -ಪರಿವರ್ತನೆ, ಚ.ನ.ಶಂಕರರಾವ್, ಪು.೩೭, ೨೦೦೭

೩. ಸಮಾಜ ವಿಜ್ಞಾನಗಳ ಪಾರಿಭಾಷಿಕ ಪದಕೋಶ, ಬಿ.ಎಸ್. ಚಂದ್ರಶೇಖರ್, ಪು.೧೦೮, ೨೦೦೫

೪. ಡಾ.ಬಾ.ಸಾ.ಅಂ.ಬ.ಬಾ(ಸಂ.೭), ಎ.ಎಂ.ರಾಜಶೇಖರಯ್ಯ, ಪು.೧-೩, ೧೯೯೦

೫. ಮನು, ಉದ್ಧೃತ: ಶೇಷನವರತ್ನ, ಪು.೯೩, ೨೦೦೪

೬. ಸಾಮಾಜಿಕ ಸಂವಹನ ದಲಿತರು & ಭಾಷೆ, ಪು.೧೩೭-೧೩೮, ೨೦೦೬

೭. ನುಡಿನೋಟ, ಡಾ.ಡಿ.ಪಾಂಡುರಂಗ ಬಾಬು, ಪು.೯ ರಿಂದ ೧೧, ೨೦೦೫

೮. ನಮ್ಮಾತು, ಡಿ.ಪಾಂಡುರಂಗ ಬಾಬು, ಪು.೬೬, ೨೦೦೫

೯. ಜನಪದ ಗೀತೆಗಳು, ಡಾ.ಪಿ.ಕೆ ಖಂಡೋಬಾ, ಪು.೬೭, ೧೯೯೬

೧೦. ಗಾಯಿತ್ರಿ ನಾವಡ, ಪು.೮೯, ೧೯೯೫.

## ಅಧ್ಯಾಯ-೫

# ಭಿನ್ನತೆ ಅಸಮಾನತೆಯ ಪರಿಕಲ್ಪನೆ ಮತ್ತು ವಾಸ್ತವ

## ಅಧ್ಯಾಯ-೫

# ಭಿನ್ನತೆ ಅಸಮಾನತೆಯ ಪರಿಕಲ್ಪನೆ ಮತ್ತು ವಾಸ್ತವ

ಮಹಿಳೆಯರ ಭಾಷೆಯನ್ನು ಕುರಿತಂತಹ ಅಧ್ಯಯನಗಳು ಬಳಕೆ ಮಾಡಿರುವ ಪದಗಳು ಗೊಂದಲದಿಂದ ಕೂಡಿವೆ ಹಾಗೆಯೇ ಕೆಲವೊಂದು ಪರಿಕಲ್ಪನೆಯಲ್ಲಿ ಬಳಕೆ ಮಾಡಿರುವ ವಿಷಯದಲ್ಲಿ ತಪ್ಪು ಗ್ರಹಿಕೆಯನ್ನು ಹೊಂದಿವೆ. ಅವುಗಳು ಪೂರ್ವ ಕಲ್ಪಿತ ಕಲ್ಪನೆಗಳಿಂದ ಕೂಡಿದವುಗಳಾಗಿವೆ.

ಪಾಶ್ಚಿಮಾತ್ಯರಿಂದ ಎರವಲು ಪಡೆದುಕೊಳ್ಳುತ್ತಿರುವಂತಹ ಅಧ್ಯಯನ ವಿಧಾನಗಳನ್ನು ಇಲ್ಲಿನ ಸಂದರ್ಭಕ್ಕೆ ಇಟ್ಟು ಅಧ್ಯಯನ ಮಾಡುವಲ್ಲಿ ಅಥವಾ ಅರ್ಥಮಾಡಿಕೊಳ್ಳುವಲ್ಲಿ ತಪ್ಪು ದಾರಿಗೆ ಅಧ್ಯಯನಗಳು ಸಾಗುತ್ತಿವೆ.

ಇದುವರೆಗೆ ಭಾಷೆಯಲ್ಲಿ ಮಹಿಳೆಯನ್ನು ಕುರಿತಂತೆ ನಡೆದ ತಾರತಮ್ಯಗಳನ್ನು ಗುರಿತಿಸುವಾಗ ಮತ್ತು ಭಾಷೆಯಲ್ಲಿ ಪುರುಷಾಧಿಕಾರ ಹಾಗೂ ಮಹಿಳೆಯ ಅಧೀನತೆಯ ವಿಚಾರಗಳನ್ನು ಗುರುತಿಸುತ್ತಿರುವ ಅಧ್ಯಯನ ಮಾದರಿಗಳು ಕೆಲವು ಸಂದರ್ಭದಲ್ಲಿ ಮೂಲ ಅರ್ಥದಿಂದ ಹೊರತ್ತಾದ ಅಧ್ಯಯನಗಳು ನಡೆಯುತ್ತಿವೆ.

ಪಾಶ್ಚಿಮಾತ್ಯರಿಂದ ರೂಪಿತವಾದ ಪರಿಕಲ್ಪನೆಗೆ ಕನ್ನಡದ ಉದಾಹರಣೆಗಳನ್ನು ಕೊಟ್ಟು ಪರಿಕಲ್ಪನೆಯನ್ನು ವಿವರಿಸುತ್ತಿದ್ದಾರೆ. ಆದರೆ ಮೂಲ ಪರಿಕಲ್ಪನೆಗೂ ಅರ್ಥಕ್ಕೂ ವ್ಯತ್ಯಾಸದಿಂದ ಕೂಡಿದೆ. ಅಲ್ಲದೇ ಗೊಂದಲಮಯವಾಗಿ ಪರಿಕಲ್ಪನೆಯನ್ನು ಗ್ರಹಿಸಿಕೊಳ್ಳಲಾಗುತ್ತಿದೆ.

ಭಾಷೆಯ ಸ್ವರೂಪ ಬಳಕೆ ಮತ್ತು ರಚನೆ ಇವುಗಳಲ್ಲಿ ಗುರುತಿಸಬಹುದಾದ ವ್ಯತ್ಯಾಸಗಳಿರುತ್ತವೆ. ವ್ಯತ್ಯಾಸ ಯಾವಾಗಲು ಎರಡು ರೀತಿಯಲ್ಲಿರುತ್ತದೆ.

೧) ಭಿನ್ನತೆ ೨) ತಾರತಮ್ಯತೆ

ಈ ಪದಗಳು ಅಥವಾ ಪರಿಕಲ್ಪನೆಗಳನ್ನು ಯಾವ ಅರ್ಥದಲ್ಲಿ ಬಳಕೆಯಾಗುತ್ತಿವೆ ಎಂಬುದನ್ನು ಚಾರಿತ್ರಿಕವಾಗಿ ಯಾವ ಅರ್ಥದಲ್ಲಿದೆ, ಈ ಕುರಿತು ನಿಘಂಟುಗಳ ಅರ್ಥ ಏನಿದೆ ಎಂಬುದನ್ನು ಹೀಗೆ ಅರ್ಥೈಸಬಹುದು.

- 'ಭಿನ್ನ' (ಸಂ) ವಿ. ಬೇರೆಯಾದ ಒಡೆದ ಸೀಳಿದ ತುಂಡು ತುಂಡಾದ ಬೇರೆಯ, ಇತರ, ಹೊರಗಿನ, ಅರಳಿದ ವಿಕಸಿತ, ಮದವೇರಿದ ಕೊಬ್ಬಿದ(ಆನೆ)
- 'ತಾರತಮ್ಯ'(ಸಂ) ನಾ. ಹೆಚ್ಚುಕಡಿಮೆ, ತಾರತಮ್ಯ ಭಾವ, ವ್ಯತ್ಯಾಸ ಅಂತರ[೧]
- Gender (ಜೆಂಡರ್) ನಾ (ವ್ಯಾ) ಲಿಂಗ Masailing Femininenenter ಪುಲ್ಲಿಂಗ ಸ್ತ್ರೀಲಿಂಗ ನಪುಂಸಕಲಿಂಗ Common ಪುಂಸ್ತ್ರೀಲಿಂಗ ಉಭಯಲಿಂಗ

೨) (ನಾಮವಾಚಕಗಳ ಸರ್ವನಾಮಗಳ ವಿ) ಪುಂಸ್ತ್ರೀಯಾನಪಂಸಕ–ವಾಚಕ

೩) (ಗುಣವಾಚಕಗಳ ವಿ) ವಿಶೇಷ್ಯಾನುಗುಣರೂಪ ಪುಂ–ಸ್ತ್ರೀ–ಯಾನಪಂಸಕ ವಾಚಕಗಳಾದ ನಾಮವಾಚಕಗಳಿಗೆಯಾ, ಸರ್ವನಾಮಗಳಿಗೆ ಅನುರೂಪವಾದ ವಿಶೆಷಣರೂಪ.

೪) (ಆಮಾ)(ಸ್ತ್ರೀಯಾ ಪುರುಷ) ಜಾತಿ; ವರ್ಗ;ಲಿಂಗ;Shehasa spirit more masculine than the first–ಆಕೆಗೆ ಪುರುಷ ಜಾತಿಗೆ ಮಿರಿದ ಪುಂಸ್ತಿ ಇದೆ [೨]

೧) ಭೇದ: ಭಿನ್ನತೆ, ವ್ಯತ್ಯಾಸ, ಅಸಾದೃಶ್ಯ, ಅಸಮಾನತೆ, Distiction Without ವ್ಯತ್ಯಾಸವಿಲ್ಲದ ಭೇದ.

೨) ತಾರತಮ್ಯ: ಹೆಚ್ಚು ಕಡಿಮೆ ಫರಕು ವಸ್ತುಗಳಲ್ಲಿ ವ್ಯತ್ಯಾಸದ ಅಂಶ

೩) ಶೇಷ: ಉಳಿಕೆ, ಪರಿಮಾಣಗಳ ನಡುವಿನ ವ್ಯತ್ಯಾಸದ ಮೊತ್ತ, ವ್ಯವಕಲನ ಫಲ; ಕಳೆದ ಮೇಲೆ ಉಳಿಯುವ ಮೊತ್ತ

೪) (ನಿಮೀಷ ತೇದಿಗಳ ನಡುವೆ ಬಂಡವಾಳ ಪತ್ರ ಮಾವುಗಳ ಬೆಲೆಯ ವ್ಯತ್ಯಾಸ; ಖರೀದಿ; ಫರಕು.)

೫) ಭಿನ್ನಭಿಪ್ರಾಯ; ಅಭಿಪ್ರಾಯ ಭೇದ

೬) ವೈಮನಸ್ಸು; ಮನಸ್ತಾಪ

೭) ವಿವಾದ; ಕಲಹ; ವ್ಯಾಜ

೮) ವ್ಯಕ್ತಿಗಳನ್ನು ಜೀವಿ ಜಾತಿಗಳನ್ನು ಪ್ರತ್ಯೇಕಿಸುವ ವಿಶೇಷ; ವೈಲಕ್ಷಣ ವಿಶಿಷ್ಟ ಲಕ್ಷಣ; ವಿಶೇಷ ಕುರುಹು.

೯) (ವಂಲಾಂ) ಲಾಂಛನಭೇದ ಒಂದೇ ಕುಟುಂಬದ ಸದಸ್ಯರಲ್ಲಿ ವ್ಯತ್ಯಾಸ ತೋರಿಸಲು ಅವರ ಬಿರುದಾವಳಿಗಳ ಲಾಂಛನದಲ್ಲಿ ಮಾಡಿರುವ ಮಾರ್ಪಾಟು.

Different: ಗುರಿ ಬೇರೆ ಭಿನ್ನ; ಸಮನಲ್ಲದು, ಸದೃಶ್ಯವಲ್ಲದು, ವ್ಯತ್ಯಾಸವುಳ್ಳ, ಒಂದೇ ತರನಲ್ಲದ ಬೇರೆ ತರದ

೨) ಬೇರೆ ಬೇರೆ ಭಿನ್ನ; ಪ್ರತ್ಯೇಕ Himat Three Times But he dichihed it ಅದನ್ನು ನಾನು ಅವನಿಗೆ ಮೂರು ಬೇರೆ ಬೇರೆ ಸಮಯಗಳಲ್ಲಿ ಕೊಟ್ಟಿದೆ. ಆದರೆ ಅವನು ಅದನ್ನು ತಿರಸ್ಕರಿಸಿದ

೩) ವಿವಿಧ ಬಗೆ ಬಗೆಯ; ಭಿನ್ನ ಭಿನ್ನ They Are Fawhdih Colur ಅವು ಬಗೆಬಗೆಯ ಬಣ್ಣಗಳಲ್ಲಿ ಸಿಗುತ್ತವೆ.

೪) ಅಸಮಾನ್ಯ ವೈಶಾದೃಶ; ವಿಲಕ್ಷಣ; ವಿಶೇಷ;Aduertising That Strivrs Couti nuauy to be ವಿಶೇಷವಾಗಿರಬೇಕೆಂದು ಸದಾ ಪ್ರಯತ್ನ ಪಡುತ್ತಿರುವ ಜಾಹಿರಾತು.

Diffenrentia ಢಿಫರೆನ್ಸಿಯಾ ನಾ (ಬವ DIfferen-tiae) (ಮಲ ಒಂದು ಜೀವಜಾತಿಗೆ ಸೇರಿದ ಕುಲಗಳಲ್ಲಿ) ವೈಲಕ್ಷಣ ವಿಶಿಷ್ಟ ಲಕ್ಷಣ ವಿಶಿಷ್ಟ ಗುರುತು, ವೈಶಿಷ್ಟ್ಯ

Separate (ಸೆಪೆರೆಟ್) ಸಕ್ರಿ, ಬೇರೆ ಬೇರೆ ಮಾಡು, ಬೇರ್ಪಡಿಸು ಪ್ರತ್ಯೇಕಗೊಳಿಸು, (ವಿವಿಧ ವಸ್ತುಗಳು ವಿವಿಧಾಂಶಗಳು ಬೆರೆತು ಹೋಗದಂತೆ ಯಾ ಒಂದಕ್ಕೊಂದು ತಗುಲದಂತೆ) ಬೇರ್ಪಡಿಸು ಬೇರೆ ಬೇರೆಯಾಗಿ ಪ್ರತ್ಯೇಕ ಪ್ರತೇಕವಾಗಿ– ಇಡು

೩) (ಆಮೆ) ಸೈನ್ಯ ಮಾವುಗಳಿಂದ) ತೆಗೆದು ಹಾಕು; ವಜಾಮಾಡು

೪) (ಧ್ಯಾನಗಳು, ಹಣ್ಣುಗಳು ಮೊ.ವನ್ನು ಗಾತ್ರಗುಣ.ಮೊ ವಕ್ಕೆ ತಕ್ಕಂತೆ) ವಿಂಗಡಿಸು ಪೃಥಕ್ಕರಿಸು; ಬೇರೆ ಬೇರೆ ಮಾಡು.

೫) (ಅದ್ದುರಿನಲ್ಲಿ ಬೆರೆತಿರುವ ವಸ್ತುಗಳನ್ನು ಬೆಳಕಿನ ವಿವಿಧ ಕಿರಣ ರಾಶಿಗಳನ್ನು ಹಾಲು ಕೆನೆ ಯಾವುದೇ ವಸ್ತುವಿನ ಘಟಕಾಂಶಗಳನ್ನು ಸಂಗ್ರಹಿಸಲು ತೆಗೆದುಹಾಕಲು) ಬೇರ್ಪಡಿಸು ವಿಯೋಜಿಸು ಪೃಥಕ್ಕರಿಸು; ಪ್ರತ್ಯೇಕಿಸು ಅಕ್ರಿ(ಯಾವುದರಿಂದಲೇ ಆಗಲಿ) ಬೇರೆಯಾಗು; ಬೇರ್ಪಡು; ಪ್ರತ್ಯೇಕವಾಗು

೨) ಬೇರೆ ಬೇರೆಯಾಗಿ ಚದುರು; ಚದುರಿಹೋಗು. ಬೇರೆಯಾಗು ಒಂದಾಗಿರದೆ ಬೇರೆ ಬೇರೆಯಾಗಿ ವಾಸಿಸು[೩](ಪ್ರಸಾರಂಗ-ಮೈಸೂರು ವಿ.ವಿ.ಮೈಸೂರು-ಇಂಗ್ಲಿಷ್-ಕನ್ನಡ ನಿಘಂಟು)

• Saparate/seprit ಸೆಪ್‌ರಿಟ್ Vput or Keep A Part (ಕ್ರಿ) ಬೇರ್ಪಡಿಸು ಪ್ರತ್ಯೇಕಿಸು.

೨). Move Apartimake People or things move apast ದೂರ ಮಾಡು; ಜನರು ಅಥವಾ ವಸ್ತುಗಳು ದೂರವಾಗುವಂತೆ ಮಾಡು.

೩) Be Between two Persons Objects, etc ಇಬ್ಬರು ವ್ಯಕ್ತಿಗಳು ಎರಡು ವಸ್ತುಗಳು ಮೊ. ಗಳ ಮಧ್ಯೆಇರು

೪) (Husband and life) Stop living to Gether (ದಂಪತಿ ಒಟ್ಟಿಗೆ ವಾಸಿಸುವುದನ್ನು ನಿಲ್ಲಿಸು.)

Difference/Difrans/ಢೀಫರನ್ಸ್ N/State of Being unlike (ನಾ.) ವ್ಯತ್ಯಾಸ; ಅಂತರ ಭೇದ ತಾರತಮ್ಯ

2) Amount or Manner In hich things are unlike ವ್ಯಾತ್ಯಾಸದ ಪ್ರಮಾಣ ಅಂತರ ಪ್ರಮಾಣ

3) Differing in opinion Disagreement ಭಿನ್ನಾಭಿಪ್ರಾಯ, ಭಿನ್ನತೆ

Make all the difeerence have an important effect and create a difference ವ್ಯಾತ್ಯಾಸವನ್ನುಂಟುಮಾಡು ಭಿನ್ನತೆಯನ್ನುಂಟುಮಾಡು.

Make all deifference clear Difference ಸ್ಪಷ್ಟವಾದ ಭಿನ್ನತೆ With a Difference With an interesting difference ಕುತೂಹಲಕರವಾದ ವ್ಯಾತ್ಯಾಸ.

Diffenent/Difrent/ಡಿಫರೆಂಟ್ Adj No the Same separate (ಗು) ಭಿನ್ನ, ವ್ಯತ್ಯಾಸವುಳ್ಳ ಬೇರೆಯಾದ a Different Kettele Of Fish Something to Tally Different ಸಂಪೂರ್ಣವಾಗಿ ಬೇರೆ ಭಿನ್ನ[೪]

• ಲಿಂಗ (ನಾ) ಶಿವನ ಒಂದು ಪ್ರತೀಕ (ಟಿ) Siva Worshipped in the Formof a Phallus

೨). ಪುರುಷನ ಜನನೇಂದ್ರಿಯ ಶಿಶ್ನ the Penis

೩) ವ್ಯಾಕರಣದಲ್ಲಿ ಶಬ್ದಗಳಲ್ಲಿನ ಜಾತಿಯನ್ನು ತಿಳಿಸುವ ಸ್ತ್ರೀಲಿಂಗ ಪುಲ್ಲಿಂಗ ನಪುಂಸಕ ಲಿಂಗಗಳಲ್ಲಿ ಒಂದು Genderin Gramamar

೪) ಗಂಡು ಹೆಣ್ಣುಗಳಲ್ಲಿ ಒಂದರ ಪ್ರಕೃತಿ sex

* ವ್ಯತ್ಯಾಸ (ನಾ) ಭೇದ ಅಂತರ (ಟಿ) Difference

* ಭಿನ್ನ (ಗು)ಮುರಿದ; ಒಡೆದ Adj Broken shafterd fractured mutidated maied damaged wrecteed

೨) ಬೇರೆಯಾದ ಪ್ರತ್ಯೇಕವಾದ Different varied Dissident

* ಭೇದ (ನಾ) ಮುರಿಯುವುದು ಒಡೆಯುವುದು (ಟಿ) Braking splitting

೨) ವ್ಯತ್ಯಾಸ; ಅಂತರ Difference

೩) ಶತ್ರುಗಳನ್ನು ಒಡೆಯುವುದು Creating a Difftidriving a wedge

೪) ಬಗೆ ಪ್ರಕಾರ Form Genre

ಅಸಮಾನತೆ (ನಾ) ಹೋಲಿಕೆಯಿಲ್ಲದಿರುವುದು ಸಮಾನವಾಗಿಲ್ಲದಿರುವುದು (ಟಿ) Dissimilarity inegality

'ತಾರತಮ್ಯ'(ನಾ) ಹೆಚ್ಚು ಕಡಿಮೆ ಮೇಲುಕೀಳು ಭೇದ ಭಾವ; ತಾರತಮ್ಯ ಭಾವ (ಟಿ)Gradation; Discrimination;hier arhy degrec[೫](ಕನ್ನಡ-ಕನ್ನಡ-ಇಂಗ್ಲಿಷ್ ನಿಘಂಟು ಜಿ.ವೆಂಕಟಸುಬ್ಬಯ್ಯ, ಶೇಷಗಿರಿರಾವ್, ರಾಮಚಂದ್ರ ಮೂರ್ತಿ ವಿ.ಎಚ್ ಪ್ರಕಾಶನ)

ಹಲವು ಅದ್ಯಯನಗಳು ಭಿನ್ನತೆ ಮತ್ತು ತಾರತಮ್ಯತೆ ಎರಡು ಪರಿಕಲ್ಪನೆಗಳನ್ನು ಒಂದೇ ಅರ್ಥದಲ್ಲಿ ಗ್ರಹಿಸುತ್ತಿದ್ದಾರೆ. ಸಮಾಜದಲ್ಲಿ ಪ್ರಕೃತಿ ಸಹಜವಾಗಿ ಭಿನ್ನತೆಗಳಿವೆ. ಮತ್ತು ಸಮಾಜದ ಮೌಢ್ಯ ನಂಬಿಕೆಗಳಿಂದ ಶ್ರೇಷ್ಠ ಕನಿಷ್ಠ ಭಾವನೆಯಿಂದ ಹಲವು ತಾರತಮ್ಯತೆಗಳಿವೆ.

ಕೆಲವರ ಪ್ರಕಾರ ಸಮಾಜದಲ್ಲಿ ತಾರತಮ್ಯತೆ ಇದೆ. ಅದನ್ನು ಸರಿಪಡಿಸಿ ಸಮಾನತೆಯನ್ನು ರೂಢಿಸಿಕೊಳ್ಳಬೇಕು ಎನ್ನುವುದನ್ನು ಮುಂದಿಡುತ್ತಾರೆ. ಇದಕ್ಕೆ ಪ್ರತಿವಾದಿಗಳು ಸಮಾಜದಲ್ಲಿ ಇರುವುದು ತಾರತಮ್ಯವಲ್ಲ ಅದು ಪ್ರಕೃತಿ ಸಹಜವಾದಂತಹದ್ದು ಎಂಬುದನ್ನು ವಿವರಿಸುತ್ತಾರೆ.

ಆದರೆ ಸಮಾಜದಲ್ಲಿ ಭಿನ್ನತೆ ಮತ್ತು ತಾರತಮ್ಯತೆಯನ್ನು ಈ ಎರಡು ವರ್ಗದವರೂ ಸರಿಯಾಗಿ ಅರ್ಥಮಾಡಿಕೊಂಡಿಲ್ಲ.

ನಿಸರ್ಗ ಸಹಜವಾಗಿಯೇ ಅಸಮಾನತೆ ಇದೆ. ಪ್ರಕೃತಿ ಸಹಜವಾಗಿ ಇರುವುದನ್ನು ಬೇರೆ ಮಾಡಲು ಆಗಲಾರದು. ಪ್ರಕೃತಿಯ ವಿರುದ್ಧ ವಾದವನ್ನು ಮಂಡಿಸುತ್ತೀರ ಉದಾ: ಕೈಯಲ್ಲಿ ಇರುವ ಐದು ಬೆರಳುಗಳನ್ನು ಒಮ್ಮೆಗಮನಿಸಿ ಇವು ಸಮಾವಾಗಿಲ್ಲ ಇದು ಪ್ರಕೃತಿ ಸಹಜ ಇದನ್ನು ಸಹಜ ಗುಣವೆಂದುಕೋಳ್ಬೇಕೆ ಹೊರತು ಸರಿ ಮಾಡಲು ಹೋದರೆ ಸರಿಯಾದಿತೆ. ನಾಯಿಯ ಬಾಲವನ್ನು ನೇರ ಮಾಡುವ ವಿಫಲಪ್ರಯತ್ನದ ಹಾಗೇ ಸಮಾಜದಲ್ಲಿ ಪುರುಷ ಮೇಲು ಮಹಿಳೆ ಕೀಳು ಅದು ಪ್ರಕೃತಿ ಸಹಜ ಈ ಬಗೆಯ ವಾದ ಬಂದಿದೆ.

ಭಿನ್ನತೆ ಮತ್ತು ತಾರತಮ್ಯದ ಬಗೆಗಿನ ಸರಿಯಾದ ಅರ್ಥ ತಿಳಿಯದವರು ಈ ಬಗೆಯ ಅಭಿಪ್ರಾಯಗಳನ್ನು ಮುಂದಿಡುತ್ತಾರೆ. ತಾರತಮ್ಯ ಮತ್ತು ಭಿನ್ನತೆ ಎರಡನ್ನು ಕಲಸೋಮೊಲೊಗರವಾಗಿ ಗ್ರಹಿಸುತ್ತಿರುವವರ ಅಭಿಪ್ರಾಯವಾಗಿದೆ. ಆದರೆ ಭಿನ್ನತೆಯನ್ನು ಯಾರು ಆಚರಿಸುವುದಿಲ್ಲ ಅದನ್ನು ಮೀರಲು ಆಗುವುದಿಲ್ಲ.

ಉದಾಹರಣೆಗೆ: ಬಣ್ಣಗಳನ್ನು ಕೇವಲ ಬಣ್ಣಗಳಾಗಿ ಗುರುತಿಸುವುದು ವ್ಯತ್ಯಾಸ. ಅಂದರೆ ಕಪ್ಪು, ಬಿಳಿ, ಕೆಂಪು, ಹೀಗೆ ಗುರುತಿಸಿದಂತೆ ಅದು ವ್ಯತ್ಯಾಸವನ್ನು ಹೇಳಿದಂತೆ ಅದು ತಾರತಮ್ಯ ಭಾವವಲ್ಲ. ಆದರೆ ಕಪ್ಪಾಗಿರುವುದರಿಂದಲೇ ಅದು ಕನಿಷ್ಠ ಮೌಲ್ಯ ಬಿಳಿಯಾಗಿರುವುದರಿಂದಲೆ ಶ್ರೇಷ್ಠ ಸ್ವೀಕಾರಾರ್ಹ ಎಂದು ಹೇಳಿದರೆ ಅದು ತಾರತಮ್ಯವಾಗುತ್ತದೆ.

ಬಳಕೆಯ ಭಾಷೆ ಒಳಗಡೆಯು ಸಾಮಾಜಿಕವಾಗಿರುವ ಭಿನ್ನತೆ ಮತ್ತು ತಾರತಮ್ಯತೆಯಿಂದ ಕೂಡಿದೆ. "ಭಾಷೆಯಲ್ಲಿ ಲಿಂಗ ಭಿನ್ನತೆಯನ್ನು ಸೂಚಿಸುವ ಕೆಲವು ಸ್ಥಿರ ಲಕ್ಷಣಗಳಿರುತ್ತವೆ. ಹಾಗೆಯೇ ಸಾಮಾಜಿಕ ಸ್ಥರ ವಿನ್ಯಾಸದಲ್ಲಿ ಸ್ತ್ರೀ ಪುರುಷರ ಸ್ಥಾನಮಾನಗಳನ್ನು ಸಾಮಾಜಿಕ ಅನನ್ಯತೆಯ ಚಹರೆಗಳನ್ನು ಮತ್ತು ಸಾಮಾಜಿಕ ತಾರತಮ್ಯಗಳನ್ನು ಕಾಣಿಸುವ ಅನೇಕ ಭಾಷಾಂಶಗಳು ಕ್ರಿಯಾಶೀಲವಾಗಿರುತ್ತವೆ.[೬] ಮಹಿಳೆಯನ್ನು ಕುರಿತಾದ ಭಾಷೆಗೂ ಗಂಡಸಿನ ಕುರಿತಾದ ಭಾಷೆಗೂ ಕೆಲವು ವ್ಯತ್ಯಾಸಗಳಿರುತ್ತವೆ. ಆ ವ್ಯತ್ಯಾಸಗಳಲ್ಲಿ ಕೆಲವು ಭಿನ್ನತೆಗಳಿರಬಹುದು ಮತ್ತೆ ಕೆಲವು ತಾರತಮ್ಯಗಳಾಗಿರಬಹುದು.

ಭಾಷೆಯಲ್ಲಿ ಭಿನ್ನತೆಯಾವುದು ಅದರ ನೆಲೆಯಾವುದು ಎಂಬುದು ಮತ್ತು ತಾರತಮ್ಯ ಯಾವುದು ಆದರ ನೆಲೆಯಾವುದು ಎಂಬುದರ ತಿಳಿಯುವ ಅಗತ್ಯ ಭಾಷೆಯಲ್ಲಿ ನಡೆಯುತ್ತಿರುವ ತಾರತಮ್ಯತೆಯನ್ನು ಗುರುತಿಸುವವರೂ ಭಾಷೆಯ ಸಹಜ ಪ್ರಕೃತಿಯನ್ನು ತಾರತಮ್ಯ ಎಂದು ಗುರುತಿಸುತಿದ್ದಾರೆ ಉದಾ: ಪ್ರಕೃತಿ ಸಹಜವಾಗಿ ಮನುಷ್ಯರ ದೇಹರಚನೆಯಿಂದಾಗಿ ಹೆಂಗಸು–ಗಂಡಸು ಮಾತನಾಡುವಂತದ್ದು ಭಿನ್ನವಾಗಿರುಬಹುದು. ದ್ವನಿಪೆಟ್ಟಿಗೆಯಲ್ಲಿನ ಬದಲಾವಣೆ

ಗಂಡಸಿನಲ್ಲಾದಷ್ಟು ಹೆಂಗಸಿನಲ್ಲಾಗುವುದಿಲ್ಲ. ಹೀಗಿರುವಾ ಧ್ವನಿಯಲ್ಲಿನ ಏರಿಳಿತ ಬೇರೆ ಬೇರೆಯಾಗಿರುತ್ತದೆ. ಇದನ್ನು ಗುರುತಿಸುವುದು ಸುಲಭ. ಈ ಕಾರಣಕ್ಕಾಗಿಯೇ ಪರದೆ ಹಿಂದೆ ಮಾತನಾಡುವವರು ಹೆಂಗಸರೋ ಅಥವಾ ಗಂಡಸೋ ಮಾತನಾಡುವುದ್ಯಾರು ಎಂದು ತೀಳಿಯುತ್ತದೆ. ಇದು ವ್ಯತ್ಯಾಸ ಭಿನ್ನತೆ ಪ್ರಕೃತಿ ಸಹಜವಾದುದ್ದು ಅಷ್ಟೇ. ಇದು ದೇಹ ರಚನೆಯಿಂದಾಗಿರುವಂತಹದ್ದು ಅದು ದತ್ತವಾದಂತಹದ್ದು ಈ ರೀತಿ ಇರುವುದರಿಂದಲೇ ಗಂಡಸಿನ ಭಾಷೆ ಹೆಂಗಸಿನ ಭಾಷೆ ಎಂದು ವಿಭಾಗಿಸಲಾಯಿತು. ಇದನ್ನೇ ಅವರ ಸ್ವಭಾವವನ್ನು ಅರಿಯಲಾಗಲಿ ಸಾಮಾಜಿಕ ಸ್ಥಾನಮಾನಗಳ ನಿರ್ಧಾರಕ್ಕಾಗಲಿ ಬಳಸಿದರೆ ನಾವು ಈ ಭಿನ್ನತೆಯನ್ನು ತಾರತಮ್ಯವಾಗಿ ನೆಲಗೊಳಿಸಿದಂತಾಗುತ್ತದೆ.

ಈ ಸಹಜ ಅಥವಾ ಭಿನ್ನತೆಯನ್ನು ಬಳಕೆಯೊಳಗಡೆ ತಾರತಮ್ಯ ದೃಷ್ಟಿಯಿಂದ ಬಳಕೆಗೊಳ್ಳುತ್ತಿದೆ. ಕೇವಲ ಗಂಡು ಭಾಷೆ ಹೆಣ್ಣು ಬಾಷೆ ಎಂದು ಹೇಳಿ ಒಪ್ಪಿಕೊಂಡರೆ ಸಮಸ್ಯೆ ಇಲ್ಲ. ಗಂಡು ಆಗಿರುವುದರಿಂದಲೇ ಶ್ರೇಷ್ಠ ಎಂದು ವೈಭವಿಕರಿಸಲಾಗುತ್ತದೆ. ಅಂತಹದೊಂದು ಸಂದರ್ಭ ನಮ್ಮ ಕನ್ನಡ ಸಂದರ್ಭದಲ್ಲಿದೆ. ಸಾಮುದಾಯಿಕವಾಗಿ ಈ ಭಿನ್ನತೆಯ ನೆಲೆಯನ್ನು ಗಮನಿಸಿ ಕೆಲವು ಭಾಷೆಗಳನ್ನು ಗಂಡು, ಎಂದು ಕೆಲವನ್ನು ಸಾಮಾನ್ಯ ಭಾಷೆ ಎಂದು ಪರಿಗಣಿಸುವ ಗ್ರಹಿಕೆ ಒಂದಿದೆ. ಉದಾಹರಣೆಗೆ:- "ಹುಬ್ಬಳಿ ಭಾಷೆಯನ್ನು ಗಂಡು ಮೆಟ್ಟಿನ ಭಾಷೆ" ಎಂದು ಕರೆಯಲಾಗುತ್ತದೆ. ಹಾಗಾದರೆ ಇನ್ನೊಳಿದ ಭಾಷೆ ಹೆಣ್ಣು ಮೇಟ್ಟಿದ ಭಾಷೆಗಳೆ? ಅದು ಹೇಗೆಂದು ಗೊತ್ತಿಲ್ಲ. ಇದೆಲ್ಲ ಸಾಮಾನ್ಯ ತಿಳುವಳಿಕೆ ಇದನ್ನು ವಿವರಿಸಿ ಅದು ಹೇಗೆ ಗಂಡು ಮೆಟ್ಟಿದ ಭಾಷೆ ಎಂದು ಅದನ್ನು ಯಾರೂ ಸಾಧಿಸಿ ತೋರಿಸಲು ಆಗುವುದಿಲ್ಲ, ಹೀಗೆ ಸಹಜ ಭಾಷೆಯನ್ನು ಜೈವಿಕ ವ್ಯತ್ಯಾಸಗಳನ್ನು ತಾರತಮ್ಯದ ನೆಲೆಯಲ್ಲಿ ತಂದು ಒಂದನ್ನು ಕನಿಷ್ಟ ಒಂದನ್ನು ಶ್ರೇಷ್ಠ ಎಂಬ ಅರ್ಥದಲ್ಲಿ ಬಳಸುತ್ತಿರುವುದು ಒಂದು ಬಗೆಯ ತಿಳುವಳಿಕೆ.

ಇತ್ತೀಚಿಗೆ ಭಾಷೆಯಲ್ಲಿಯ ಲಿಂಗತಾರತಮ್ಯತೆ ಕುರಿತಾಗಿ ಕೆಲವು ಅಧ್ಯಯನಕಾರಾರು ಪ್ರಶ್ನಿಸುತ್ತಿದ್ದಾರೆ. ಇವರ ಅಧ್ಯಯನಗಳು ಸ್ವಾಗತಾರ್ಹ, ಆದರೆ ಇವರುಗಳೂ ಸಹ ಭಾಷೆ ಒಳಗಡೆಯ ಭಿನ್ನತೆಯನ್ನು ಗ್ರಹಿಸಿಕೊಳ್ಳದೆ ಸಾರಸಗಟಾಗಿ ಭಾಷೆಯಲ್ಲಿ ತಾರತಮ್ಯತೆಗಳು ನಡೆಯುತ್ತೀದೆ ಎಂದು ಕೆಲವು ಪದಗಳನ್ನು ಗುರುತಿಸುತ್ತೀದ್ದಾರೆ. ಈ ಅಧ್ಯಯನಕಾರು ತಾರತಮ್ಯಕ್ಕೆ ಒಳಾಗಾಗಿರುವ ಪದಗಳು ಎಂದು ಗುರುತಿಸುತ್ತಿರುವುದರಲ್ಲಿ ಹಲವು ಭಿನ್ನತೆಯಿಂದ ಕೊಡಿವೆ. ಅವುಗಳನ್ನು ಕೆಳಗಿನಂತೆ ಗಮನಿಸಬಹುದು.

ಉದಾಹರಣೆಗೆ: ಕುರುಡಿ, ಕುಂಟಿ, ಕಿವುಡಿ, ಹುಡುಗಿ

ಈ ಬಗೆಯ ನಾಮಪದಗಳನ್ನು ಮೊದಲು ಪುಲ್ಲಿಂಗ ವಾಚಕಗಳಾದ ಕುಂಟ, ಕಿವುಡ,

ಹುಡುಗ, ಕುರುಡ  ಎಂಬ ರೂಪಗಳಿಗೆ-'ಇ'- ಎಂಬ ಸ್ತ್ರೀ ಲಿಂಗ ಸೂಚಕಗಳನ್ನು ಹಚ್ಚಿ ನಂತರ ಸಾಧಿಸಲಾಗುತ್ತದೆ ಎಂದು ಹೇಳುತ್ತಾರೆ. ಮಹಿಳೆಯನ್ನು ಪ್ರತಿನಿಧಿಸದಂತಹ ಪದಗಳನ್ನು ಮತ್ತು ಪುರುಷನನ್ನು ಪ್ರತಿನಿಧಿಸದಂತಹ ಪದಗಳು ವಾಸ್ತವವಾಗಿ ಅವುಗಳು ಧ್ವನಿಸುತ್ತೀರುವಂತ ಅರ್ಥವೆ ಬೇರೆ ಅಧ್ಯನಕಾರರು ವಿವರಿಸಿಕೊಳುತ್ತಿರುವಂತಹ ಪರಿಕಲ್ಪನೆಯೇ ಬೇರೆ. ಈ ಪರಿಕಲ್ಪನೆಯನ್ನು ವಿವರಿಸುತ್ತಿರುವವರು ಪೂರ್ವ ಕಲ್ಪಿತರಾಗಿದ್ದಾರೆ ಎಂದು ಹೇಳಬಹುದು.

ಏಕೆಂದರೆ ಮೇಲೆ ವಿವರಿಸಿದಂತಹ ಪದಗಳ ಮೂಲಪದವನ್ನು ಕೆಳಗಿನಂತೆ ಗಮನಿಸಬಹುದು.

ಉದಾಹರಣೆಗೆ; ಕುರುಡು, ಕುಂಟು, ಕಿವುಡು, ಹುಡುಗು

ಈ ಮೂಲ ಪದಗಳು ಸಾಮಾಜಿಕ ಅಥವಾ ಭಾಷಾ ಬಳಕೆಯಲ್ಲಿ ಬಳಕೆಗೊಳ್ಳುತ್ತಿರುವ ವಿಧಾನಗಳ ಭಿನ್ನ ಅರ್ಥೈಸಿಕೊಳ್ಳುತ್ತಿರುವಂತಹ ವಿಧಾನ ಬೇರೆ

ಉದಾಹರಣೆ: ಅವಳ/ಅವನ-ಕಣ್ಣು ಕುರುಡು

ಅವಳ/ಅವನ-ಕಾಲು ಕುಂಟು

ಅವಳ/ಅವನ-ಕಿವಿ ಕಿವುಡು

ಅವಳ/ಅವನ-ಬುದ್ದಿ ಹುಡುಗು

ಹೀಗೆ ಈ ಪದಗಳೂ ಬಳಕೆಯಲ್ಲಿ ಅರ್ಥವನ್ನು ಹೊಂದುತ್ತವೆ. ಇವುಗಳಿಗೆ ಪುರುಷನನ್ನು ಗುರುತಿಸಲು 'ಅ' ಪ್ರತ್ಯಯವನ್ನು ಬಳಸಲಾಗುತ್ತದೆ.

ಉದಾಹರಣೆಗೆ: ಕುರುಡು+'ಅ'-ಕುರುಡ

ಕುಂಟು+'ಅ'-ಕುಂಟ

ಕಿವುಡು+'ಅ'-ಕಿವುಡ

ಹುಡುಗು+'ಅ'-ಹುಡುಗ

ಮಹಿಳೆಯನ್ನು ಗುರುತಿಸಲೂ 'ಇ' ಪ್ರತ್ಯೇಯವನ್ನ ಬಳಸಿಕೊಳ್ಳಲಾಗುತ್ತದೆ.

ಉದಾಹರಣೆಗೆ: ಕುರುಡು+'ಇ'-ಕುರುಡಿ

ಕುಂಟು+'ಇ'-ಕುಂಟಿ

ಕಿವುಡು+'ಇ'-ಕಿವುಡಿ

ಹುಡುಗು+'ಇ'-ಹುಡುಗಿ

ಹಾಗಾದರೆ ಮೇಲಿನ ಉದಾಹರಣೆಗಳಿಂದ ತಿಳಿದು ಬರುವ ಸಂಗತಿಯೆಂದರೆ ಮಹಿಳೆಯ

ಭಾಷೆಯನ್ನು ಗುರುತಿಸುತ್ತಿರುವಂತಹವರ ಪ್ರಕಾರ ತಾರತಮ್ಯವಿಲ್ಲ. ಅದು ಭಾಷೆ ಒಳಗಡೆಯ ಭಿನ್ನತೆ.

ಅಂದರೆ ಮಹಿಳಾ ಅಧ್ಯಯನಕಾರರು ಭಾಷಾ ಕುರಿತಾದ ಅಧ್ಯಯನಕಾರರ ತಾರತಮ್ಯ ಎಂಬ ಗ್ರಹಿಕೆ ತಪ್ಪಾಗಿದೆ. 'ತಾರತಮ್ಯ' ಎಂಬ ಪರಿಕಲ್ಪನೆಯನ್ನು ಅರ್ಥಮಾಡಿಕೊಳ್ಳುವುದರಲ್ಲಿ ಈ ಬಗೆಯ ತಪ್ಪು ಗ್ರಹಿಕೆಗಳಿವೆ.

ಹಾಗೆಯೇ ಇನ್ನು ಅನೇಕ ಪದಗಳು ಈ ರೀತಿಯಲ್ಲಿ ಲಿಂಗ ಭಿನ್ನತೆಯನ್ನು ಒಳಗೊಂಡಪದಗಳಾಗಿವೆ. ಅವುಗಳು ಸಹ ತಾರತಮ್ಯತೆಯಿಂದ ಕೂಡಿವೆ.

ಶಿಕ್ಷಕ–ಶಿಕ್ಷಕಿ

ಅಧ್ಯಕ್ಷ–ಅಧ್ಯಕ್ಷಣೀ/ಅಧ್ಯಕ್ಷೆ

ಮಂತ್ರಿ–ಮಂತ್ರಿಣಿ

ಸಚಿವ–ಸಚಿವೆ.

ಈ ಬಗೆಯ ಪದಗಳು ಲಿಂಗ ಭಿನ್ನತೆ/ಲಿಂಗ ವ್ಯತ್ಯಾಸವನ್ನು ಸೂಚಿಸುವ ಪದಗಳೆ ಹೊರತು ತಾರತಮ್ಯವಲ್ಲ. ಆದರೆ ಮಹಿಳಾ ಅಧ್ಯಯನದಲ್ಲಿ ಲಿಂಗತಾರತಮ್ಯ ಎಂದು ಅಧ್ಯಯನಮಾಡಲಾಗಿದೆ.

ಕೆಲವು ಪದಗಳು ಲಿಂಗತಟಸ್ಥವಾಗಿರುವಂತಹ ಪದಗಳು ಕನ್ನಡ ಬಳಕೆಯ ಭಾಷೆಯಲ್ಲಿ ಇವೆ. ಆದರೆ ಈ ಬಗೆಯ ಪದಗಳು ಪುರುಷನನ್ನು ಮಾತ್ರ ಸೂಚಿಸುತ್ತವೆ ಎಂದು 'ಇ' ಮತ್ತು 'ಏ' ಆಖ್ಯಾತ ಪ್ರತ್ಯಯಗಳನ್ನು ಅನಗತ್ಯವಾಗಿ ಬಳಸಲಾಗುತ್ತಿವೆ. ಉದಾಹರಣೆಗೆ:–

ವಿದ್ಯಾರ್ಥಿ–ವಿಧ್ಯಾರ್ಥಿನಿ

ಪ್ರಾಂಶುಪಾಲ–ಪ್ರಾಂಶುಪಾಲೆ

ಎಂಬ ಪದಗಳನ್ನು ಬಳಸುತ್ತಾರೆ. ಇಲ್ಲಿ ವಿದ್ಯಾರ್ಥಿ ಪ್ರಾಂಶುಪಾಲ ಈ ಪದಗಳು ಲಿಂಗತಟಸ್ಥ ಪದಗಳು ಆದರೆ ಬಳಕೆಯಲ್ಲಿ ಇವುಗಳನ್ನು ಪುರುಷವಾಚಿಪದಗಳೆಂದು ಕನ್ನಡ ಭಾಷಿಕರು ಭಾವಿಸಿ ತಪ್ಪಾಗಿ ಬಳಸುತ್ತಿದ್ದಾರೆ. ಇದೇ ರೀತಿಯಾಗಿ ಕೆಲವು ಪದಗಳಿವೆ.

ಓಟಗಾರ–ಓಟಗಾರ್ತಿ

ಹಾಡುಗಾರ–ಹಾಡುಗಾರ್ತಿ

ಹೂವಾಡಿಗ–ಹೂವಾಡಗಿತ್ತಿ

ಗಟ್ಟಿಗ–ಗಟ್ಟಿಗಿತ್ತಿ

ಈ ಪದಗಳನ್ನು ಮಹಿಳಾ ಆಧ್ಯಯನಕಾರರು ಲಿಂಗತಾರತಮ್ಯ ಎಂದು ಅಧ್ಯಯನ ಮಾಡುತ್ತಿದ್ದಾರೆ. ಕನ್ನಡ ವ್ಯಾಕರಣ ಪರಿಭಾಷೆಯಲ್ಲಿ ತದ್ಧಿತಾಂತ ಪ್ರತ್ಯೆಯಗಳು ಇರುವುದನ್ನು ಮಹಿಳಾ ಅಧ್ಯಯನಕಾರರರು ಗ್ರಹಿಸುತ್ತಿಲ್ಲ. ಇವು ಲಿಂಗ ಭಿನ್ನತೆಯನ್ನು ಸೂಚಿಸುವ ಪದಗಳಾಗಿವೆ.

ಸಾಮಾಜಿಕ ಲಿಂಗವು ಸಾಂಸ್ಕೃತಿಕ ಉತ್ಪನ್ನ[೧೦] "(ಮಹಿಳಾ ಆಧ್ಯಯನ ಸಮಾಜ ಶಾಸ್ತ್ರೀಯ ದೃಷ್ಟಿಕೋನ ಸುಧಾ ಸೀತಾರಾಮನ್ ಪು.ಸಂ.೧೦ ಸ್ತ್ರೀಲೇಖ ಪ್ರಕಟಣೆ ಪ್ರಮು.೨೦೧೦)

ಪಾಶ್ಚಿಮಾತ್ಯರಿಂದ ಬರುತ್ತಿರುವ ಸಿದ್ಧಾಂತಗಳು ಪದ ಬಳಕೆಗಳು ಕೆಲವೊಮ್ಮೆ ಮೂಲ ಅರ್ಥ ಮತ್ತು ಉದ್ದೇಶಕ್ಕಿಂತ ಭಿನ್ನವಾಗಿಲ್ಲ. ಭಾಷೆ ಒಳಗಡೆ ಭಾಷೆಗೂ ಇರುವಂತಹ ಮಿತಿಗಳನ್ನು, ಭಾಷೆಯ ಲಕ್ಷಣಗಳನ್ನು, ಭಾಷೆಯ ಗುಣಗಳಾವು, ಎಂದು ಅರ್ಥಮಾಡಿಕೊಂಡು ನಂತರದಲ್ಲಿ ಭಾಷೆಯ ವಿಚಾರಗಳ ಬಗ್ಗೆ ಅಧ್ಯಯನ ಮಾಡುವುದು ಸರಿಯಾದ ಕ್ರಮವಾಗುತ್ತದೆ. ಜೊತೆಗೆ ಸಮಾಜಕ್ಕೂ ಭಾಷೆಗೂ ಇರುವಂತಹ ಸಂಬಂಧ ಎಂಥಹದು ಸಮಾಜದಲ್ಲಿಯೋ ಭಾಷೆ ಇರುವುದರಿಂದ ಒಂದಲ್ಲೊಂದು ಪೂರಕವಾಗಿ ಅರ್ಥಮಾಡಿಕೊಳ್ಳಬೇಕು. ನಂತರ ಅವುಗಳ ಸಂಬಂಧವನ್ನು ಮತ್ತು ಲಿಂಗ ತಾರತಮ್ಯತೆಯನ್ನು ಗುರುತಿಸಿದಾಗ ಬರುವಂತಹ ಫಲಿತ ಬೇರೆಯಾಗಿರುತ್ತದೆ. ಜೊತೆಗೆ ಭಾಷೆಯಲ್ಲಿ ವಾಸ್ತವವಾಗಿ ತಾರತಮ್ಯ ನಡೆಯುತ್ತಿರುವಂತಹದು ಎಲ್ಲಿ ಎಂಬುದು ಗುರುತಿಸಲು ಸಾಧ್ಯವಾಗುತ್ತದೆ.

ಭಾಷಿಕ ರಚನೆಗಳು ಮತ್ತು ಬಳಕೆಗಳನ್ನು ವಿಶ್ಲೇಷಿಸಿದಂತೆ ಸಮಕಾಲೀನ ಬಳಕೆಯ ಅರ್ಥಗಳನ್ನು ಹೊರತುಪಡಿಸಿ ಭಿನ್ನವಾದ ಅರ್ಥಗಳು ದೂರೆಯುತ್ತಾ ಹೋಗುತ್ತವೆ. ಉದಾಹರಣೆಗೆ

೧) ಡಾಕ್ಟರ್

೨) ಡ್ರೈವರ್

೩) ಕಂಡಕ್ಟರ್

ಈ ಪದಗಳು ಪುರುಷ ಸೂಚಕಗಳೆಂದು ಮಹಿಳಾ ಅಧ್ಯಯನಕಾರರು ಪ್ರತಿಪಾದಿಸುತ್ತಿದ್ದಾರೆ. ಜನರ ಬಳಕೆಯಲ್ಲಿ ಈ ಪದಗಳನ್ನು ಪುರುಷ ವಾಚಕಗಳೆಂದು ಭಾವಿಸಿ ಈ ಪದಗಳ ಮುಂದೆ ಹಿಂದೆ 'ಲೇಡಿ' 'ವುಮನ್'; ಮೇಲ್ 'ಸ್ತ್ರೀ' 'ಮಹಿಳಾ', ಎಂದು ವಿವರಗಳನ್ನು ಹಚ್ಚಲಾಗುತ್ತಿದೆ.

ನಿಜ ಅರ್ಥದಲ್ಲಿ ಈ ಪದಗಳು ಲಿಂಗ ತಟಸ್ಥವಾದಂತಹ ಪದಗಳಾಗಿವೆ. ಇವುಗಳು ಅರ್ಥಗ್ರಹಿಕೆಯಲ್ಲಿ ಮಹಿಳಾ ಅಧ್ಯಯನಕಾರರು ಹಾಗೂ ಬಳಸುತ್ತಿರುವ ಜನರು ತಪ್ಪಾಗಿ ಗ್ರಹಿಸುತ್ತಿದ್ದಾರೆ.

ಸಮಾಜದಲ್ಲಿ ಇಂತಿಂತ ಕೆಲಸಗಳಲ್ಲಿ ಹೆಂಗಸರು, ಗಂಡಸರು ಪ್ರವೃತ್ತರಾಗುವುದೇ ಸಹಜ ಎಂಬುದು ಸಮಾಜದಲ್ಲಿ ಗ್ರಹಿತವಾಗಿದೆ. ಭಾಷೆಯಲ್ಲಿ ಆಯಾ ವೃತ್ತಿನಿರತ ವ್ಯಕ್ತಿಯನ್ನು ಸೂಚಿಸುವ ಲಿಂಗ ಸೂಚಿ ಪದಗಳಿಲ್ಲ ಎಂಬುದು ಈ ಗ್ರಹಿಕೆಯ ಸೂಚಕವಾಗಿದೆ.

ಉದಾಹರಣೆಗೆ:

೧) ಪೋಸ್ಟ್ ಮ್ಯಾನ್

೨) ವೀರ

೩) ಯೋಧ

೪) ಸೈನಿಕ

ಇತ್ತೀಚೆಗೆ ಮಹಿಳೆಯರು ಈ ಕೆಲಸಗಳನ್ನು ನೆರವೇರಿಸುತ್ತಿದ್ದಾರೆ. ಇದಕ್ಕೆ ಲಿಂಗ ತಟಸ್ಥ ಪದಗಳ ಅಗತ್ಯವಿದೆ.

ಕನ್ನಡ ಭಾಷೆಯ ವಾಕ್ಯರಚನೆಯಲ್ಲು ಸಹ ಕೆಲವು ಬಗೆಯ ಲಿಂಗ ತಾರತಮ್ಯತೆಗಳನ್ನು ಮಹಿಳಾವಾದಿಗಳು ಗುರುತಿಸುತ್ತಾರೆ. ಆದರೆ ಅವುಗಳಿಗೆ ಪರಿಹಾರ ಮಾತ್ರ ಗುರುತಿಸುವುದಿಲ್ಲ. ಆದರೆ ಲಿಂಗತಟಸ್ಥವಾದ ವಾಕ್ಯರಚನೆಯನ್ನು ಗುರುತಿಸುವುದು ಅಗತ್ಯವಾಗಿದೆ. ಈ ಅಧ್ಯಯನದ ಮುಖಾಂತರ ಅಂತಹದೊಂದು ಪ್ರಯತ್ನ.

ಉದಾಹರಣೆಗೆ:– ಬಳಕೆಯಲ್ಲಿ ಇರುವ ವಾಕ್ಯರಚನೆ/ಲಿಂಗತಾರತಮ್ಯತೆಯಿಂದ ಕೂಡಿದ್ದು.

- ಮಾನವ ಪ್ರಗತಿ ಪಥದಲ್ಲಿದ್ದಾನೆ
- ಮಗು ಬೆಳೆಯುತ್ತಾನೆ.
- ವಿಜ್ಞಾನಿ ಸಂಶೋಧಿಸುತ್ತಾನೆ.
- ಈಜುಗಾರನ ಸಾಮರ್ಥ್ಯ
- ಸಂಗೀತಗಾರನ ಲಹರಿ
- ಸಾಹಿತಿಯಾದವನ ನಿಲುವು
- ರೋಗಿಷ್ಠನಾದ ವ್ಯಕ್ತಿ

ಈ ಮೇಲಿನ ವಾಕ್ಯರಚನೆಗಳು ಲಿಂಗತಾರತಮ್ಯತೆಯಿಂದ ಕೂಡಿವೆ ಎಂದು ಮಹಿಳಾ ಅಧ್ಯಯನಕಾರರರು ವಿವರಿಸುತ್ತಿದ್ದಾರೆ. "ಇಲ್ಲಿನ ಕರ್ತೃಪದಗಳು ಪುರುಷ ಸೂಚಿಗಳೆ ಎಂಬುದಕ್ಕೆ ಆ ಸಂದರ್ಭಗಳು ಕಾರಣಗಳನ್ನೊದಗಿಸಿಲ್ಲ. ಆದರೆ ಪುರುಷನು ಮಾತ್ರವೆ ಗಣನೆಗೆ ಬರುವವನು ಎಂಬ ಸಾಮಾಜಿಕ ಚಿಂತನೆಗೆ ಈ ನಿಯಮ ದ್ಯೋತಕವಾಗಿದೆಯಷ್ಟೇ"[೧೧] ಎಂದು ವಿವರಿಸುತ್ತಿದ್ದಾರೆ. ಮೇಲಿನ ವಾಕ್ಯರಚನೆಯಲ್ಲಿ ಕೆಲವು ವಾಕ್ಯಗಳು ಲಿಂಗ ಭಿನ್ನತೆಗಳಿಂದ ಕೂಡಿವೆ. ಇನ್ನೂ ಕೆಲವು ಲಿಂಗ ತಾರತಮ್ಯತೆಗಳಿಂದ ಕೂಡಿವೆ ಉದಾಹರಣೆಗೆ ಸಂಗೀತಗಾರನ ಲಹರಿ ಈ ವಾಕ್ಯವನ್ನು ಮಹಿಳೆಗೂ ಬಳಸಬಹುದು ಸಂಗೀತಗಾರಳ ಲಹರಿ ಎಂದು ವೈಯಕ್ತಿಕವಾಗಿ ಈ ವಾಕ್ಯರಚನೆಯನ್ನು ಮಂಡಿಸಬಹುದು. ಸಾಮೂಹಿಕವಾಗಿ ಇಬ್ಬರನ್ನು ಒಳಗೊಂಡಂತೆ ಈ ವಾಕ್ಯವನ್ನು ಸಂಗೀತಗಾರರ ಲಹರಿ ಎಂದು ಬಳಸಬಹುದು ಇದು ಸಾಂದರ್ಭಿಕವಾಗಿ ವಾಕ್ಯ ರಚನೆ ಭಿನ್ನವಾಗಿದೆ. ಆದರಿಂದ ಈ ವಾಕ್ಯ ಲಿಂಗಭಿನ್ನತೆಯಿಂದ ಕೂಡಿದೆ.

ರೋಗಿಷ್ಠನಾದ ವ್ಯಕ್ತಿ ಎಂಬ ಈ ವಾಕ್ಯ ರಚನೆಯನ್ನು ಮೇಲಿನಂತೆಯೇ ಬರೆಯಲೂ ಸಾಧ್ಯವಿದೆ.

- ಪುರುಷನನ್ನು ಕುರಿತು – ರೋಗಿಷ್ಠನಾದ ವ್ಯಕ್ತಿ
- ಮಹಿಳೆಯನ್ನು ಕುರಿತು – ರೋಗಿಷ್ಠಳಾದ ವ್ಯಕ್ತಿ
- ಲಿಂಗ ಭಿನ್ನತೆಯಿಂದ ಇಬ್ಬರಿಗು – ರೋಗಿಷ್ಠರಾದ ವ್ಯಕ್ತಿಗಳು.

ಮೇಲೆ ಹೇಳಿರುವಂತಹ ವಾಕ್ಯರಚನೆಯಲ್ಲಿ ಮಹಿಳೆಯನ್ನು ಒಳಗೊಳ್ಳದೆ ಕೇವಲ ಪುರುಷನನ್ನು ಕುರಿತು ವಿವರಿಸುವ ರೀತಿಯ ವಾಕ್ಯರಚನೆಗಳು ತಾರತಮ್ಯತೆಯಿಂದ ಕೂಡಿವೆ.

- ಮಾನವ ಪ್ರಗತಿ ಪಥದಲ್ಲಿದ್ದಾನೆ.
- ಮಗು ಬೆಳೆಯುತ್ತಾನೆ.
- ವಿಜ್ಞಾನಿ ಸಂಶೋಧಿಸುತ್ತಾನೆ.
- ಈಜುಗಾರನ ಸಾಮರ್ಥ್ಯ
- ಸಾಹಿತಿಯಾದವನ ನಿಲುವು

ಈ ಪದಗಳನ್ನು ಲಿಂಗತಟಸ್ಥವಾಗಿ ಬಳಸಲು ಸಾಧ್ಯವಿದೆ ಆದರೆ ಬಳಸುವಂತಹ ಎಲ್ಲರು ಈ ವಾಕ್ಯರಚನೆಯನ್ನು ಪುರುಷನನ್ನು ಮಾತ್ರ ಒಳಗೊಂಡಂತೆ ಮಾತ್ರ ವಿವರಿಸುತ್ತಿದ್ದಾರೆ.

ಮೇಲಿನ ವಾಕ್ಯರಚನೆಗಳನ್ನು ಲಿಂಗ ತಟಸ್ಥವಾಗಿ ಎಲ್ಲರನ್ನು ಒಳಗೊಳ್ಳುವಂತೆ ಕೆಳಕಂಡಂತೆ ಬಳಸಬಹುದು.

- ಮಾನವರು ಪ್ರಗತಿ ಪಥದಲ್ಲಿದ್ದಾರೆ.
- ಮಗು ಬೆಳೆಯುತ್ತದೆ.
- ವಿಜ್ಞಾನಿಗಳು ಸಂಶೋಧಿಸುತ್ತಾರೆ.
- ಸಾಹಿತಿಯಾದವರ ನಿಲುವು.

ಇವು ಸರಿಯಾದ ಭಾಷೆಯ ಕ್ರಮಗಳಾಗಿವೆ. ಇವುಗಳಲ್ಲಿ ಕೆಲವು ಪದಗಳು ಮೂಲತಹ ಭಾಷೆಯೊಳಗಡೆ ಲಿಂಗಾತೀತವಾದ ಪದಗಳಿವೆ ಅವುಗಳ ಬಳಕೆಯಲ್ಲಿ ಈ ಬಗೆಯ ಪದಗಳನ್ನು ಪುರುಷವಾಚಿಯಾಗಿ ಬಳಸಲಾಗುತ್ತದೆ. ಉದಾಹರಣೆಗೆ:– ಮಗು ಇದು ಪುಲಿಂಗಸೂಚಕ ಪದವಲ್ಲ ಇದು ನಪುಂಸಕಲಿಂಗ ಸೂಚಕ ಪದ. ಆದರೆ ವಾಕ್ಯರಚನೆಯಲ್ಲಿ ಈ ಪದವನ್ನು ಪುಲ್ಲಿಂಗವಾಗಿ ಬರೆಯಲಾಗುತ್ತದೆ. ಹಾಗೆನೆ ವಿಜ್ಞಾನಿ ಎಂಬ ಪದ ಇದಕ್ಕೆ ಯಾವುದೇ ಲಿಂಗವಿಲ್ಲ. ಆದರೆ ವಿಜ್ಞಾನಿ ಅಂದಕ್ಷಣ ಕೇವಲ ಅವನನ್ನು ಇಲ್ಲಿ ತಕ್ಷಣ ನೆನಪಾಗುವುದು ಪುರುಷ ಎಂಬ ಕಲ್ಪನೆ ಎಲ್ಲರಲ್ಲಿ ಅಡಗಿದೆ. ಅದಕ್ಕಾಗಿ ಭಾಷೆಯನ್ನು ಸರಿಯಾದ ಕ್ರಮದಲ್ಲಿ ಅರ್ಥಮಾಡಿ ಕೊಳ್ಳುವುದು ಅತ್ಯಗತ್ಯ.

ಇನ್ನು ಕೆಲವು ಪದಗಳು ಮೇಲ್ಕಂಡಂತೆಯೆ ಬಳಕೆ ಆಗಿವೆ ಉದಾಹರಣೆಗೆ :– ಮನುಷ್ಯ, ಮಾನವ ಈ ಪದಗಳನ್ನು ಮನುಷ್ಯರು ಮಾನವರು ಎಂದು ಬಳಸಿದರೆ ಎಲ್ಲರನ್ನು ಒಳಗೊಂಡಂತೆ ಆಗುತ್ತದೆ. ಕೆಲವರು ಮನುಷ್ಯ, ಮಾನವ ಎಂದು ಬಳಸಿದರೆ ಇದು ಕೇವಲ ಪುರಷನನ್ನು ಮಾತ್ರ ಉದ್ದೇಶಿಸಿದ್ದೆ ಎಂದಾಗುತ್ತದೆ. ಮತ್ತು ಕೇವಲ ಪುರುಷನನ್ನು ಕುರಿತೆ ವಿವರಿಸಿದಂತಾಗುತ್ತದೆ. ಇದರಲ್ಲಿ ಮಹಿಳೆ ಇರುವುದಿಲ್ಲ.

ಇನ್ನು ಕೆಲವಂದಿಷ್ಟು ಪದಗಳು ಕೇವಲ ಪುರಷನನ್ನು ಮಾತ್ರ ಸೂಚಿಸುತ್ತದೆ. ಎಂದು ತಿಳಿದು ಆ ಪದಗಳ ಹಿಂದೆ ಮುಂದೆ ಸ್ತ್ರೀಲಿಂಗ ಸೂಚಕ ಪದಗಳನ್ನು ಬಳಸುತ್ತಾರೆ.

ಉದಾಹರಣೆಗೆ:–

- ಹೆಡ್‌ಮಾಸ್ಟರ್–ಹೆಡ್‌ಮೇಡಂ
- ಮಾಸ್ಟರ್– ಮೇಡಂ/ಟೀಚರ್

- ವಿದ್ಯಾರ್ಥಿ–ವಿದ್ಯಾರ್ಥಿನಿ
- ಉಪಾಧ್ಯಾಯ–ಉಪಧ್ಯಾಯಿನಿ
- ದಲಿತ–ದಲಿತೆ
- ಎಂಪಿ–ಎಂಪಿಣಿ
- ಪೋಲೀಸ್–ಪೋಲೀಸಿಣಿ
- ವಕ್ತಾರ–ವಕ್ತಾರಿಣಿ
- ಕಾರ್‍ಯದರ್ಶಿ–ಕಾರ್‍ಯದರ್ಶಿನಿ

ಮೇಲಿನ ಪದಗಳಲ್ಲಿ ಪುರುಷ ಸೂಚಕವಾಗಿ ಭಾವಿಸಿ ಬಳಕೆಗೊಳುತ್ತಿರುವಂತಹ ಪದಗಳು ಮೂಲತಹ ಅವು ಲಿಂಗಾತೀತವಾಗಿರುವ ಪದಗಳು. ಇವುಗಳನ್ನು ಪುರುಷನಿಗೆ ಮಾತ್ರ ಎಂದು ಭಾವಿಸಿ ಮಹಿಳೆಯರಿಗಾಗಿ ಬೇರೆ ಪದಗಳನ್ನು ವಿವರಿಸುತ್ತಿದ್ದಾರೆ. 'ಮಾಸ್ಟರ್' ಎಂಬ ಪದ ವಿಷಯದಲ್ಲಿ ಪರಿಣತೆ ಎಂದಾಗುತ್ತದೆ. ಆದರೆ 'ಮಾಸ್ಟರ್'ನನ್ನು ಕೇವಲ ಪುರುಷನೆಂದು ತಪ್ಪಾಗಿ ಭಾವಿಸಲಾಗುತ್ತಿದೆ. ಹಾಗಾಗಿ ಮಹಿಳೆಯನ್ನು ಕುರಿತಂತೆ ವಿವರಿಸುವಾಗ 'ಮೆಡಂ' ಮಿಸ್ಸ್, ಟೀಚರ್ ಎಂದು ಬಳಕೆ ಮಾಡಲಾಗುತ್ತದೆ. ಇಲ್ಲಿ 'ಟೀಚರ್' ಎಂದರು ಲಿಂಗಾತೀತವಾದ ಪದವಾಗಿದೆ. ಆದರೆ ಕನ್ನಡ ಸಂದರ್ಭದಲ್ಲಿ ಈ ಪದವನ್ನು ಮಹಿಳೆಗೆ ಮಾತ್ರ ಬಳಕೆಮಾಡುತ್ತಿದ್ದಾರೆ. ಈ ಪದದ ಅರ್ಥ ಕೇವಲ ಬೋಧಿಸುವವರು ಅಷ್ಟೇನೆ, ಅದರೆ ಇಲ್ಲಿ ಟೀಚರ್ ಎಂದರೆ ಬೋಧಿಸುವ ಮಹಿಳೆ ಎಂದಾಗಿದೆ.

ಹಾಗೆನೇ 'ನರ್ಸ್' ಪದವು ಸಹ ಕೇವಲ ಮಹಿಳೆಯನ್ನು ಸೂಚಿಸುವ ಪದವಾಗಿದೆ. ಇತ್ತೀಚಿಗೆ 'ಮೇಲ್ ನರ್ಸ್'ಗಳು ಎಂಬ ಪದ ಬಳಕೆಯಾಗುತ್ತೀರುವುದು, ಹೀಗೆ ಹಲವಾರು ವೃತ್ತಿಸೂಚಕ ಪದಗಳನ್ನು ಬಳಸಲಾಗಿದೆ.

ಪುರುಷನನ್ನು ಒಳಗೊಂಡಿರುವಂತಹವುಗಳು ಎಂದು ಭಾವಿಸಿಕೊಂಡು ಅವುಗಳ ಮುಂದೆ ಹಿಂದೆ ಮೇಡಂ, ಲೇಡಿ, ವುಮನ್, ಮಹಿಳಾ ಸ್ತ್ರೀ, ಎಂಬ ಪದಗಳನ್ನು ಬಳಸುತ್ತಿದ್ದಾರೆ.

ವ್ಯಾಕರಣ ಪರಿಭಾಷೆಯಲ್ಲಿ ವಿವರಿತವಾಗಿರುವಂತ ಪದಗಳನ್ನು ಮಹಿಳಾವಾದಿಗಳು ಸರಿಯಾಗಿ ಗ್ರಹಿಸದೆ ಕೆಲವು ಪದಗಳನ್ನು ಲಿಂಗ ತಾರತಮ್ಯತೆ ಎಂದು ವಿವರಿಸಿ ಬಿಡುತ್ತಿದ್ದಾರೆ. ಅಂತಹ ಪದಗಳು ಕೆಳಕಂಡಂತೆ ನೋಡಬಹುದು.

ಉದಾಹರಣೆಗೆ:-

- ಓಟಗಾರ-ಓಟಗಾರ್ತಿ
- ಹಾಡುಗಾರ-ಹಾಡುಗಾರ್ತಿ
- ಹೂವಾಡಿಗ-ಹೂವಾಡಗಿತ್ತಿ
- ಗಟ್ಟಿಗ-ಗಟ್ಟಿಗಿತ್ತಿ

ಈ ಮೆಲಿನ ಪದಗಳು ತದ್ದಿತಾಂತ ಪ್ರತ್ಯೆಯಗಳು, ವ್ಯಾಕರಣ ಪರಿಭಾಷೆಯಿಂದ ವಿವರಿಸಿದಾಗ ಕನ್ನಡದಲ್ಲಿ ಇವುಗಳು ಮೂಲತಹ ತಾರತಮ್ಯ ಎಂದು ಗ್ರಹಿಸುವುದು ತಪ್ಪು.

ಕನ್ನಡದಲ್ಲಿ ಈ ಬಗೆಯ ವಿಚಾರವೆ ಇಲ್ಲ. ಅಂದರೆ ತಾರತಮ್ಯತೆ ಎಂಬುದೆ ಇಲ್ಲ!. ಇರುವುದು ಲಿಂಗ ಭಿನ್ನತೆ ತಾರತಮ್ಯತೆ ಎಂದು ವಿವರಿಸಿಕೊಳ್ಳಲಾಗಿದೆ ಎಂಬುದಲ್ಲ ತಾರತಮ್ಯತೆ ಭಾಷೆಯೋಳಗಡೆ ಇದೆ. ಅದು ಹೇಗಿದೆ ಎಂದರೆ ನಮ್ಮ ಸಮಾಜದಲ್ಲಿ ಇರುವುದು ಭಾಷೆಯಲ್ಲಿ ಪ್ರಕಟವಾಗುತ್ತದೆ.

ಸಮಾಜ ವ್ಯವಸ್ಥೆಯಲ್ಲಿ ಇರುವಂತಹ ಜಾತಿ ವ್ಯವಸ್ಥೆ ಸಹ ಆಳವಾಗಿ ಬೇರೂರಿದೆ. ಇದರಲ್ಲಿಯೂ ಮಹಿಳೆ ಶೂದ್ರತೆಯಿಂದ ಕಡೆಗಣಿಸಲಾಗಿದೆ. ಕೇವಲ ಪುರುಷನನ್ನು ಒಳಗೊಂಡಿರುವಂತಹ ಭಾಷೆ ಬಳಕೆಯಲ್ಲಿದೆ. ಇಲ್ಲಿಯೂ ಸಹ ಮಹಿಳೆಯನ್ನು ಭಾಷೆಯಲ್ಲಿ ಕಡೆಗಣಿಸಲಾಗಿದೆ, ಎಂದು ಕೆಲವು ಪದಗಳನ್ನು ಗುರುತಿಸುತ್ತಿದ್ದಾರೆ. ಅಧ್ಯಯನಕಾರರು ವೃತ್ತಿಯಲ್ಲಿ ಪ್ರತಿನಿಧಿಸುತ್ತಿರುವಂತಹ ಪದಗಳು ಸಮಾಜದಲ್ಲಿ ಕೇವಲ ಪುರುಷನನ್ನು ವಿವರಿಸುತ್ತಿವೆ.

ಉದಾಹರಣೆಗೆ:-

- ಹರಣೆಗೆ
- ಗಾಣಿಗ
- ಮಡಿವಾಳ
- ಸುಣಗಾರ
- ಈಡಿಗ

ಮೊದಲಿಗೆ ವೃತ್ತಿ ಸೂಚಕವಾಗಿ ಬಳಕೆಯಲ್ಲಿ ಇದ್ದಂತಹ ಈ ಪದಗಳು ಪ್ರಸ್ತುತದಲ್ಲಿ ಜಾತಿಸೂಚಕವಾಗಿ ಬಳಕೆಯಲ್ಲಿವೆ. ಇವುಗಳ ಬಳಕೆಯ ಅರ್ಥಗಳನ್ನು ಗಮನಿಸಿದರೆ ಖಚಿತವಾಗಿ

ಅವುಗಳನ್ನು ಪುಲ್ಲಿಂಗ ಸೂಚಕಗಳಾಗಿ ವಿವರಿಸಬಹುದೇ ಹೊರತು ಇವು ಪುರುಷನಿಗೆ ಮಾತ್ರ ಮೀಸಲು ಎಂದು ಅರ್ಥಮಾಡಿಕೊಳ್ಳುವಂತಹದು ತಪ್ಪು. ಲಿಂಗ ತಾರತಮ್ಯತೆಯನ್ನು ಜಾತಿ ಶ್ರೇಣಿಕರಣ ವ್ಯವಸ್ಥೆಯಲ್ಲಿ ಲಿಂಗ ತಾರತಮ್ಯತೆಯನ್ನು ವಿವರಿಸಿಕೊಳ್ಳುವಾಗ ಅರ್ಥಮಾಡಿಕೊಳ್ಳುವ ನೆಲೆಗಳನ್ನು ಬಿಟ್ಟು ತಪ್ಪಾಗಿ ಅರ್ಥಮಾಡಿಕೊಳ್ಳಲಾಗುತ್ತದೆ. ಇವುಗಳು ಪುರುಷ ಸಂಬಂಧಿಯಾಗಿ ಅರ್ಥ ಮಾಡಿಕೊಳ್ಳಲಾಗುತ್ತಿದೆ. ಆದರೆ ಈ ಉದಾಹರಣೆಗಳು ಪುಲ್ಲಿಂಗ ಸೂಚಕಗಳಾಗಿ ವಿವರಿಸಬಹುದು.

- ಈಡಿಗರು
- ಗಾಣಿಗರು
- ಸುಣಗಾರರು

ಎಂದರೆ ಕೇವಲ ಲಿಂಗವನ್ನು ಸೂಚಿಸುವಂತಹದು ಮಾತ್ರವಲ್ಲ ಇಲ್ಲಿ ಲಿಂಗಾತೀತವಾದ ತಟಸ್ಥ ನಿಲುವು ಇದೆ. ಇದನ್ನು ವ್ಯತ್ಯಾಸ ಎನ್ನುವ ಪರಿಭಾಷೆಯಡಿಯಲ್ಲಿ ಬಳಸಹುದು. ಭಾಷಾ ಲಕ್ಷಣವಾಗಿ ಇದು ಬಳಕೆಯಾಗುತ್ತದೆ.

ಶತಮಾನಗಳಿಂದ ಮಹಿಳೆಯರು ನಾಲ್ಕುಗೋಡೆಯ ಚೌಕಟ್ಟನಲ್ಲಿ ಬಂದಿತರಾಗಿ ಪುರುಷನೆ ಹೊರಗಡೆಯ ಎಲ್ಲ ಕಾರ್ಯಗಳಲ್ಲಿ ಭಾಗವಹಿಸುತ್ತಿದ್ದಾನೆ. ಮಹಿಳೆಯ ಪ್ರವೇಶವೆ ಇಲ್ಲದಿದ್ದ ಕ್ಷೇತ್ರದಲ್ಲಿ ಪುರುಷ ಸಹಜವಾಗಿ ಪುರುಷವಾಚಿ ಭಾಷಾ ರಚನೆ ಬಳಕೆಯಲ್ಲಿದೆ. ಕಾಲನಂತರದಲ್ಲಿ ಮಹಿಳೆ ಆ ಕ್ಷೇತ್ರವನ್ನು ಪ್ರವೇಶಿಸಿದವಳು.

ಪುರುಷ ಅಧಿಕಾರ ಕೇಂದ್ರದ ಭಾಷಾಬಳಕೆಯಲ್ಲಿ ಸಹಜವಾಗಿ ಕೆಲವು ಪದಗಳು ತೊಡಕಾಗಿವೆ. ಅಂತಹ ಪದಗಳನ್ನು ಮಹಿಳೆಯರಿಗೆ ಅನ್ವಯಿಸುವಂತೆ ವಿವರಿಸಿಕೊಳ್ಳಲಾಗಿದೆ.

ಉದಾಹರಣೆ:-

- ಗಾಣಿಗಿತ್ತಿ
- ಗೌಡ್ತಿ(ಗೌಡಗಿತ್ತಿ, ಗೌಡಶ್ಯಾನಿ)
- ದಣ್ಯಮ್ಮ
- ಯಜಮಾನಮ್ಮ
- ಒಡತಿ

ಈ ಪದಗಳು ಆರಂಭದಲ್ಲಿ ಪುರುಷನಿಗೆ ಮಾತ್ರ ಸೀಮಿತವಾಗಿದ್ದವು. ಏಕೆಂದರೆ ಸಂಪತ್ತಿಗೆ ಒಡೆಯ ಅವನೆ ಆಗಿದ್ದರಿಂದ ಪುರುಷನನ್ನು ಮಾತ್ರ ಸೂಚಿಸುತ್ತಿದ್ದವು. ಈ ರೂಪಗಳನ್ನು ಪುರುಷ ಸೂಚಕ ರೂಪಗಳಿಂದ ಸಾಧಿಸಲು ಕಾರಣವಿದೆ. ಮೊದಲಿಗೆ ಪುರುಷಾಧಿಕಾರದ ಹಿಡಿತದಲ್ಲಿಯೇ ಇದ್ದ ವೃತ್ತಿ ಅಧಿಕಾರ ಕೇಂದ್ರಗಳು ಮೊದಲಿಗೆ ಪುರುಷರನ್ನೇ ಗುರುತಿಸಿವೆ.

ನಿರ್ದಿಷ್ಟ ವೃತ್ತಿ ಅಧಿಕಾರಗಳಲ್ಲಿ ನೇರ ಭಾಗಿದಾರರಲ್ಲದ ಸ್ತ್ರೀಯರನ್ನು ಆರಂಭದಲ್ಲಿ ವೃತ್ತಿಮೂಲದಿಂದ ಅಧಿಕಾರ ಮೂಲದಿಂದ ಗುರುತಿಸುವ ಅಗತ್ಯದ ಭಾಷಿಕ ಸಂದರ್ಭವೆ ಎದುರಾಗದಿರಬಹುದು ಅಂತಹ ಗುರುತಿಸುವಿಕೆಯ ಸಾಮಾಜಿಕ ಒತ್ತಾಯಗಳು ರೂಪಗೊಂಡಾಗ ಸಹಜವಾಗಿಯೇ ಭಾಷೆಯಲ್ಲಿ ಸರಳ ಮತ್ತು ಸುಲಭವಾದ ತಾಂತ್ರಿಕತೆಯಿಂದ ಸ್ತ್ರೀರೂಪಗಳನ್ನು ಸಾಧಿಸುವ ಸಾಧಿಸಿಕೋಳ್ಳುವ ಪ್ರವೃತ್ತಿ ಮೊದಲಾಗಿದೆ.

ಕೆಲವು ಲಘು ಬರಹಗಳಲ್ಲಿ ಮಹಿಳೆಯರನ್ನು ಬೇಕೆಂದೇ ಸ್ತ್ರೀಲಿಂಗ ಪ್ರತ್ಯೇಯಗಳನ್ನೋಳಗೊಂಡ "ಣಿ" ಮತ್ತು "ಇ" ಪ್ರತ್ಯೇಯಗಳನ್ನು ಬಳಸಿ ಅನಗತ್ಯ ಪದರಚನೆ ಮಾಡುತ್ತಿದ್ದಾರೆ. ಈ ಬಗೆಯ ಪದರಚನೆಗಳು ಕೇವಲ ಕೇಲವು ಲಘ ಬರಹಗಳಲ್ಲಿ ಮತ್ತು ಹಾಸ್ಯ ಬರಹಗಳಲ್ಲಿ ಬಳಕೆಯಾಗುತ್ತಿವೆ. ಇವುಗಳಿಗೆ ಕಾರಣ ಏನೆ ಇರಬಹುದು ಈ ಬಗೆಯ ಬರವಣಿಗೆಗಳಿಂದ ಭಾಷೆಯ ಒಳಗಡೆ ಲಿಂಗ ಭಿನ್ನತೆಯನ್ನು ತೋರಿಸುವ ಸೋಗಿನಿಂದ ಮಹಿಳೆಯರನ್ನು ಹಾಸ್ಯಗಳಿಗೆ ಲಘು ಬರಹಗಳಿಗೆ ಬಳಸಿಕೊಳ್ಳುತ್ತಿರುವುದಂತು ಸತ್ಯ. ಈ ಬಗೆಯ ಕೆಲವು ಉದಾಹರಣೆಗಳು ಕೆಳಕಂಡಂತಿವೆ.

- ಜಿನ್ಸ್ ದಾರಿಣಿ/ಜಿನ್ಸ್‌ಸಿಣಿ
- ಬೈಕ್ ಸವಾರಿಣೀ/ಬೈಕಿಣಿ
- ಪೋಲಿಸಿಣಿ
- ಕಂಡೆಕ್ಟರಿಣಿ

**ಚೋರಿಣಿ**

ಚೋರ ರೂಪದ ಸ್ತ್ರೀಲಿಂಗ ಮಾದರಿ

**ಡಕಾಯಿತೆ**

ಡಕಾಯತಿ ಮಾಡುವ ಹೆಂಗಸು, ಡಕಾಯಿತ ರೂಪದ ಸ್ತ್ರೀಲಿಂಗ

**ಪೋಲಿಸಿಣಿ**

ಪೋಲಿಸ್ ಪದವನ್ನು ಪುಲ್ಲಿಂಗ ರೂಪವೆಂದು ತಿಳಿದು ಅನಂತರ ಸ್ತ್ರೀಲಿಂಗ ರೂಪವನ್ನು ಪಡೆಯಲು ಪ್ರತ್ಯಯಗಳನ್ನು ಹತ್ತಿಸುತ್ತಿರುವುದು. ಇದೇ ಕ್ರಮ ಮಾಸ್ತರಿಣಿ, ಡಾಕ್ಟರಿಣಿ ರೂಪಗಳಲ್ಲೂ

ಬಳಕೆಯಾಗಿದೆ. ಆದರೆ ನರ್ಸಿಣಿ ರೂಪವಿಲ್ಲ. ಕಾರಣ ನರ್ಸ್ ಹೆಂಗಸೇ ಆಗಿರಬೇಕೆಂಬ ತಿಳುವಳಿಕೆ ಇರುವುದರಿಂದ.

**ಬಕಾಸುರಿಣಿ**

ಬಕಾಸುರ ರೂಪದ ಸ್ತ್ರೀಲಿಂಗ ರೂಪ

**ಲಂಗರುಗಾರ್ತಿ**

ಟೆಲಿವಿಶನ್ ಕಾರ್ಯಕ್ರಮಗಳನ್ನು ನಿರ್ವಹಿಸುವ ಹೆಂಗಸು. ಆಂಕರ್ ಪರ್ಸನ್‌ನ ನೇರ ಅನುವಾದ ಹಾಗೂ ಸ್ತ್ರೀಲಿಂಗ ರೂಪ. ಕನ್ನಡದಲ್ಲಿ ಸಂದರ್ಭವನ್ನು ಹೊರತುಪಡಿಸಿ ಬಳಸಿದಾಗ ತಪ್ಪು ಅರ್ಥಗಳಿಗೆ ಕಾರಣವಾಗಬಹುದು.

**ಸಂದರ್ಶಕಳು**

ಸಂದರ್ಶಕ ಪದದ ಸ್ತ್ರೀಲಿಂಗ ರೂಪ

**ಸಾಕ್ಷರಗಿತ್ತಿ**

ಪಾತರಗಿತ್ತಿ ಪದದೊಡನೆ ಪ್ರಾಸಕ್ಕಾಗಿ ರೂಪಿಸಿದ ಪದ. ಗಿತ್ತಿ ಪ್ರತ್ಯಯ ಸ್ತ್ರೀಲಿಂಗ ರೂಪಗಳನ್ನು ನೀಡುತ್ತದೆ. ಇಂಥ ರೂಪಗಳು ಕೇವಲ ನಗೆಪಾಟಲಿಗೆ ರೂಪಿಸಿರುವಂತಹವು. ಇವುಗಳ ಬಳಕೆ ಕಡಿಮೆ ಆದರು ಬಳಕೆಯಲ್ಲಿ ಇದೆ.

**ಸ್ವಾಗತಕಾರಿಣಿ**

ಸ್ವಾಗತಕಾರ ರೂಪವೊಂದಿದೆ ಎಂದು ಭಾವಿಸಿ ಅದರಿಂದ ಸ್ವಾಗತಕಾರಿಣಿ ರೂಪವನ್ನು ಪಡೆಯಲಾಗಿದೆ.

**ಹೀರೋಯಿಣಿ**

ಹೀರೋಯಿನ್‌ಗೆ ಸಂವಾದಿ ಪದ.

**ಏಕಾಂಗಿನಿ**

ವ್ಯವಸ್ಥೆಯ ವಿರುದ್ಧ ಏಕಾಂಗಿನಿಯ ಸಮರ. ಕೆಲವೊಂದು ಪದಗಳು ಪುರುಷರನ್ನು ಸೂಚಿಸುತ್ತವೆಂಬ ತಪ್ಪು ಕಲ್ಪನೆಯಿಂದ ಅದಕ್ಕೆ ಪ್ರತ್ಯಯವನ್ನು ಸೇರಿಸಿ ಸ್ತ್ರೀವಾಚಿಯನ್ನಾಗಿ ಮಾಡಲಾಗುತ್ತದೆ. ಮೇಲಿನ ಪ್ರಯೋಗ ಆ ಬಗೆಯದು.

**ಕಾರ್ಯದರ್ಶಿನಿ**

ಕಾರ್ಯದಶಿ ಪುರುಷ ವಾಚಕವೆಂದು ತಿಳಿದು ಕಾರ್ಯದರ್ಶಿನಿ ಎಂದು ಸ್ತ್ರೀವಾಚಕವನ್ನು ರೂಪಿಸಲಾಗಿದೆ.

**ಕುಡುಕಿ**

ಮದ್ಯಪಾನವನ್ನು ಚಟವಾಗಿ ಉಳ್ಳ ಹೆಂಗಸು. ಸ್ತ್ರೀವಾಚಕ ಪದ ಸೃಷ್ಟಿ ಮಾಡಲು ಮೂಲಪದದ ಕೊನೆಯ ಸ್ವರವನ್ನು ಇ ಕಾರಾಂತಗೊಳಿಸುವುದು ಒಂದು ವಿಧಾನ. ಕುರುಡ-ಕುರುಡಿ ಈ ಮಾದರಿಯಲ್ಲಿ ಬಂದಿರುವ ಹೊಸ ಪದ.

**ದಲಿತೆ**

ಕೆಳವರ್ಗದ ಮಹಿಳೆ, ಗುಣವಾಚಕವಾಗಿ ಬಂದ ದಲಿತ ಪದವನ್ನು ಪುಲ್ಲಿಂಗ ಸೂಚಕ ಎಂದು ತಿಳಿದು ಈಗ ಸ್ತ್ರೀವಾಚಿ ಪದವಾಗಿ ಮೇಲಿನ ಪ್ರಯೋಗದಲ್ಲಿ ಬಳಕೆಯಾಗಿದೆ.

**ಪಾದಚಾರಿಣಿ**

ನಡೆದು ಹೋಗುವ ಹೆಂಗಸು. ಪಾದಾಚಾರಿ ಪುಲ್ಲಿಂಗ ವಾಚಿಯೆಂದು ತಿಳಿದು ರೂಪಿಸಿರುವ ಪದ. ಆದರೆ ಪಾಚಾದಾರಿ ಎರಡೂ ಲಿಂಗಗಳಿಗೆ ಬಳಸಬಹುದಾದ ಪದ. ಸ್ತ್ರೀಲಿಂಗ ಸೂಚಿಸಬೇಕಾದಾಗ ಮಹಿಳಾ ಎಂಬುದನ್ನು ಬಳಸುವುದಿದೆ.

**ಮತದಾರಿಣಿ**

ಮತದಾನ ಮಾಡಬಹುದಾದ ಸ್ತ್ರೀ. ದಾರ, ಗಾರ ಪ್ರತ್ಯಯಗಳು ಪುರುಷನನ್ನು ಸೂಚಿಸುವುದರಿಂದ ಮಹಿಳೆಯನ್ನು ಸೂಚಿಸಲು ಈಗಾಗಲೆ ಬಳಕೆಯಲ್ಲಿರುವ ಪ್ರತ್ಯಗಳನ್ನು ಬಳಸಲಾಗುತ್ತದೆ. ಮೇಲಿನ ಪ್ರಯೋಗದಲ್ಲಿ ಇಣಿ ಪ್ರತ್ಯಯ ಬಳಸಲಾಗಿದೆ.

**ಸರದಾರಿಣಿ**

ಸರದಾರ ಎಂಬ ಪದ ಪುರುಷ ವಾಚಕವಾಗಿ ಬಳಕೆಯಲ್ಲಿದೆ. ಸಾಮಾನ್ಯವಾಗಿ ಪುರುಷರೇ ಮುಖಂಡರಾಗಿ ಇರುತ್ತಿದ್ದುದರಿಂದ ಸ್ತ್ರೀವಾಚಕ ಶಬ್ದ ಬಂದಿರಲಿಲ್ಲ. ಈಗ ಬದಲಾದ ಪರಿಸ್ಥಿತಿಗೆ ಅನುಗುಣವಾಗಿ ಬಂದಿರುವ ಪದ ಇದಾಗಿದೆ.

**ಚಿತ್ರಕಾರಣಿ**

ಕನ್ನಡದಲ್ಲಿ ಚಿತ್ರಕಾರ ಪುಲ್ಲಿಂಗ ಸೂಚಕವಾಗಿ ಬಳಕೆಯಲ್ಲಿರುವುದರಿಂದ ಸ್ತ್ರೀಲಿಂಗ ಸೂಚಕವಾಗಿ ಚಿತ್ರಕಾರಣಿ ಪದವನ್ನು ಪ್ರಯೋಗ ಮಾಡಲಾಗಿದೆ.

**ಚೂಡಿಧಾರಿಣಿ**

ಚೂಡಿದಾರ ಎನ್ನುವ ಪದದಲ್ಲಿ ಎಲ್ಲಿಯೂ ಲಿಂಗ ಸೂಚಕವಿಲ್ಲ. ಮತ್ತೆ ಈ ಬಗೆಯ ಉಡುಪನ್ನು ಕೇವಲ ಮಹಿಳೆಯರು ಮಾತ್ರ ಉಡುತ್ತಾರೆ. ಆದರೆ ಅನಗತ್ಯವಾಗಿ ಇಲ್ಲಿ ಸ್ತ್ರೀಲಿಂಗ ಸೂಚಕ ಪ್ರತ್ಯಯವನ್ನು ಹಚ್ಚಿ ಪದ ರಚನೆ ಮಾಡಲಾಗಿದೆ.

**ಛತ್ರಿ ಧಾರಿಣಿ**

ಛತ್ರಿದಾರ ಪುಲ್ಲಿಂಗ ಎಂದು ತಿಳಿದು ಸ್ತ್ರೀಲಿಂಗ ಪ್ರತ್ಯಯವಾದ ಣಿ ಪ್ರತ್ಯಯವನ್ನು ಸೇರಿಸಿ ಈ ಪದ ರಚನೆ ಮಾಡಲಾಗಿದೆ.

**ಜೀನ್ಸ್‌ಧಾರಿಣಿ**

ಜೀನ್ಸ್‌ದಾರ ಎಂಬುದು ಪುಲ್ಲಿಂಗ ರೂಪ ಎಂದು ತಿಳಿದು ಜೀನ್ಸ್‌ಧಾರಿಣಿ ಎಂಬ ಸ್ತ್ರೀಸೂಚಕ ಪದ ರಚನೆ ಮಾಡಲಾಗಿದೆ.

**ಅನುರಾಗಿಣಿ**

ಅನುರಾಗಿ ಪುಲ್ಲಿಂಗ ಎಂದು ತಿಳಿದು ಣಿ ಸ್ತ್ರೀ ಸೂಚಕ ಪ್ರತ್ಯಯ ಸೇರಿಸಿ ಸ್ತ್ರೀಲಿಂಗವಾಗಿ ಬಳಕೆ ಮಾಡಲಾಗಿದೆ.

**ಆಹ್ವಾನಿತೆ**

ಕನ್ನಡದಲ್ಲಿ ಅ ಕಾರಾಂತ ಪದಗಳೆಲ್ಲ ಪುಲ್ಲಿಂಗವಾದರೆ ಇ ಮತ್ತು ಎ ಕಾರಾಂತ ಪದಗಳು ಸ್ತ್ರೀಲಿಂಗಗಳಾಗುತ್ತವೆ ಎಂಬುದು ಒಂದು ಅಭಿಪ್ರಾಯವಿದೆ. ಮೇಲಿನ ಪದವು ಈ ನಿಯಮದಲ್ಲಿ ರಚನೆಯಾದಂತಿದೆ. ಪುರುಷ ಕೇಂದ್ರಿತವಾಗಿ ಆಹ್ವಾನಿತ ಪದ ಬಳಕೆಯಲ್ಲಿದೆ.

**ಉಗ್ರಗಾಮಿನಿ**

ಉಗ್ರಗಾಮಿ ಪದವನ್ನು ಪುಲ್ಲಿಂಗ ರೂಪವೆಂದು ತಿಳಿಯಬೇಕೆಂಬ ಒತ್ತಾಯವಿಲ್ಲದಿದ್ದರೂ ಸಾಮಾನ್ಯವಾಗಿ ನಾವು ಅದನ್ನು ಪುಲ್ಲಿಂಗರೂಪವೆಂದು ತಿಳಿದು, ಅನಂತರ ಸ್ತ್ರೀಲಿಂಗ ರೂಪವನ್ನು ಪಡೆಯಲು ಪ್ರತ್ಯಯಗಳನ್ನು ಹತ್ತಿಸುತ್ತೇವೆ.

**ಎಂಪಿಣಿ**

ಎಂ.ಪಿ. ಪದವನ್ನು ಪುಲ್ಲಿಂಗ ರೂಪವೆಂದು ತಿಳಿದು ಸ್ತ್ರೀಲಿಂಗ ರೂಪವನ್ನು ಪಡೆಯಲು ಣಿ ಪ್ರತ್ಯಯಗಳನ್ನು ಹತ್ತಿಸಲಾಗಿದೆ.

**ಕೊಲೆಗಾರಿಣಿ**

ಕೊಲೆಗಾರ ಪುಲ್ಲಿಂಗ ಎಂದು ತಿಳಿದು ಸ್ತ್ರೀಲಿಂಗ ರೂಪವಾಗಿ ಕೊಲೆಗಾರಿಣಿ ರೂಪವನ್ನು ತರಲಾಗಿದೆ. ಇದರ ಜೊತೆಗೆ ಕೊಲೆಗಾರ್ತಿ/ಗಾತಿ ರೂಪಗಳು ಬಳಕೆಯಲ್ಲಿವೆ.

**ಕ್ರೀಡಾಕಾರಿಣಿ**

ಕ್ರೀಡಾಕಾರ ಪದ ಈಗಾಗಲೇ ಬಳಕೆಯಾಗಿದೆ. ಮೇಲಿನ ಪದಕ್ಕೆ ಸ್ತ್ರೀಲಿಂಗ ಪ್ರತ್ಯಯವನ್ನು ಸೇರಿಸಿ ಸ್ತ್ರೀವಾಚಕ ಪದವನ್ನು ಸಾಧಿಸಲಾಗಿದೆ.

**ಡುಮ್ಮಣ್ಣಿ**

ಡುಮ್ಮಣ್ಣ ಎಂಬ ಪದಕ್ಕೆ ವಿರುದ್ಧವಾಗಿ ಡುಮ್ಮಣ್ಣಿ ಎಂಬ ಪದವನ್ನು ಬಳಕೆ ಮಾಡಲಾಗಿದೆ.

**ತ್ಯಾಗಿಣಿ**

ಣಿ ಎಂಬ ಸ್ತ್ರೀ ಸೂಚಕ ಪ್ರತ್ಯಯವನ್ನು ಸೇರಿಸಿ ಈ ಪದ ರಚನೆ ಮಾಡಲಾಗಿದೆ.

**ದುರ್ಗಿಣಿ**

ದುರ್ಗುಣ ಎಂಬ ನಾಮಪದವನ್ನು ಸ್ತ್ರೀಲಿಂಗ ಸೂಚಕ ಪ್ರತ್ಯಯವಾದ ಣಿ ಸೇರಿಸಿ ಪದರಚನೆ ಮಾಡಲಾಗಿದೆ.

**ಧುರೀಣಿ**

ಧುರೀಣ ಪದಕ್ಕೆ ವಿರುದ್ಧವಾಗಿ ಧುರೀಣಿ ಪದವನ್ನು ರಚನೆ ಮಾಡಲಾಗಿದೆ. ಧರೀಣೆ ಎಂಬ ಪದ ಈಗಾಗಲೆ ಬಳಕೆಯಲ್ಲಿದೆ.

**ನುಂಗಣ್ಣಿ**

ನುಂಗು ಕ್ರಿಯಾಪದಕ್ಕೆ ಣಿ ಸ್ತ್ರೀ ಸೂಚಕ ಪ್ರತ್ಯಯವನ್ನು ಹಚ್ಚಿ ಪದ ರಚನೆ ಮಾಡಲಾಗಿದೆ. ಅಂದರೆ ಕ್ರಿಯಾ ಪದವೊಂದು ನಾಮಪದವಾಗಿದೆ.

**ಪೂಜಾರಿಣಿ**

ಪೂಜಾರಿ ಪದ ಪುಲ್ಲಿಂಗ ಎಂದು ತಿಳಿದು ಣಿ ಸ್ತ್ರೀ ಸೂಚಕ ಪ್ರತ್ಯಯವನ್ನು ಹಚ್ಚಿ ಪದ ರಚನೆ ಮಾಡಲಾಗಿದೆ.

**ಬಾಂಬಿಣಿ**

ಬಾಂಬ್ ಎಂಬ ಇಂಗ್ಲಿಷ್ ಪದಕ್ಕೆ ಣಿ ಸ್ತ್ರೀ ಸೂಚಕ ಪ್ರತ್ಯಯ ಸೇರಿಸಿ ಬಳಕೆ ಮಾಡಲಾಗಿದೆ.

**ಬಾಸಿಣಿ**

ಇಂಗ್ಲಿಷ್ ಬಾಸ್ ಎಂಬ ಪದ ಪುರುಷ ಮತ್ತು ಸ್ತ್ರೀ ರೂಪಗಳೆರಡರಲ್ಲೂ ಬಳಕೆಯಲ್ಲಿತ್ತು. ಸಾಮಾನ್ಯವಾಗಿ ಪುರುಷರೇ ಮುಖಂಡರಾಗಿ ಇರುತ್ತಿದ್ದುದರಿಂದ ಸ್ತ್ರೀವಾಚಕ ಶಬ್ದ ಬಂದಿರಲಿಲ್ಲ. ಈಗ ಬದಲಾದ ಪರಿಸ್ಥಿತಿಗೆ ಅನುಗುಣವಾಗಿ ಬಂದಿರುವ ಪದ ಇದಾಗಿದೆ.

**ಬ್ರಹ್ಮಚಾರಿಣಿ**

ಬ್ರಹ್ಮಚಾರಿ ಪುಲ್ಲಿಂಗ ಸೂಚಕ ಪದವೆಂದು ತಿಳಿದು ಸ್ತ್ರೀಸೂಚಕ ಪ್ರತ್ಯಯವಾದ ಣಿ ಸೇರಿಸಿ ಪದರಚನೆ ಮಾಡಲಾಗಿದೆ.

**ಮಹಿಳೀಕರಣ**

ಫೆಮಿನೈಜೇಷನ್‌ಗೆ ಸಂವಾದಿಯಾಗಿ ಮಹಿಳೀಕರಣ ಪದವನ್ನು ಬಳಕೆ ಮಾಡಲಾಗಿದೆ.

**ಮಾಲೀಕಣಿ**

ಮಾಲೀಕ ಎಂಬ ಪದ ಪುರುಷ ವಾಚಕವಾಗಿ ಬಳಕೆಯಲ್ಲಿದೆ. ಮಾಲೀಕಣಿ ಸ್ತ್ರೀವಾಚಕವಾಗಿ ಬಳಕೆ ಮಾಡಲಾಗಿದೆ.

**ಮುಕುಟಧಾರಿಣಿ**

ಸ್ತ್ರೀಕೇಂದ್ರಿತ ಪದವನ್ನಾಗಿ ಣಿ ಪ್ರತ್ಯಯದೊಂದಿಗೆ ಬಳಕೆ ಮಾಡಲಾಗಿದೆ.

**ಮೇಂಬರಿಣಿ**

ಮೇಂಬರ್ ಪದಕ್ಕೆ ಸ್ತ್ರೀಸೂಚಕ ಪ್ರತ್ಯಯವಾದ ಣಿ ಸೇರಿಸಿಕೊಂಡು ಪದ ರಚನೆ ಮಾಡಲಾಗಿದೆ.

**ಮೇಸ್ತ್ರಮ್ಮ**

ಇಂಗ್ಲಿಶಿನ ಮಾಸ್ಟರ್ ಪದ ಕನ್ನಡದಲ್ಲಿ ತದ್ಭವಗೊಂಡು ಮೇಸ್ತ್ರು ಆಗಿದೆ. ಲಿಂಗಭೇದವಿಲ್ಲದೆ ಬಳಕೆಯಲ್ಲಿದೆ. ಮೇಸ್ತ್ರು ಪುಲ್ಲಿಂಗ ಎಂದು ತಿಳಿದು ಸ್ತ್ರೀಲಿಂಗ ಸೂಚಕವಾಗಿ ಮೇಸ್ತ್ರಮ್ಮ ಪದವನ್ನು ಬಳಕೆ ಮಾಡಲಾಗಿದೆ.

**ರೋಘೋತ್ಪಾದಕಿ**

ರೋಘೋತ್ಪಾದಕಿ ಎಂದು ಇ ಕಾರಂತಗೊಳಿಸಿ ರಚನೆ ಮಾಡಲಾಗಿದೆ.

**ಲಂಚಕೋರಿ**

ಲಂಚಕೋರ ಪುರುಷವಾಚಕವಾಗಿ ಗ್ರಹಿಕೆಯಲ್ಲಿರುವುದರಿಂದ ಸ್ತ್ರೀಲಿಂಗ ಪದವನ್ನಾಗಿ ಲಂಚಕೋರಿ ಪದವನ್ನು ಬಳಕೆ ಮಾಡಲಾಗಿದೆ.

**ವಕ್ತಾರಿಣಿ**

ವಕ್ತಾರ ಪದವನ್ನು ಪುಲ್ಲಿಂಗ ಎಂದು ತಿಳಿದು ಸ್ತ್ರೀಲಿಂಗ ಸೂಚಕವಾಗಿ ವಕ್ತಾರಿಣಿ ಪದವನ್ನು ಬಳಕೆ ಮಾಡಲಾಗಿದೆ.

**ವರ್ಷಧಾರಿಣಿ**

ಣಿ ಸ್ತ್ರೀ ಸೂಚಕ ಪ್ರತ್ಯಯ ಹಚ್ಚಿ ಪದ ಪ್ರಯೋಗ ಮಾಡಲಾಗಿದೆ.

**ವಾರಸುಧಾರಿಣಿ**

ವಾರಸುದಾರ ಎಂಬ ಪದ ಪುರುಷವಾಚಕ ಎಂದು ತಿಳಿದು ಣಿ ಪ್ರತ್ಯಯ ಹಚ್ಚಿ ಸ್ತ್ರೀವಾಚಕ ಶಬ್ದವನ್ನಾಗಿ ಬಳಕೆ ಮಾಡಲಾಗಿದೆ.

**ಶಾಕಿಣಿ**

ಶಾಕ್ ಎಂಬ ಪದಕ್ಕೆ ಣಿ ಎಂಬ ಸ್ತ್ರೀ ಸೂಚಕ ಪ್ರತ್ಯಯವನ್ನು ಹಚ್ಚಿ ಪದ ರಚನೆ ಮಾಡಲಾಗಿದೆ.

**ಶಾಸ್ತ್ರಿಣಿ**

ಸ್ವಾಮಿಜಿ ಪುರುಷವಾಚಕರ ಪದವೆಂದು ತಿಳಿದು ಸ್ತ್ರೀವಾಚಕವಾಗಿ ಶಾಸ್ತ್ರಿಣಿ ಪದವನ್ನು ಬಳಕೆ ಮಾಡಲಾಗಿದೆ.

**ಶಿರಸ್ತ್ರಾಣಧಾರಿಣಿ**

ಸ್ತ್ರೀ ಸೂಚಕ ಪ್ರತ್ಯಯವಾದ ಣಿ ಸೇರಿಸಿ ಪದ ರಚನೆ ಮಾಡಲಾಗಿದೆ.

**ಸರದಾರಿಣಿ**

ಸರದಾರ ಎಂಬ ಪುಲ್ಲಿಂಗ ಸೂಚಕ ಪದಕ್ಕೆ ಸಂವಾದಿಯಾಗಿ ಸರದಾರಿಣಿ ಪದ ಬಳಕೆ ಮಾಡಲಾಗಿದೆ.

**ಹಠವಾದಿಣಿ**

ಸ್ತ್ರೀ ಸೂಚಕವಾಗಿ ಣಿ ಪ್ರತ್ಯಯ ಬಳಕೆ ಮಾಡಲಾಗಿದೆ.

**ಹೆಣ್ಣತ್ವ**

ಪುರುಷತ್ವ ಮಾದರಿಯಲ್ಲಿ ಪದ ರಚನೆ ಮಾಡಲಾಗಿದೆ.

ಈ ರೀತಿಯ ಪದಗಳು ಲಘುಬರಹಗಳಲ್ಲಿ ಸಾಕ್ಷಿಯಾಗಿವೆ. ಇವುಗಳು ಕೇವಲ ಮಹಿಳೆಯರನ್ನು ಅವಹೇಳನ ಮಾಡಲು ಬಳಸಲಾಗುತ್ತದೆ. ಮಹಿಳೆಯನ್ನು ಹಾಸ್ಯದ ವಸ್ತುವಾಗಿ ಮಾಡಿಕೊಂಡು ನಗಾಡಲು ಬಳಸುತಿದ್ದಾರೆ. ಅನಗತ್ಯವಾದ ಕಡೆಗಳಲ್ಲಿ ಸ್ತ್ರೀ ಲಿಂಗ ಪ್ರತ್ಯಯಗಳು ಲಘು ಬರಹಗಳಲ್ಲಿ ಮಾತ್ರ ಕಂಡುಬರುತ್ತದೆ. ಗಂಭೀರ ಬರಹಗಳಲ್ಲಿ ಕಾಣಿಸುತ್ತಿಲ್ಲ ಅಂದರೆ ಮಹಿಳೆ ಕುರಿತಾಗಿ ವಿವರಿಸುವುದು ಹಾಸ್ಯವಾಡಿ ನಗುವುದು ಸಮಾಜದೊಳಗೆ ಒಂದು ವಸ್ತುವಾಗಿದೆ. ಇದು ಎಷ್ಟರ ಮಟ್ಟಿಗೆ ಸರಿಯಾದ ಕ್ರಮ ಎಂಬುದಕ್ಕೆ ಉತ್ತರವಿಲ್ಲ.

ಈ ಸಂದರ್ಭದಲ್ಲಿ ಆಗಿರುವಂತಹ ತಾರತಮ್ಯತೆ ಭಾಷೆ ಮೂಲದಿಂದ ಅಲ್ಲ. ಸಮಾಜ ಸೃಷ್ಟಿಯಿಂದ ಅಥವಾ ಸಮಾಜ ಸಂರಚನೆಗೊಂಡಿರುವ ಕಾರಣಕ್ಕಾಗಿ ಹೀಗಾಗಿದೆ. ಅಂದರೆ ಇದರ ಅರ್ಥ ಭಾಷೆ ಸಂರಚನೆ ಆಗಿರುವುದು ಸಮಾಜದ ರಚನೆಗೆ ಆಧಾರವಾಗಿ. ಇವು ಭಾಷೆಯ ಸಹಜ ಗುಣಗಳೆಂದು ಒಪ್ಪಿ ಇವು ಭಾಷೆಯೊಳಗಡೆಯ ಲಿಂಗ ಭಿನ್ನತೆಗಳು ಎಂದು

ಅರ್ಥಮಾಡಿಕೊಂಡರೆ ಅಥವಾ ಒಪ್ಪಿಕೊಂಡರೆ ಸಮಸ್ಯೆ ಇಲ್ಲ. ಆದರೆ ಭಾಷಾ ಕಲಿಕೆ ಸಂದರ್ಭಗಳಲ್ಲಿ ಇವುಗಳನ್ನು ತಾರತಮ್ಯ ಎಂದು ಗ್ರಹಿಸಿಕೊಳ್ಳಲಾಗುತ್ತಿದೆ. ಮತ್ತು ಅವುಗಳನ್ನು ತಾರತಮ್ಯದ ನೆಲೆಯಲ್ಲಿ ಅರ್ಥೈಸಿಕೊಳ್ಳುತ್ತಿದ್ದಾರೆ. ಇದರಿಂದಾಗಿ ಹೆಂಗಸಿಗೆ ಸಂಬಂಧಪಟ್ಟ ಪದಕೋಶದ ಬಗ್ಗೆ ಹೇಳಬೇಕಾದಾಗ ನಾವು ಇರುವ ಪದದಿಂದ ಹೊಸದೊಂದನ್ನು ಸೃಷ್ಟಿಸಿಕೊಳ್ಳಬೇಕಾದ ಅಗತ್ಯ ಇದೆಯೆಂಬುದು ಇಗ ಹೆಚ್ಚು ಖಚಿತಗೊಂಡಿರುವ ಮಾತು. ಈಗಾಗಲೆ ನೋಡಿರುವಂತಹ ವೃತ್ತಿಸೂಚಕ ಪದ ತಂತಾನೇ ಗಂಡಸನ್ನು ಸೂಚಿಸುತ್ತಿರುತ್ತಿದೆ. ಸಾಮಾನ್ಯವಾಗಿ ಅದು ಪುರುಷ ಕೇಂದ್ರಿತವಾಗಿಯೇ ಇರುತ್ತದೆ. ಅದೇ ವೃತ್ತಿಯಲ್ಲಿರುವ ಹೆಂಗಸನ್ನು ಸೂಚಿಸಲು ವಿಶೇಷ ಪದವೊಂದನ್ನು ರೂಪಿಸಿಕೊಳ್ಳಬೇಕು. ಆದ್ದರಿಂದ ಪದಕೋಶ ಯಾವಾಗಲೂ ಗಂಡಸನ್ನು ಒಳಗೊಂಡೆ ಇರುತ್ತದೆ. ಹೆಂಗಸು ಒಳಗೊಳ್ಳಬೇಕಾದರೆ ಹೊಸ ಪದವೊಂದನ್ನು ರೂಪಿಸಿಕೊಳ್ಳಬೇಕು. ಯಾವುದೆ ಭಾಷೆಯಲ್ಲಿ ಗಮನಿಸಿದರೂ ವ್ಯಕ್ತಿವಾಚಕಗಳು ಪುಲ್ಲಿಂಗವಾಚಿಯಾಗಿರುತ್ತವೆ. ಸ್ತ್ರೀಲಿಂಗ ವಾಚಿಗಳು ರೂಪಗೊಳ್ಳಬೇಕು ಎಂದರೆ ಆ ಪುಲ್ಲಿಂಗವಾಚಿ ಪದಗಳನ್ನು ಹೆಂಗಸರಿಗೆ ಅನ್ವಯವಾಗುವಂತೆ ಬದಲಿಸಿಕೊಳ್ಳಬೇಕಾಗುತ್ತದೆ. ಎಂದು ಮಹಿಳಾ ಅಧ್ಯಯನಕಾರರು ವಿವರಿಸುತ್ತಿದ್ದಾರೆ.

ಇವರ ಪ್ರಕಾರ ಭಾಷೆಯೊಳಗಡೆಯ ಭಿನ್ನತೆಯನ್ನು ಒಪ್ಪಿಕೊಂಡು ಭಾಷೆ. ಬಳಕೆ ಮತ್ತು ಗ್ರಹಿಕೆ ಒಳಗಡೆ ನಡೆಯುತ್ತಿರುವ ತಾರತಮ್ಯವನ್ನು ಮುಂದಿಟ್ಟುಕೊಂಡು ಇವರುಗಳು ಈ ಅಭಿಪ್ರಾಯವನ್ನು ವಿವರಿಸುತ್ತಿದ್ದಾರೆ. ಅಂದರೆ ಭಾಷೆಯೊಳಗಡೆಯ ಭಿನ್ನತೆಯನ್ನು ಕಲ್ಪಿಸುವ ಸಂದರ್ಭದಲ್ಲಿ ತಾರತಮ್ಯವಾಗಿ ಕಲ್ಪಿಸಲಾಗುತ್ತಿದೆ.

ಉದಾಹರಣೆಗೆ:-

- ಕುರುಡ-ಕುರುಡಿ
- ಬಡವ-ಬಡವಿ
- ಕುಂಟ-ಕುಂಟಿ
- ಮೂಗ-ಮೂಗಿ

ಯಾವುದೇ ಶಾಲಾ ವ್ಯಾಕರಣವನ್ನು ತೆಗೆದು ನೋಡಿದರೆ ಕೆಲವು ಪದಗಳನ್ನು ನೀಡಿ ಇವುಗಳ ಸ್ತ್ರೀಲಿಂಗ ರೂಪ ಬರೆಯಿರಿ ಎಂದು ಹೇಳುವ ಅಭ್ಯಾಸಗಳಿರುತ್ತವೆ. ಅದಕ್ಕೆ ಅನುಕೂಲಕರವಾದ ಕೆಲವು ನಿಯಮಗಳನ್ನು ಹೇಳುತ್ತಾರೆ. 'ಅ' ಕಾರಂತವಾಗಿದ್ದರೆ 'ಇ' ಕಾರಂತವಾಗಿ ಮಾಡಿ ಬರೆಯಿರಿ ಎಂದು ಹೇಳುವುದು ಒಂದು ನಿಯಮ. ಆದರೆ ಮೊದಲೇ ಸ್ತ್ರೀಲಿಂಗ ರೂಪವಿದ್ದು

ಅದಕ್ಕೆ ಪುಲ್ಲಿಂಗ ರೂಪವನ್ನು ರೂಪಿಸಿಕೊಳ್ಳುವುದು ಅಪರೂಪ. ಯಾವುದೇ ಭಾಷೆಯಾದರೂ ಸಹ ಅದು ನೇರವಾಗಿ ಹೇಳುತ್ತಿಲ್ಲವೆಂದರೂ ಅದು ಸಹಜವೆಂಬಂತೆ ಪುರುಷನನ್ನು ಕೇಂದ್ರಿಕರಿಸಿಕೊಂಡೆ ಇರುತ್ತದೆ. ಅಲ್ಲಿ ಸ್ತ್ರೀಯನ್ನು ಸೇರಿಸಬೇಕಾದರೆ ಕೆಲವು ನಿಯಮಗಳನ್ನು ಅನುಸರಿಸಲೇಬೇಕು. ಭಾಷಾರಚನೆ ಮತ್ತು ಭಾಷಾ ಬಳಕೆಯಲ್ಲಿ ಈ ಪ್ರವೃತ್ತಿ ಎಲ್ಲೆಡೆ ಕಂಡುಬರುತ್ತದೆ.

ಭಾಷೆ ಪುರುಷ ಪ್ರಧಾನತೆಯಿಂದ ಕೂಡಿದೆ ಮತ್ತು ಪುರುಷನ ಹಿತಾಸಕ್ತಿಯನ್ನು ಕಾಪಡಿಕೊಂಡು ಬರುತ್ತಿದೆ. ಭಾಷೆ ರಚನೆಯಾಗಿರುವುದು ಹಾಗೇನೇ. ಆದರೆ ಈ ವಿಚಾರವನ್ನು ಗ್ರಹಿಸುವಲ್ಲಿ ಅಧ್ಯಯನಕಾರರು ಏಡವುತ್ತಿದ್ದಾರೆ. ಲಿಂಗ ಭಿನ್ನತೆಯಿಂದ ಇರುವಂತಹದನ್ನು ಲಿಂಗ ತಾರತಮ್ಯತೆ ಎಂದು ಗ್ರಹಿಸಿಕೊಳ್ಳುತ್ತಿದ್ದಾರೆ. ಇದಕ್ಕೆ ಹಲವು ಕಾರಣಗಳಿರಬಹುದು. ಭಾಷಾ ಅಧ್ಯಯನಕಾರರೂ ಇವರಲ್ಲದ್ದರಿಂದ ಭಾಷಾ ತಜ್ಞತೆ ತಿಳಿಯದೆ ಇರುವುದರಿಂದ ಗ್ರಹಿಕೆಯಲ್ಲಿ ತಪ್ಪಾಗುತ್ತಿರಬಹುದು. ಹೆಚ್ಚಾಗಿ ಮಹಿಳಾ ಅಧ್ಯಯನಕಾರರು ಅನ್ಯಜ್ಞಾನದ ಶಿಸ್ತುಗಳಲ್ಲಿ ತಜ್ಞತೆ ಇರುವವರು ಈ ಕುರಿತು ಚರ್ಚೆ ಮಾಡುತ್ತಿದ್ದಾರೆ. ಹೀಗಾಗಿ ಸಹಜವಾಗಿಯೇ ಮಹಿಳೆಯರ ಭಾಷೆಯನ್ನು ಸರಿಯಾಗಿ ಗ್ರಹಿಸಿಕೊಳ್ಳುವಲ್ಲಿ ಕೆಲವು ತೊಂದರೆಗಳಾಗುತ್ತಿವೆ. ಭಾಷೆಯ ಭಿನ್ನತೆಗಳನ್ನು ತಾರತಮ್ಯತೆ ಎಂದು ಬೇಗನೇ ನಿರ್ಧರಿಸುತ್ತಿದ್ದಾರೆ.

ಪತ್ರಿಕೆ ಮಾಧ್ಯಮಗಳಲ್ಲಿ ಘಟನೆಗಳ ವಿವರಣೆ ಮಹಿಳೆಯನ್ನು ಹೆಚ್ಚುವರಿಯಾಗಿ 'ಸೇರಿದಂತೆ' ಎಂಬ ಪದಗಳ ಮುಖಾಂತರ ವಿವರಿಸುತ್ತಿದ್ದಾರೆ. ಉದಾಹರಣೆಗೆ

– ಆ ಮಹತ್ವದ ಸಭೆಯಲ್ಲಿ ಮಹಿಳೆಯರೂ ಉಪಸ್ಥಿತರಿದ್ದರು;

– "ಸತ್ತವರ ಪೈಕಿ ಐವರು ಮಹಿಳೆಯರೂ ಸೇರಿದ್ದಾರೆ."

ಎಂಬಂತಹ ವಾಕ್ಯಗಳು ವಿವರಣೆಯ ವಿಸ್ತರಣೆಯಾಗಿ ಮಹಿಳೆಯನ್ನು ಒಳಗೊಳ್ಳುತ್ತವೆ. ಮಹಿಳೆಯನ್ನು ಒಳಗೊಂಡಂತೆ, ಮಹಿಳೆಯರು ಸೇರಿದಂತೆ ಎಂದು ಹೆಚ್ಚುವರಿ ವಿವರಣೆಕೊಡುವುದರ ಮೂಲಕ ಮಹಿಳೆಯನ್ನು ಘಟನೆಯ ಸಂದರ್ಭದಿಂದ ವಿವರಿಸುತ್ತಿದ್ದಾರೆ. ಇಲ್ಲಿ ಆಗಬೇಕಾಗಿರುವುದು ಏನೆಂದರೆ ಮಹಿಳೆಯರ ಸಂಖ್ಯೆ ಎಷ್ಟು? ಪುರುಷರ ಸಂಖ್ಯೆ ಎಷ್ಟು? ಮಕ್ಕಳ ಸಂಖ್ಯೆ ಎಷ್ಟು? ಎಂಬುದಾಗಿ ವಿವರಿಸಬೇಕೆ ಹೊರತು, ದನ, ಕೋಳಿಗಳೂ ಸೇರಿದಂತೆ ಎಂಬ ಹಾಗೆ ಮಹಿಳೆ ಸೇರಿದಂತೆ ಎಂದು ವಿವರಿಸುವ ಬಗೆಯ ಭಾಷೆ ಅಲ್ಲ.

ಸಮಾಜದಲ್ಲಿ ಮಹಿಳೆಯನ್ನು ಕುರಿತಂತೆ ಹಲವು ನಂಬಿಕೆಗಳು ಬೆಳೆದು ಬಂದಿವೆ. ಅವುಗಳಿಗೆ ಅನುಗುಣವಾಗಿ ಮಹಿಳೆಯರನ್ನು ರೂಪಿಸಿಕೊಂಡಿದ್ದಾರೆ. ಆ ನಂಬಿಕೆಗಳನ್ನು ಉಳಿಸಿಕೊಳ್ಳಲು

ಹಲವಾರು ನಿಯಮಗಳನ್ನು ರೂಪಿಸಿದ್ದಾರೆ. ಅಲಿಖಿತ ನಿಯಮಗಳನ್ನು ಮುರಿಯದಂತೆ ಹಲವು ನಿಷೇಧ ನಿರ್ಬಂಧಗಳನ್ನು ಮಹಿಳೆಯರ ಮೇಲೆ ಹೇರಿದ್ದಾರೆ. ನಿಸರ್ಗ ಸಹಜವಾದುದನ್ನು ಸಹಜ ಗುಣಲಕ್ಷಣಗಳನ್ನು ಸಮಾಜದಲ್ಲಿ ಸಮಾನವಾಗಿ ಪರಿಗಣಿತವಾಗುವುದಿಲ್ಲ. ಬದಲಿಗೆ ಕನಿಷ್ಠರು ಶ್ರೇಷ್ಠರು ಎಂಬ ತಾರತಮ್ಯದ ಅಳತೆ ಅಲ್ಲಲ್ಲಿ ಜಾರಿಗೊಂಡಿದೆ.

ಕೇಶಿರಾಜನನ್ನು ಒಳಗೊಂಡಂತೆ ವ್ಯಾಕರಣಕಾರರು ಲಿಂಗಗಳನ್ನು ಹೇಳುವಾಗ "ಪುರುಷರ ಪುಲ್ಲಿಂಗಗಳು ಸ್ತ್ರೀಯರೇ ಸ್ತ್ರೀಲಿಂಗಗಳು ಉಳಿದವು ನಪುಂಸಕ ಲಿಂಗಗಳು ಎಂದು ಹೇಳುತ್ತಾರೆ."[೧೨]

ಕೆಲವು ವ್ಯಾಕರಣಕಾರರು ವ್ಯಾಕರಣ ನಿಯಮಗಳನ್ನು "ಯಾವ ಶಬ್ದ ಪ್ರಯೋಗ ಮಾಡಿದಾಗ ಗಂಡಸು ಎಂಬರ್ಥವು ಮನಸ್ಸಿಗೆ ಹೊಳೆಯುವುದೋ ಅದು ಪುಲ್ಲಿಂಗವೆನಿಸುವುದು"[೧೩] ಅದು ಹೇಗೆ ಎಂಬುದು ಗೊತ್ತಿಲ್ಲ. ಇವರೂ ಕೊಡುತ್ತಿರುವ ಉದಾಹರಣೆಗಳನ್ನು ನೋಡಿದರೆ ನಾಮಪದಗಳು, ಸಂಬಂಧವಾಚಕಗಳು ಇತ್ಯಾದಿ ಪದಗಳನ್ನು ಕೊಡುತ್ತಿದ್ದಾರೆ.

ಉದಾಹರಣೆ:– ದೊಡ್ಡವನು, ಮುದುಕ, ಕಳ್ಳ, 'ಮನುಷ್ಯ' ಶಂಕರಬಸವ, ಹುಡುಗ, ಕೆಟ್ಟವನು, ಅರಸು, ಪ್ರಧಾನಿಮಂತ್ರಿ, ಜಟ್ಟಿ, ಶಕ್ತಿವಂತ, ತಂದೆ, ಮಾವ, ಸಹೋದರ,ಅಣ್ಣ, ತಮ್ಮ, ಚಿಕ್ಕಪ್ಪ, ಸಚಿವ, ರಾಮ, ಕೃಷ್ಣ, ಶಂಕರಾಚಾರ್ಯ, ಮದುಮಗ, ದಾಸ, ಕವಿ, ವಿಮರ್ಶಕ, ಇತ್ಯಾದಿ. ಇಲ್ಲಿ ಕೊಟ್ಟಿರುವ ಉದಾಹರಣೆಗಳಲ್ಲಿ ಕೆಲವು ಪದಗಳು ಲಿಂಗ ತಟಸ್ಥವಾಗಿ ಸಮಾನವಾಗಿ ಬಳಸಬೇಕಾಗಿರುವಂತಹ ಪದಗಳು ಒಳಗೊಂಡಿವೆ.

ಉದಾಹರಣೆಗೆ – ಕವಿ

– ವಿಮರ್ಶಕ

– ಪ್ರಧಾನಿ

– ಮಂತ್ರಿ

ಈ ಪದಗಳು ಯಾವ ಲಿಂಗವನ್ನು ಸೂಚಿಸುತ್ತಿವೆ. ಈ ಸ್ಥಾನದಲ್ಲಿ ಮಹಿಳೆಯನ್ನು ಹೇಗೆ ಬಳಕೆಮಾಡಬೇಕು ಈ ಸ್ಥಾನಗಳು ಲಿಂಗ ತಟಸ್ಥವಾದ ಸ್ಥಾನಗಳು ಮೇಲಿನ ಉದಾಹರಣೆಗಳನ್ನು ಕೊಟ್ಟು

'ಮೇಲಿನ ಯಾವ ಶಬ್ದವನ್ನು ಹೇಳಿದರು ನಮ್ಮ ಭಾವನೆಗೆ ಗಂಡಸು ಎಂಬರ್ಥ ಹೊಳೆಯುವುದು. ಆದ್ದರಿಂದ ಇವು ಪುಲ್ಲಿಂಗಗಳು'[೧೪] 'ಮನುಷ್ಯ' ಪದವು ಪುಲಿಂಗವಾದರೆ

ಮಹಿಳೆಯನ್ನು ಒಳಗೊಳ್ಳುವಂತಹ ಪದ ಯಾವುದು. ಈಗಾಗಲೆ ಮಹಿಳಾ ಅಧ್ಯಯನಕಾರರು ಈ ಪದವನ್ನು ಕುರಿತಂತೆ ಹಲವು ಚರ್ಚೆಗಳನ್ನು ಮಾಡಿದ್ದಾರೆ ಇದರ ಕುರಿತು ಅಧ್ಯಾಯದ ಆರಂಭದಲ್ಲೇ ಚರ್ಚೆಮಾಡಲಾಗಿದೆ. ಹಾಗಾಗಿ ಮತ್ತೆ ಆ ಚರ್ಚೆ ಇಲ್ಲಿ ತರುವುದಿಲ್ಲ.

"ಸ್ತ್ರೀಲಿಂಗ ಯಾವ ಶಬ್ದ ಪ್ರಯೋಗ ಮಾಡಿದಾಗ ನಮ್ಮ ಭಾವನೆಗೆ ಹೆಂಗಸು ಎಂಬ ಅರ್ಥವು ಹೊಳೆಯುವುದೋ ಅದು ಸ್ತ್ರೀಲಿಂಗ ವೆನಿಸುವುದು"[೧೫]. ಇವರು ಕೊಡುತ್ತಿರುವ ಉದಾಹರಣೆಗಳು ಕೆಳಕಂಡತಿವೆ. ಉದಾಹರಣೆಗೆ:–ದೊಡ್ಡವಳು, ಮುದುಕಿ, ಅತ್ತೆ, ಚಿಕ್ಕಮ್ಮ, ದೊಡ್ಡಮ್ಮ, ಹೆಂಡತಿ, ತಂಗಿ, ಸಹೋದರಿ, ಪಾರ್ವತಿ, ಅಕ್ಕ, ಅರಸಿ, ರಾಣಿ, ತಾಯಿ, ವಿದೂಷಿ, ಚಲುವೆ, ಒಕ್ಕಲಗಿತ್ತಿ, ಹಾವಡಗಿತ್ತಿ, ಕೆಟ್ಟವಳು, ಚಿಕ್ಕವಳು, ಒಳ್ಳೆಯವಳು, ಬ್ರಾಹ್ಮಣೀತಿ, ಉಪಾಧ್ಯಾಯೆ, ಅಧ್ಯಕ್ಷೆ, ಸಚಿವೆ, ಮಗಳು, ಬಾಲಿಕೆ, ಸ್ತ್ರೀ, ಹೆಂಗಸು, ಇತ್ಯಾದಿ.

ಮೇಲಿನ ಉದಾಹರಣೆಯಲ್ಲಿ ಹೆಚ್ಚು ಪದಗಳು ಸಂಬಂಧವಾಚಕ ಪದಗಳೆ. ಉಪಾಧ್ಯಾಯೆ, ಅಧ್ಯಕ್ಷೆ, ಸಚಿವೆ, ಒಕ್ಕಲುಗಿತ್ತಿ ಇತ್ಯಾದಿ ಪದಗಳು ಮಾತ್ರ ವೃತ್ತಿಸೂಚಕ ಪದಗಳು. ಮನುಷ್ಯ ಪದಕ್ಕೆ ಇಲ್ಲಿ ಉತ್ತರವಿಲ್ಲ. ಹಾಗೇ ಪ್ರಧಾನಮಂತ್ರಿ ಕೇವಲ ಪುರುಷರು ಅಥವಾ ಗಂಡಸಿನ ಶಬ್ದಗಳೆ ಹಾಗಿದ್ದರೆ ಇಲ್ಲಿ ಮಹಿಳೆ ಬಂದರೆ ಅದೆಕ್ಕೆ ಯಾವ ಉತ್ತರವಿಲ್ಲ.

ಹೀಗೆ ಕೆಲವು ಸಂದರ್ಭಗಳಲ್ಲಿ ವ್ಯಾಕರಣಕಾರರು ವಾಸ್ತವವನ್ನು ಬಿಟ್ಟು ವ್ಯಾಕರಣ ನಿಯಮಗಳನ್ನು ರಚಿಸುತ್ತಿದ್ದಾರೆ. ವಾಸ್ತವದಲ್ಲಿ ಆಗುತ್ತಿರುವಂತಹ ಚರ್ಚೆಗಳನ್ನು ಕುರಿತಂತೆ ಇವರು ಕಾಲ ಸಂದರ್ಭಕ್ಕೆ ಅನುಗುಣವಾಗಿ ಹೊಂದಿಕೊಳ್ಳುತಿಲ್ಲ. ಬದಲಾಗಿ ಶತಮಾನಗಳ ಪುರುಷ ಪ್ರಧಾನ ಮೌಲ್ಯಗಳನ್ನೆ ಮತ್ತೆ–ಮತ್ತೆ ವಿವರಿಸುತ್ತಿದ್ದಾರೆ. ವಾಸ್ತವದಲ್ಲಿ ಆಗುತ್ತಿರುವ ಬದಲಾವಣೆಗಳನ್ನು ಗುರುತಿಸದ ಹಳೆಯ ಮೌಲ್ಯಗಳನ್ನೇ ಎತ್ತಿಹಿಡಿಯುತ್ತ ಪೂರ್ವಗ್ರಹಪೀಡಿತರಾಗಿದ್ದಾರೆ.

ಲಿಂಗ ತಟಸ್ಥವಾಗಿರುವ ಪದಗಳನ್ನು ಪುಲ್ಲಿಂಗ ಎಂದು ವಿವರಿಸುತ್ತಿರುವಂತಹುದು ವಾಸ್ತವದಲ್ಲಿ ಅದರ ಬಳಕೆ ಮತ್ತು ಅರ್ಥದಲ್ಲಿ ಭಿನ್ನತೆಯಿಂದ ಕೂಡಿರುತ್ತವೆ. ಅವುಗಳನ್ನು ಯಾವುದೋ ಒಂದು ಮೌಲ್ಯಕ್ಕೆ ರೂಪಿಸುತ್ತಿರುವಂತಹದ್ದು ನಡೆಯುತ್ತಿದೆ.

ಇಲ್ಲಿ ಗಮನಿಸಿರುವಂತೆ ಮಹಿಳೆ ಅಧ್ಯಯನಕಾರರಲ್ಲೂ ಈ ಬಗೆಯ ಕೆಲವು ತಪ್ಪುಗಳಿವೆ. ಹಾಗೇನೆ ಬಳಕೆಯಲ್ಲಿ ಸಹ ಕೆಲವು ವಾಸ್ತವಕ್ಕೂ ಅರ್ಥಕ್ಕೂ ಭಿನ್ನವಾಗಿ ಲಘುವಾಗಿ ಹಾಸ್ಯಕ್ಕಾಗಿ ತಮಗೆ ಬೇಕಾದಂತೆ ಬರೆದುಕೊಳ್ಳುವವರಿದ್ದಾರೆ. ಹಾಗೇನೆ ವ್ಯಾಕರಣಕಾರರ ಈ ರೀತಿಯ ಕೆಲವು ತಪ್ಪುಗಳಿವೆ. ವಾಸ್ತವ ಯಾವುದು, ಲಿಂಗ ಭಿನ್ನತೆಯಿಂದ ಕೂಡಿದವುಗಳು ಯಾವುವು, ಲಿಂಗ ತಾರತಮ್ಯತೆಯನ್ನು ಸೂಚಿಸುವಂತಹ ಪದಗಳು ಯಾವುವು ಎಂಬುದರ ಕುರಿತಂತೆ ಒಟ್ಟಾರೆ

ತಿಳುವಳಿಕೆಯ ಒಳಗಡೆ ಹಲವು ಗೊಂದಲಗಳಿವೆ. ಮಹಿಳಾ ಆಧ್ಯಾಯನಕಾರರು ಲಿಂಗ ತಾರತಮ್ಯತೆಯನ್ನು ಗುರುತಿಸುವ ಆತುರದಲ್ಲಿ ತಪ್ಪುಗಳು ನಡೆಯುತ್ತಿವೆ.

ಆವೇಶದ ಫಲವಾಗಿ ಪ್ರತಿಯೊಂದರಲ್ಲೂ ತಾರತಮ್ಯತೆ ಇದೆ ಎಂಬ ಮುಂದಾಲೋಚನೆಯಲ್ಲಿ ಲಿಂಗ ಭಿನ್ನತೆಯನ್ನು ಗುರುತಿಸಲು ಸಾಧ್ಯವಾಗುತ್ತಿಲ್ಲ. ವಾಸ್ತವದಲ್ಲಿ ಭಾಷೆಯ ಸಹಜ ನಿಯಮವಾದ ಭಿನ್ನತೆಯನ್ನು ತಾರತಮ್ಯ ಎಂದು ವಿವರಿಸಿಕೊಳ್ಳುತ್ತಾ ಇದ್ದಾರೆ. ಇದು ಕೇವಲ ಅವರ ನಿರ್ಧಾರಗಳು ಮತ್ತು ಕೆಲವು ಪದಗಳನ್ನು ಗುರುತಿಸುವಲ್ಲಿ ಮಾತ್ರ. ಹಾಗಂತ ಮಹಿಳಾವಾದಿಗಳು ತಾರತಮ್ಯತೆಯನ್ನು ಗುರುತಿಸಿಲ್ಲ ಎಂದಲ್ಲ ಕೆಲವು ಸಂದರ್ಭಗಳಲ್ಲಿ ಮಾತ್ರ ಅಥವಾ ಕೆಲವು ಪದಗಳನ್ನು ಗುರುತಿಸುವಲ್ಲಿ ಮಾತ್ರ ಹೀಗಾಗುತ್ತಿದೆ.

ಮಹಿಳಾವಾದಿಗಳು ಭಾಷೆಯಲ್ಲಿರುವ ಭಿನ್ನತೆಗಳನ್ನು ತಾರತಮ್ಯ ಎಂದು ವಿವರಿಸುತ್ತಿದ್ದಾರೆ. ಹೀಗಾಗಿ ಕೆಲವರು ಹಾಸ್ಯಕ್ಕೊಳಗಾಗುತ್ತಿದ್ದಾರೆ. ಇದಕ್ಕೆ ಒಳಗೊಂಡಂತಹ ಮತ್ತು ಲಘುಬರಹಗಳಲ್ಲಿ ರಂಜನೆಗೊಳ್ಳುತ್ತಿದ್ದಾರೆ, ಬಳಸಿಕೊಳ್ಳುತ್ತಿದ್ದಾರೆ.

ವ್ಯಾಕರಣಕಾರರು ತಮ್ಮಲ್ಲಿರುವ ಮೌಲ್ಯಗಳನ್ನು ಮರು ಸೃಷ್ಟಿಸುವುದಕ್ಕೆ ಲಿಂಗ ವ್ಯತ್ಯಾಸಗಳನ್ನು ಗುರುತಿಸದೆ ಎಲ್ಲ ಪದಗಳನ್ನು ಪುಲ್ಲಿಂಗ ಸೂಚಕವಾಗಿ ವಿವರಿಸುತ್ತಿದ್ದಾರೆ.

ಹೀಗೆ ಭಾಷೆಯಲ್ಲಿನ ಭಿನ್ನತೆ ಅಸಮಾನತೆ ಮತ್ತು ವಾಸ್ತವಗಳನ್ನು ಸರಿಯಾಗಿ ತಿಳಿಯದೆ ಭಾಷೆ ನಡೆಯುತ್ತಿದೆ. ಭಾಷೆಯ ಸಹಜ ನಿಯಮಗಳನ್ನು ತಿಳಿಯುವಲ್ಲಿ ಹಲವು ರೀತಿಯಲ್ಲಿ ತಪ್ಪುಗಳು ನಡೆಯುತ್ತಿವೆ.

**ಅಡಿ ಟಿಪ್ಪಣಿಗಳು**

೧) ಸಚಿತ್ರ ಕನ್ನಡ-ಕನ್ನಡ ಕಸ್ತೂರಿ, ಕೋಶರಾಮಶ್ರಮ ಪಬ್ಲಿಕೇಶನ್, ಸಂ.ಪಂಡಿತ ಜೆ.ಎಂ.ಕವಲಿ

೨) ಪ್ರಸಾರಂಗ-ಮೈಸೂರು ವಿ.ವಿ ಮೈಸೂರು, ಇಂಗ್ಲಿಷ್-ಕನ್ನಡ ನಿಘಂಟು ಪು.ಸಂ.೬೭೮೪ ಸಂಪುಟ ೦೭

೩) ಅದೇ, ಪು.ಸಂ ೩೪೪೧ ಸಂಪುಟ ೦೩

೪) ಇಂಗ್ಲಿಷ್-ಇಂಗ್ಲಿಷ್-ಕನ್ನಡ ನಿಘಂಟು, ಪ್ರೋ.ಎಲ್.ಎಸ್.ಶೇಷಗಿರಿರಾವ್ ಪು.ಸಂ ೧೧೩೧,೩೭೭

೫) ಕನ್ನಡ-ಕನ್ನಡ-ಇಂಗ್ಲಿಷ್ ನಿಘಂಟು, ಜಿ.ವೆಂಕಟಸುಬ್ಬಯ್ಯ ಶೇಷಗಿರಿ ರಾವ್, ರಾಮಚಂದ್ರ ಮೂರ್ತಿ ಡಿ.ಬಿ.ಎಚ್.ಪ್ರಕಾಶನ

೬) ಕನ್ನಡ ವಿ.ವಿ. ವಿಶ್ವಕೋಶ೧, ಭಾಷೆಯ ಸಾಮಾಜಿಕ ಚಹರೆಗಳು ಡಾ.ಡಿ ಪಾಂಡುರಂಗಬಾಬು. ಪು.ಸಂ.೫೬

೭) ಗಂಗಾಧರ ಮಡಿವಾಳೇಶ್ವರ ತುರಮುರಿ, ಸಟೀಕಿನ ಶಬ್ದ ಮಂಜರಿ ಕೋಶ ಪು.೧೫೪ ಪ್ರಕಾಶನ ಪುಸ್ತಕ ಪ್ರಾಧೀಕಾರ ೧೯೬೯

೮) ಸಚಿತ್ರ ಕನ್ನಡ-ಕನ್ನಡ ಕಸ್ತೂರಿ, ಕೋಶರಾಮಾಶ್ರಮ ಪಬ್ಲಿಕೇಶನ್(ಸಂ) ಸಂ.ಪಂಡಿತ ಜೆ.ಎಂ.ಕವಲಿ

೯) ಭಾಷೆ ಮತ್ತು ಸಾಮಾಜಿಕ ಸಂದರ್ಭ, ಕೃಷ್ಣ ಪರಮೇಶ್ವರಭಟ್ಟ, ಪು.೨೩

೧೦) ಮಹಿಳಾ ಅಧ್ಯಯನ ಸಮಾಜ ಶಾಸ್ತ್ರೀಯ ದೃಷ್ಟಿಕೋನ, ಸುಧಾ ಸೀತಾರಾಮನ್, ಪು.ಸಂ.೧೦ ಸ್ತ್ರೀಲೇಖ ಪ್ರಕಟ-೨೧೦

೧೧) ಸ್ತ್ರೀವಾದ ತಾತ್ತ್ವಿಕತೆ-ಶ್ರೀಮತಿ ಪು.ಸಂ.೨೦೯-೨೧೦

೧೨) ಕೇಶಿರಾಜ ವಿರಚಿತ ಶಬ್ದಮಣಿದರ್ಪಣಂ, ಡಾ.ಟಿ.ವಿ ವೆಂಕಟಾಚಲನಶಾಸ್ತ್ರೀ ಪು.ಸಂ.೮೧ ಕನ್ನಡ ಸಾಹಿತ್ಯ ಪರಿಷತ್ತು, ೨೦೧೧

೧೩) ಕನ್ನಡ ವ್ಯಾಕರಣದರ್ಪಣ, ಕನ್ನಡ ಸಾಹಿತ್ಯ ಪರಿಷತ್ತು ೨೦೧೦ ಪು.ಸಂ.೬೭

೧೪) ಕನ್ನಡ ವ್ಯಾಕರಣ ದರ್ಪಣ, ಕನ್ನಡ ಸಾಹಿತ್ಯ ಪರಿಷತ್ತು ಪು.ಸಂ.೬೮

೧೫) ಕನ್ನಡ ವ್ಯಾಕರಣ ದರ್ಪಣ, ಕನ್ನಡ ಸಾಹಿತ್ಯ ಪರಿಷತ್ತು ಪು.ಸಂ.೬೮

# ಅಧ್ಯಾಯ–೬

# ಉಪಸಂಹಾರ

೬.೧. ಅಧ್ಯಯನದ ಮುಂಚಲನೆಗಳು

೬.೨. ಫಲಿತಗಳು

೬.೩. ಅಧ್ಯಯನದ ಹೊಸ ಸಾಧ್ಯತೆಗಳು

# ಅಧ್ಯಾಯ–೬

# ಉಪಸಂಹಾರ

ಮಾನವ ಉಳಿದೆಲ್ಲಾ ಜೀವರಾಶಿಗಳಿಗಿಂತಲೂ ಭಿನ್ನ ಎನ್ನುವುದಕ್ಕೆ ಮೂಲತಃ ಅವನಲ್ಲಿರುವ ವಿಚಾರವಂತಿಕೆ, ಸಾಂಸ್ಕೃತಿಕ ಐತಿಹಾಸಿಕತೆಯೇ ಸಾಕ್ಷಿಯಾಗಿದೆ. ವೈವಿಧ್ಯಮಯವಾದ ಸಾಂಸ್ಕೃತಿಕ ಚಹರೆಯನ್ನು ಹಲವು ಸಮುದಾಯಗಳು ಇಂದಿಗೂ ಕೆಲವು ಆಚರಣೆ ಸಂಪ್ರದಾಯ, ನಂಬಿಕೆ, ನಿಷೇಧ, ನಿರೂಪಣೆಗಳನ್ನು ಅನುಸರಿಸುತ್ತಲೇ ಬಂದಿವೆ. ಈ ಎಲ್ಲ ಅಂಶಗಳು ಆಯಾ ಸಮುದಾಯದ ಮಹತ್ವವನ್ನು ಬಿತ್ತರಿಸುತ್ತವೆ. ಸಮುದಾಯಗಳಲ್ಲಿ ಶ್ರೇಣೀಕರಣದ ವ್ಯವಸ್ಥೆಯ ಜೊತೆಗೆ, ಲಿಂಗ ಅಸಮಾನತೆಯು ಎದ್ದು ಕಾಣುತ್ತದೆ.

ಸಮಾಜದಲ್ಲಿ ಹಲವಾರು ಸಂಸ್ಕೃತಿ, ಸಂಪ್ರದಾಯ, ಆಚರಣೆಗಳು ರೂಢಿಯಲ್ಲಿವೆ. ಇವುಗಳು ಧಾರ್ಮಿಕ ಕ್ರಿಯಾಚರಣೆಯ ಪಾಲ್ಗೊಳ್ಳುವಿಕೆಯಲ್ಲಿ ಕುಟುಂಬ ವ್ಯವಸ್ಥೆಯಲ್ಲಿ ಆರ್ಥಿಕ ವ್ಯವಸ್ಥೆಯಲ್ಲಿ ರಾಜಕೀಯ ಪಾಲ್ಗೊಳ್ಳುವಿಕೆಯಲ್ಲಿ ಪಾತ್ರ ಹಂಚಿಕೆಯು ಭಿನ್ನವಾಗಿದೆ. ಇದಕ್ಕೆ ಪುರುಷ ಪ್ರಧಾನ ಸಮಾಜದ ನಿಷೇಧಗಳು, ನಿರ್ಬಂಧಗಳು ಕಾರಣವಾಗಿವೆ. ಈ ನಿಷೇಧಗಳಲ್ಲಿ ಲಿಂಗ ರಾಜಕಾರಣವಿದೆ. ಅಂದರೆ ಪುರುಷ ಪ್ರಧಾನತೆಯೇ ಲಿಂಗ ತಾರತಮ್ಯಕ್ಕೆ ಕಾರಣವಾಗುತ್ತದೆ. ಗಂಡು ಮೇಲು, ಹೆಣ್ಣು ಕೀಳು ಎನ್ನುವ ಮನೋಭಾವನೆ ಬೆಳೆದು ಹೆಣ್ಣನ್ನು ಹಲವು ಸಂದರ್ಭಗಳಲ್ಲಿ ಕೀಳಾಗಿ ಕಾಣುವ ಪ್ರಸಂಗಗಳು ಇವೆ.

ಈ ಮೇಲಿನ ಅಂಶಗಳನ್ನಾಧರಿಸಿದಂತೆ ಪ್ರಸ್ತುತ ಅಧ್ಯಯನವು "ಕನ್ನಡ ನುಡಿ ಬಳಕೆಯಲ್ಲಿ ಮಹಿಳೆ" ಎಂಬ ವಿಷಯವು ಹಲವಾರು ಉದ್ದೇಶಗಳನ್ನು ಮುಂದಿಟ್ಟುಕೊಂಡು ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಮೂಲತಃ ಭಾಷೆಯು ಸಂರಚಿತ ರೂಪ ಗಂಡು/ಹೆಣ್ಣು ಎಂಬ ತಾರತಮ್ಯದಿಂದ ರಚಿತವಾದದ್ದಲ್ಲ. ಆ ಸಮುದಾಯದ ಅಧಿಕಾರ ರೂಢವರ್ಗದ ಸುಪ್ತ ಚೇತನಗಳು ಸಂಜ್ಞೆಗಳಾಗಿ ಭಾಷೆಯಲ್ಲಿ

ಅಂತಸ್ಥಗೊಂಡು ಈ ರೀತಿಯ ವಿಭಜಿತ ನೆಲೆಗೆ ಬಂದು ನಿಂತಿವೆ. ಭಾಷೆಯಲ್ಲಿ 'ಗಂಡು ಭಾಷೆ', 'ಹೆಣ್ಣು ಭಾಷೆ' ಎಂಬ ಎರಡು ವಿಧಗಳಲ್ಲಿ ಎರಡು ಭಿನ್ನ ದೃಷ್ಟಿಕೋನಗಳಿವೆ ಅಷ್ಟೆ. ಈ ಭಿನ್ನ ದೃಷ್ಟಿಕೋನಗಳು ಇಬ್ಬರಲ್ಲೂ ಇರುವಂತಹವುಗಳು ಹಾಗೂ ಇಬ್ಬರಿಗೂ ಅನ್ವಯವಾಗುವಂಥವುಗಳು. ಆದರೆ ಪುರುಷ ಪ್ರಧಾನ ತಾತ್ವಿಕತೆ ಅವುಗಳನ್ನು ತನ್ನ ಹಿತಾಸಕ್ತಿಗೆ ಅನುಗುಣವಾಗಿ ಹೆಣೆದುಕೊಂಡಿರುವಂತಹ ಕ್ರಮವನ್ನು ಈ ಅಧ್ಯಯನದಿಂದ ಕಂಡುಕೊಳ್ಳಲು ಸಾಧ್ಯವಾಯಿತು.

ಮಹಿಳೆಯ ಭಾಷೆ ಒಳಗೊಂಡಿರುವ ಈ ಪುರುಷ ಪ್ರಾಧಾನ್ಯತೆಗೆ ವಿರುದ್ಧವಾಗಿ ತನ್ನ ಅಸ್ತಿತ್ವವನ್ನು ಭಾಷೆಯಲ್ಲಿ ಸ್ಥಾಪಿಸಿಕೊಳ್ಳಲು, ಮಹಿಳೆಯರದೇ ಆದ ಹೊಸ ಭಾಷೆಯನ್ನು ಸೃಷ್ಟಿಸಿಕೊಳ್ಳಲು ಪ್ರಯತ್ನಿಸಿದರು ಕೂಡ ಇನ್ನೂ ಸಾಧ್ಯವಾಗಿಲ್ಲ, ಆಗುವುದು ಇಲ್ಲ. ಕಾರಣ ಇಷ್ಟೇ ಸಾಮಾಜಿಕ ಸಂರಚನೆಯೇ ಹಾಗೆ ರೂಪುಗೊಂಡಿರುವ ಕಾರಣಕ್ಕಾಗಿ ಅನೇಕ ಶತಮಾನಗಳಿಂದ ಸ್ಥಾಪಿತವಾದ ಪುರುಷ ಪ್ರಧಾನ ಭಾಷೆಯನ್ನು ಏಕಾಏಕಿ ಬುಡಮೇಲು ಮಾಡಿ, ಅದೇ ಸ್ಥಳದಲ್ಲಿ ಹೊಸ ಸಾಧ್ಯತೆಯ ಭಾಷೆಯನ್ನು ಸೃಷ್ಟಿಸಲು ಸಾಧ್ಯವಾಗುವುದಿಲ್ಲ. ಈ ಬಗೆಯ ಬೆಳವಣಿಗೆ ಮತ್ತೊಂದು ತೊಂದರೆಗೆ ಎಡೆಮಾಡಿಕೊಡುತ್ತದೆ. ಆದ್ದರಿಂದ ಸಮಾಜದಲ್ಲಿಯ ಪ್ರತಿಯೊಬ್ಬರನ್ನು ಒಳಗೊಳ್ಳುವ ಜಾತಿ, ಲಿಂಗ, ಶ್ರೇಣಿ, ವರ್ಗಾತೀತವಾದ ಭಾಷೆಯನ್ನು ರೂಢಿಸಿಕೊಳ್ಳುವಂತಹ ಅಧ್ಯಯನ ಮಹತ್ವದ ವಿಚಾರಗಳನ್ನು ಮಂಡಿಸುತ್ತದೆ.

ಭಾಷೆ ಒಳಗೊಂಡಿರುವ ಸ್ತ್ರೀತ್ವ ಹಾಗೂ ಪುರುಷತ್ವದ ಸಾಂಸ್ಕೃತಿಕ ಬಂಧನಗಳ ಮಿತಿಗಳನ್ನು ಸೃಜನಶೀಲ ನೆಲೆಯಲ್ಲಿ ಮೀರುವಿಕೆ ಹಾಗೂ ಮಾನವರ ಸಮಗ್ರತೆಯ ಗ್ರಹಿಕೆಯನ್ನು ಬಿಟ್ಟು ಆಲೋಚಿಸುವವರೆಗೆ ಈ ಲಿಂಗಾತೀತವಾದ ಕಲ್ಪನೆ ಭಾಷೆಯನ್ನು ಒಳಗೊಂಡಂತೆ ಯಾವುದೇ ವಿಷಯದಲ್ಲೂ ಜಾರಿಗೆ ಬರುವುದಿಲ್ಲ. ಅದರಲ್ಲೂ ಕನ್ನಡ ಭಾಷೆಯ ಸಂದರ್ಭದಲ್ಲಿಯಂತೂ ಲಿಂಗಾತೀತವಾದ ಭಾಷಿಕ ರಚನೆ ಇನ್ನೂ ಸಾಧ್ಯವಾಗಿಲ್ಲ.

ಕನ್ನಡ ಸಂದರ್ಭದಲ್ಲಿ ಮಹಿಳೆಯರ ಭಾಷಿಕ ಚಹರೆಗಳನ್ನು ಶೋಧಿಸುವುದರ ಮೂಲಕ ಭಾಷೆಯಲ್ಲಿ ಮಹಿಳೆಯರ ಸ್ಥಾನಮಾನಗಳು ಯಾವ ಬಗೆಯಲ್ಲಿವೆ ಎಂಬುದನ್ನು ತೆರೆದಿಡುವಂತಹ ಪ್ರಯತ್ನ ಇಲ್ಲಿ ಆಗಿದೆ. ಭಾಷೆ ಮತ್ತು ಸಮಾಜ ಸದಾ ಚಲನಶೀಲವಾದದ್ದು. ಹೀಗಾಗಿ ಚಲನೆ ಎನ್ನುವುದು ನಿರಂತರ ನಡೆಯುವ ಪ್ರಕ್ರಿಯೆ. ಈ ಪ್ರಕ್ರಿಯೆಯಲ್ಲಿ ಸಮಾಜದಲ್ಲಿ ಮಹಿಳೆಯರ ಭಾಷೆಯಲ್ಲಿ ಎಲ್ಲಿ ನಿಂತಿದ್ದಾರೆ ಎಂಬ ನೆಲೆಯನ್ನು ಮತ್ತು ಹೋಗಬೇಕಾದ ದಾರಿಯನ್ನು ಪರಿಭಾವಿಸುವ ಬಗೆ ಎರಡೂ ಸಮಾಜದ ಅಧ್ಯಯನದ ದೃಷ್ಟಿಯಿಂದ ಮುಖ್ಯವಾಗುತ್ತದೆ. ಒಂದೇ ಭಾಷಿಕರು ಭಿನ್ನತೆಯಿಂದ ತಟಸ್ಥ ಮನೋಭಾವವನ್ನು ಹೊಂದುವ ದೃಷ್ಟಿಯಿಂದ ಅಧ್ಯಯನ ಮುಖ್ಯವಾಗುತ್ತದೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನ ಮಹತ್ವವಾಗಿದೆ.

## ೬.೧. ಅಧ್ಯಯನದ ಮುಂಚಲನೆಗಳು

ಸಾರ್ವಜನಿಕ ಮತ್ತು ಖಾಸಗಿ ವಲಯಗಳಲ್ಲಿ ಹೆಣ್ಣಿನ ಸ್ಥಾನ ಇಂದು ಮೇಲೇರಿದೆ. ಹಿಂದೆ ಗಂಡಸರದ್ದೆಂದು ಭಾವಿಸಲಾದ ಭಾಷಿಕ ವಲಯಗಳಲ್ಲಿ ಇಂದು ಹೆಣ್ಣಿನ ಚಹರೆ ಕಾಣುತ್ತದೆ. ಕೌಟುಂಬಿಕವಾಗಿ ಹೆಣ್ಣಿನ ಪಾತ್ರದ ಬದಲಾವಣೆಯಲ್ಲಿ ಅವಿಭಕ್ತ ಕುಟುಂಬ ವಿಭಕ್ತ ಕುಟುಂಬಗಳಾಗಿ ವಿಘಟನೆಗೊಂಡದ್ದು ಗಮನಾರ್ಹ ಸಂಗತಿಯಾಗಿದೆ. ವಿಭಕ್ತ ಕುಟುಂಬಗಳಿಂದಾಗಿ ಹೆಣ್ಣು ಎದುರು ಬಂದು ಮಾತಾಡಲೇಬೇಕಾದ ಪರಿಸ್ಥಿತಿ ನಿರ್ಮಾಣವಾಗಿದೆ. ಇದು ಪರೋಕ್ಷವಾಗಿ ಹೆಣ್ಣು ಮುಂಬರಲು ಕಾರಣವಾಗಿದೆ. ಇದರಿಂದ ಮಹಿಳೆಯರು ಅನಿವಾರ್ಯವಾಗಿಯಾದರೂ ಭಾಷಿಕವಾಗಿ ಹಲವಾರು ವಲಯಗಳಲ್ಲಿ ತೊಡಗಿಕೊಳ್ಳಲು ಕಾರಣಗಳಾಗಿವೆ. ಆಧುನಿಕ ಸಂದರ್ಭಗಳು ಮತ್ತು ಶಿಕ್ಷಣದಿಂದಾಗಿ ಹೆಣ್ಣಿಗೆ ಸಮಾನ ಅವಕಾಶಗಳು ಲಭ್ಯವಾಗಿರುವುದರಿಂದ ಸಾಂಪ್ರದಾಯಿಕವಾದ ಭಾಷಿಕ ವಲಯದ ಗಡಿಗಳು ಅಳಿಸಿಹೋಗಿವೆ. ಹಿಂದೆ ಹೆಣ್ಣು ಮಕ್ಕಳಿಗೆ ನಿಷೇಧವಾಗಿದ್ದ ಅನೇಕ ಸಂಗತಿಗಳು ಇಂದು ಕಾಣುವುದಿಲ್ಲ. ಹೆಂಗಸರು ಇಂದು ಸಾರ್ವಜನಿಕ ವಲಯಗಳಲ್ಲಿ ಗಂಡನ ಹೆಸರು ಹೇಳಲು ಆರಂಭಿಸಿದ್ದಾರೆ. ವ್ಯವಹಾರಿಕವಾಗಿ ಮಹಿಳೆಯರು ತೊಡಗಿಸಿಕೊಳ್ಳುವಂತೆ ಆಗಿದ್ದರಿಂದ ಮಹಿಳೆಯರು ವ್ಯವಹಾರದ ಭಾಷೆಯನ್ನು ಮಾತಾಡುವಂತೆ ಆಗಿದೆ. ಹಾಗೇನೆ ಕ್ರೀಡೆ, ರಾಜಕೀಯ ಹೀಗೆ ಎಲ್ಲ ವಲಯಗಳಲ್ಲಿ ಮಹಿಳೆಯರು ತೊಡಗಿಕೊಂಡು ಅಲ್ಲಿಯ ಭಾಷೆಯನ್ನು ಮಾತಾಡುವ ಹಲವು ಬದಲಾವಣೆಗಳಾಗಿವೆ.

ಅಧ್ಯಯನದ ಸಂದರ್ಭದಲ್ಲಿ ಹಲವು ತೊಡಕುಗಳು ಎದುರಾಗಿವೆ ಎಂದರೆ ಕನ್ನಡದಲ್ಲಿ ಈ ಬಗೆಯ ಅಧ್ಯಯನಗಳ ಕೊರತೆ. ಹೀಗಾಗಿ ಅಲ್ಲಿನ ಸಿದ್ಧಾಂತ ಮತ್ತು ಇಲ್ಲಿನ ವಾಸ್ತವಗಳ ನಡುವೆ ದಾರಿ ಕಂಡುಕೊಂಡು ಹೋಗಬೇಕಾದ ಸವಾಲು ಎದುರಾಗಿತ್ತು. ಪಾಶ್ಚಾತ್ಯ ಸಮಾಜದಲ್ಲಿ ನಡೆದ ಈ ಬಗೆಯ ಅಧ್ಯಯನಗಳು ಒಂದು ನೆಲೆಯಲ್ಲಿ ನಡೆದಂಥವು. ಅಂದರೆ ನಮ್ಮ ಸಮಾಜದಲ್ಲಿ ಜಾತಿ, ಧರ್ಮ, ನಿರ್ಧಾರವಾಗಿದೆ.

ಹೀಗಾಗಿ ಇಲ್ಲಿನ ವಾಸ್ತವವನ್ನು ಗ್ರಹಿಸಬೇಕಾದ ರೀತಿ ಬೇರೆ. ಹೀಗಾಗಿ ತಾತ್ವಿಕ ಚೌಕಟ್ಟು ರೂಪಿಸಿಕೊಳ್ಳುವುದು ಸವಾಲಿನ ಕೆಲಸವಾಗಿತ್ತು. ಈ ನೆಲೆಯಲ್ಲಿ ಮೊದಲು ಕ್ಷೇತ್ರಕಾರ್ಯ ನಡೆಸಿ ಆ ಸಮುದಾಯದ ಭಾಷಿಕ ನಡವಳಿಕೆಗಳು ವರ್ತನೆ, ಅಲ್ಲಿನ ಸಮುದಾಯ ರಚಿತಗೊಂಡಿರುವ ಪರಿ ಇವನ್ನು ಗಮನಿಸಿ, ನಂತರ ಓದು ಮತ್ತು ವಿದ್ವಾಂಸರೊಂದಿಗಿನ ಚರ್ಚೆಯಿಂದ ದಾರಿಯನ್ನು ಕಂಡುಕೊಳ್ಳಲಾಯಿತು. ಆದರೂ ಮಹಿಳೆ ಭಾಷೆ ಮತ್ತು ಸಮಾಜ ಇವೆರಡರ ವ್ಯಾಪ್ತಿಯೂ ಬಹುದೊಡ್ಡದು, ಇವುಗಳ ನಂಟೂ ಹಲವು ಮುಖವುಳ್ಳದ್ದು. ಇಲ್ಲಿ ಚರ್ಚಿತವಾದ ಪ್ರತಿಯೊಂದು

ಅಂಶದ ಕುರಿತು ಇನ್ನಷ್ಟು ವಿಸ್ತೃತ ಅಧ್ಯಯನವನ್ನು ಮುಂದಿನ ದಿನಗಳಲ್ಲಿ ನಡೆಸಬಹುದಾದ ಸಾಧ್ಯತೆ ಇದೆ.

**೬.೨. ಫಲಿತಗಳು**

೧. ನಮ್ಮ ಸಾಮಾಜಿಕ ಸಂದರ್ಭದಲ್ಲಿ ಮಹಿಳೆ–ಭಾಷೆ ಕುರಿತು ಇರುವ ನಿರೂಪಣೆಗಳು ನಮ್ಮ ಗ್ರಹಿಕೆಗೆ ತಕ್ಕಂತೆ ನಂಬಿಕೆಗಳು ಬಳಕೆಯಲ್ಲಿವೆ ಎಂಬುದು ಅಧ್ಯಯನದಿಂದ ತಿಳಿದುಬರುತ್ತದೆ.

೨. ಮಹಿಳಾ ಭಾಷೆ ಎಂದರೆ ಮಹಿಳೆಯದ್ದೇ ಭಾಷೆಯಲ್ಲ. ಅದು ಪುರುಷ ನಿರ್ಮಿತ ಭಾಷೆ ಎಂಬುದು ಅಧ್ಯಯನದ ಮಹತ್ವದ ಸಂಗತಿಯಾಗಿದೆ.

೩. ಪುರುಷ ಕೇಂದ್ರಿತವಾದ ಆಲೋಚನೆಗಳು ಸ್ತ್ರೀಕೇಂದ್ರಿತವಾದ ಆಲೋಚನೆಗಳೆಂದು ಮಂಡಿತವಾಗುತ್ತಿವೆ. ಇವುಗಳ ಅಂತರವನ್ನು ಅಧ್ಯಯನದಲ್ಲಿ ಸೂಕ್ಷ್ಮವಾಗಿ ಕಂಡುಕೊಳ್ಳಲಾಗಿದೆ.

೪. ನಮ್ಮ ಸಾಮಾಜಿಕ ಸಂದರ್ಭದಲ್ಲಿ ಲಿಂಗಾಧಾರಿತ ಮಾದರಿಯಲ್ಲೇ ಭಾಷಾ ಬಳಕೆಯಿದೆ. ಅಂದರೆ ಗಂಡಿಗೆ ಹೆಣ್ಣು ಅಧೀನಳಾಗಿರಬೇಕು ಎಂಬಂತೆ ಭಾಷಾ ಬಳಕೆಯಲ್ಲಿ ಕಾಣಿಸುತ್ತದೆ.

೫. ಮಹಿಳಾ ಭಾಷೆ ಸಮಾಜದ ಅಪೇಕ್ಷೆಗೆ ಇದೆಯೇ ಹೊರತು, ಮಹಿಳೆಯ ಅಪೇಕ್ಷೆಗೆ ಇಲ್ಲ ಎಂಬುದು ಅಧ್ಯಯನದಿಂದ ತಿಳಿದುಬರುತ್ತದೆ.

೬. ನಮ್ಮ ಸಾಮಾಜಿಕ ಸಂರಚನೆಯಲ್ಲಿ ಸಂಬೋಧನೆ, ಗಾದೆ, ಒಗಟು, ನುಡಿಗಟ್ಟು ಮುಂತಾದವುಗಳು ಮಹಿಳೆಯ ಜಾತಿ, ವರ್ಗ, ಶ್ರೇಣಿ, ಅಂತಸ್ತುಗಳಿಗೆ ಅನುಗುಣವಾಗಿ ಬಳಕೆಯಲ್ಲಿದೆ.

೭. ಹೆಣ್ಣಿನ ಭಾಷಾ ಬಳಕೆಯಲ್ಲಿ ಭಿನ್ನತೆಯನ್ನು ತಾರತಮ್ಯ ಎಂದು ವಿಶ್ಲೇಷಣೆ ಮಾಡಲಾಗಿದೆಯೇ ಹೊರತು, ಭಿನ್ನತೆ ಮತ್ತು ತಾರತಮ್ಯತೆಗೆ ವ್ಯತ್ಯಾಸವಿದೆ ಎಂಬುದನ್ನು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

೮. ಭಾಷೆಯಲ್ಲಿ ಹೆಣ್ಣಿನ ಪ್ರತಿನಿಧೀಕರಣ ಮಾಡುವಾಗ ಪುರುಷ ಕೇಂದ್ರಿತವಾದ ಪದಗಳನ್ನು ಸ್ತ್ರೀಕೇಂದ್ರಿತವಾಗಿ ಬದಲಾವಣೆ ಮಾಡಲಾಗುತ್ತಿದೆಯೇ ಹೊರತು, ಸ್ತ್ರೀಕೇಂದ್ರಿತವಾಗಿ ಹೊಸದಾಗಿ ಸೃಷ್ಟಿಸುತ್ತಿಲ್ಲ.

೯. ನಂಬಿಕೆ ಮತ್ತು ನಿಷೇಧಗಳನ್ನು ಪಾಲಿಸಲಿಕ್ಕೆ ಹಲವು ನಿರೂಪಣೆಗಳು ರಚನೆಗೊಂಡಿವೆ. ಇವು ಒಂದಕ್ಕೊಂದು ಪೂರಕ ಪೋಷಕಗಳಾಗಿ ಭಾಷೆಯಲ್ಲಿ ಕೆಲಸ ಮಾಡುತ್ತಿರುವುದು ಕಂಡುಬರುತ್ತದೆ.

೧೦. ಸಾಮಾಜಿಕ ಸಂರಚನೆಯ ಹಲವು ನಿಯಮಗಳು ಮಹಿಳೆಯರನ್ನು ಮಾತನಾಡದಂತೆ ನಿರ್ಬಂಧಿಸಿರುವ ತಡೆಗೋಡೆಗಳಾಗಿವೆ.

೧೧. ಮಹಿಳೆಗೆ ಸಮಾಜದಲ್ಲಿ ಮಾತನಾಡದಂತೆ ತಡೆಯುವಂತಹ ಹಲವು ಸಂಕಥನಗಳು ರಚನೆಗೊಂಡಿವೆ. ಅವುಗಳು ಸಮಾಜದ ರೂಢಿಯಲ್ಲಿ ಅಲಿಖಿತ ಕಾನೂನುಗಳಂತಿದ್ದು, ಪಾರಂಪರಿಕವಾಗಿ ಇಂದಿಗೂ ಮೌಖಿಕವಾಗಿಯೇ ಬಳಕೆಯಲ್ಲಿವೆ. ಇಂತಹ ವಿಚಾರಗಳ ಕುರಿತಾಗಿ ಅಧ್ಯಯನದಲ್ಲಿ ಚರ್ಚಿಸಲಾಗಿದೆ.

೧೨. ಮಹಿಳೆಯರ ಮಾತುಗಳಿಗೆ ಕೌಟುಂಬಿಕವಾಗಿ, ಸಾಮಾಜಿಕವಾಗಿ, ಧಾರ್ಮಿಕವಾಗಿ ಅನೇಕ ನಿಷೇಧಗಳು ನಿರ್ಬಂಧಗಳನ್ನು ಸಮಾಜದಲ್ಲಿ ಹೇರಲಾಗಿದೆ.

೧೩. ಸ್ತ್ರೀ ಮತ್ತು ಪುರುಷ ಎನ್ನುವುದು ಕೇವಲ ಜೈವಿಕ ಅನನ್ಯತೆಯನ್ನು ಗುರುತಿಸುವುದಲ್ಲದೆ, ಸಾಮಾಜಿಕವಾಗಿ ಅವರು ನಿರ್ವಹಿಸುವ ಪಾತ್ರದ ಆಧಾರದ ಮೇಲೆಯೇ ಲಿಂಗ ಎನ್ನುವುದನ್ನು ಗುರುತಿಸಲಾಗಿದೆ. ಅಂದರೆ ನಮ್ಮ ಸಾಮಾಜಿಕೀರಣ ವ್ಯವಸ್ಥೆಯಲ್ಲಿ ಸ್ತ್ರೀ ಪುರುಷ ನಿರ್ವಹಿಸಬೇಕಾದ ಕೆಲವು ಕೆಲಸಗಳಿಗೆ ಸೀಮಿತತೆ ಇದೆ. ಅದರಲ್ಲಿ ಲಿಂಗ ಅಸಮಾನತೆ ಎದ್ದು ಕಾಣುತ್ತದೆ. ಅದುವೇ ಇಂದಿನ ಲಿಂಗ ವ್ಯವಸ್ಥೆಯಾಗಿದೆ.

೧೪. ಸಾಮಾಜಿಕವಾಗಿ ಭಾಷೆಯನ್ನು ಗಮನಿಸಿದಾಗ ಅದರಲ್ಲಿ ಲಿಂಗ ಅಸಮಾನತೆ ಇದೆ ಎಂದೇ ಹೇಳಬೇಕು. ಏಕೆಂದರೆ ಭಾಷೆಯಲ್ಲಿ ಸ್ತ್ರೀಗೆ ವಿಧಿಸಿರುವಂತಹ ನಿಷೇಧ ನಿರ್ಬಂಧಗಳು ಪುರುಷನಿಗೆ ವಿಧಿಸಿಲ್ಲ. ಮಹಿಳೆಗೆ ಅಭಿವ್ಯಕ್ತಿ ಸ್ವತಂತ್ರ್ಯತೆಯೂ ಕಡಿಮೆ. ಜನನದಿಂದ ಮರಣದವರೆಗೆ ಸ್ತ್ರೀ ಒಂದಲ್ಲ ಒಂದು ವಿಧಿ ನಿಯಮದಲ್ಲಿ ಬದುಕಲೇಬೇಕಾಗಿದೆ. ಆದರೆ ಪುರುಷನಿಗೆ ವಿಧಿ ಬಂಧಗಳು ಇರುವುದಿಲ್ಲ.

೧೫. ಪ್ರತಿಯೊಂದು ಜಾತಿ ಸಮುದಾಯದಲ್ಲಿಯೂ ರೂಢಿ ಸಂಪ್ರದಾಯ ಆಚರಣೆ ನಂಬಿಕೆಗಳು ವಿಧಿ-ನಿಷೇಧಗಳು ಸರ್ವೇ ಸಾಮಾನ್ಯವಾಗಿರುತ್ತವೆ. ಕೆಲವು ಸಾಮ್ಯತೆ ಹೊಂದಿದ್ದರೆ, ಇನ್ನು ಕೆಲವು ವಿಭಿನ್ನವಾಗಿವೆ.

೧೬. ಜನಪದ ಗಾದೆ ಬೈಗುಳ, ಒಗಟು, ನುಡಿಗಟ್ಟು ಇತ್ಯಾದಿ ಸಂಕಥನಗಳ ನಿರೂಪಣೆಗಳನ್ನು ಗಮನಿಸಿದರೆ ಮಹಿಳೆಗೆ ಮಾತಿನ ಸ್ವಾತಂತ್ರ್ಯವು ನಿಷೇಧಾತ್ಮಕವಾಗಿಯೇ ಹೆಚ್ಚು ಬಳಕೆಯಲ್ಲಿವೆ ಎನಿಸುತ್ತದೆ.

೧೭. ಪ್ರಾದೇಶಿಕವಾಗಿ ಹೋಲಿಸಿದಾಗ ಭಾಷೆಯ ಮುಕ್ತತೆ ಮತ್ತು ಸ್ವತಂತ್ರತೆಯಲ್ಲಿ ಅನುಸರಣೆಯಲ್ಲಿ ವ್ಯತ್ಯಾಸವಿದೆ. ಆಯಾ ಕಾಲ, ಸಂದರ್ಭ, ಸ್ಥಳಕ್ಕನುಗುಣವಾಗಿ ನುಡಿಬಳಕೆಗೆ ಹಲವು ಸಡಿಲಿಕೆಗಳಿವೆ. ಶೈಕ್ಷಣಿಕವಾಗಿ ಪ್ರಗತಿ ಹೊಂದಿದ ಗ್ರಾಮೀಣ ಪ್ರದೇಶದ ಕೆಲವು ಕುಟುಂಬಗಳಲ್ಲಿ ಭಾಷೆ ಬಳಕೆ ಅಷ್ಟೊಂದು ನಿರ್ಬಂಧದಿಂದ ಕೂಡಿಲ್ಲ. ಜಾತಿಯಾಧಾರಿತವಾಗಿ ತಳಸಮುದಾಯದ ಶಿಕ್ಷಿತ ಮಹಿಳೆಗೂ ಮೇಲಿನ ಸಮುದಾಯದ ಅಶಿಕ್ಷಿತ ಮಹಿಳೆಗೂ ಭಾಷೆ ಬಳಕೆಯಲ್ಲಿ ಹಲವಾರು ವ್ಯತ್ಯಾಸಗಳಿವೆ. ಎಲ್ಲ ಕಡೆಗೂ ಒಂದೇ ಮಾದರಿ ಕಂಡುಬರುವುದಿಲ್ಲ.

ಒಟ್ಟಾರೆಯಾಗಿ ಸಮಾಜದಲ್ಲಿ ಪೂರ್ವಗ್ರಹಿತವಾಗಿರುವಂತಹ ಪುರುಷ ಪ್ರಧಾನ ಸಂರಚನೆಯ ಸಂಸ್ಕೃತಿಯನ್ನು ತೊಡೆದು ವೈಚಾರಿಕತೆಯ ಮನೋಭಾವ ಬೆಳೆಸಿಕೊಂಡಾಗ ಮಾತ್ರ ಲಿಂಗ ತಾರತಮ್ಯವನ್ನು ತೊಡೆದುಹಾಕಲು ಸಾಧ್ಯ. ಆಗಲೇ ಭಾಷೆಯಲ್ಲಿ ಲಿಂಗ ಸಮಾನತೆ ತರಲು ಸಾಧ್ಯ.

೧೮. ಕೌಟುಂಬಿಕ ವಲಯದಲ್ಲಿ ನಿರ್ಧಾರಗಳನ್ನು ತೆಗೆದುಕೊಳ್ಳುವ ಹಕ್ಕು ಮಹಿಳೆಗೆ ನಿಷೇಧವಾಗಿದೆ. ಮಹಿಳೆಯರ ಮಾತುಗಳಿಗೆ ಕೌಟುಂಬಿಕ ವಲಯದಲ್ಲಿ ಮೌಲ್ಯಗಳೇ ಇಲ್ಲ.

೧೯. ರಾಜಕೀಯವಾಗಿ ಮಹತ್ವದ ಹುದ್ದೆಯನ್ನು ಅಲಂಕರಿಸಿದ್ದರೂ ಮಹಿಳೆ ಮಾತಾಡದೆ ಇರುವಂತಹ ಪರಿಸ್ಥಿತಿ ಸಮಾಜದಲ್ಲಿ ಇನ್ನು ಜೀವಂತವಿದೆ. ಈ ಸ್ಥಿತಿಗೆ ಸಮಾಜದ ರೂಢಿ, ಸಂಪ್ರದಾಯ ಧೋರಣೆಗಳು ಕಾರಣವಾಗಿವೆ. ಅಂದರೆ ಮಹಿಳೆ ತಾನು ಸರಿಯಾಗಿ ಮಾತಾಡುವುದಿಲ್ಲ. ತಾನು ಮಾತನಾಡಿದರೆ ಸಭೆಯಲ್ಲಿರುವ ಗಂಡಸರು ನಗುತ್ತಾರೆ. ಇಂತಹ ಕೀಳರಿಮೆಯಿಂದಾಗಿ ಮಹಿಳೆ ಅಧಿಕಾರದಲ್ಲಿದ್ದರೂ, ತನ್ನ ಮಾತುಗಳಿಗೆ ಕಡಿವಾಣ ಹಾಕಿಕೊಳ್ಳುತ್ತಾಳೆ. ಪ್ರದೇಶ ಪರಿಸರ ವರ್ಗ ಮತ್ತು ಶಿಕ್ಷಣದ ಆಧಾರವಾಗಿ ಭಿನ್ನ ರೀತಿಯಲ್ಲಿ ಇರುವುದು ಕಂಡುಬರುತ್ತದೆ.

೨೦. ಹೆಚ್ಚು ಮಾತನಾಡುವ ಮಹಿಳೆಯರಿಗೆ ಹಲವು ಬಿರುದುಗಳಿಂದ ಅಪಮಾನ ಮಾಡುವುದರ ಮೂಲಕ ಇತರ ಮಹಿಳೆಯರು ಆ ಕಟ್ಟುಪಾಡುಗಳಿಗೆ ತಕ್ಕಂತೆ ನಡೆದುಕೊಳ್ಳುವಂತೆ ಸಮಾಜ ಎಚ್ಚರ ವಹಿಸುತ್ತದೆ.

೨೧. ಮಹಿಳೆಯರು ಕೆಲವು ವಿಚಾರಗಳನ್ನು ಬಹಿರಂಗವಾಗಿ ಮಾತನಾಡುವ ಹಾಗಿಲ್ಲ. ಒಂದು ವೇಳೆ ಹಾಗೆ ಮಾತನಾಡಿದಲ್ಲಿ ನಾಚಿಕೆ ಇಲ್ಲದವಳು ಎಂಬಂತಹ ರೀತಿಯಲ್ಲಿ ನಿಂದಿಸುತ್ತಾರೆ.

ಆ ವಿಚಾರಗಳನ್ನು ಗಂಡಸರು ಸರಾಗವಾಗಿ ಮಾತಾಡಬಹುದು, ಅದು ರಸಿಕತೆ ಎನಿಸಿಕೊಳ್ಳುತ್ತದೆ. ಮತ್ತು ಗಂಡಸರು ನಾಚಿಕೆ ಪಡಕೂಡದು. ಇದು ಸಮಾಜದ ನಿಯಮ.

೨೨. ಮಹಿಳೆಯರು ಶಿಳ್ಳು ಹಾಕಬಾರದು, ಜೋರಾಗಿ ನಗಬಾರದು, ಕಣ್ಣಿನ ಸನ್ನೆ ಮಾಡಕೂಡದು ಮತ್ತು ಅಶಾಬ್ದಿಕ ಸನ್ನೆಗಳನ್ನು ಮಾಡದಂತೆ ನಿಷೇಧಗಳನ್ನು ಹೇರಲಾಗಿದೆ.

**೬.೩. ಅಧ್ಯಯನದ ಹೊಸ ಸಾಧ್ಯತೆಗಳು**

ಮಹಿಳೆಯರ ಭಾಷೆ ಮತ್ತು ಸಮಾಜ ಬಹುಮುಖಿ ಆಯಾಮಗಳನ್ನು ಹೊಂದಿದ್ದು ಭಾಷೆ ಮತ್ತು ಸಮಾಜ ಕುರಿತು ಆಸಕ್ತಿ ಹೊಂದಿದವರಿಗೆ, ಹಲವು ನೆಲೆಯಿಂದ ಅಧ್ಯಯನ ನಡೆಸಬಹುದಾದ ಅವಕಾಶ ಇಲ್ಲಿದೆ.

ಮಹಿಳೆಯ ಭಾಷೆ ಕುರಿತಂತೆ ಪ್ರಾದೇಶಿಕವಾಗಿ ಸೂಕ್ಷ್ಮ ವ್ಯತ್ಯಾಸ ಗುರುತಿಸುವುದು ಸಾಧ್ಯವಿದೆ. ಪ್ರತಿ ಭೌಗೋಳಿಕ ಅಡೆತಡೆಗಳ ಕಾರಣದಿಂದ ಭಾಷೆಯಲ್ಲಿ ವ್ಯತ್ಯಾಸವಿದೆ. ಇವುಗಳನ್ನು ಲಿಂಗಾಧಾರಿತವಾಗಿ ಅಧ್ಯಯನ ನಡೆಸಲು ಅವಕಾಶವಿದೆ.

ಮಹಿಳೆ ಭಾಷೆಯ ಹಿನ್ನೆಲೆಯಿಂದ ಸಮಾಜದಲ್ಲಿನ ಗಾದೆಗಳ ಕುರಿತಂತೆ ನುಡಿಗಟ್ಟುಗಳ ಕುರಿತಂತೆ, ಸ್ಥಳನಾಮ, ಆಹಾರ ಪದ್ಧತಿ, ರೂಢಿ ಸಂಪ್ರದಾಯಕ್ಕೆ ಅನುಗುಣವಾಗಿ ಪೂರ್ಣಪ್ರಮಾಣದ ಅಧ್ಯಯನಗಳು ಇದುವರೆಗೆ ನಡೆದಿಲ್ಲ. ಇವುಗಳನ್ನು ಇರಿಸಿಕೊಂಡು ಗಂಭೀರ ಅಧ್ಯಯನ ನಡೆಸಬಹುದಾಗಿದೆ.

ಜನಪದ ಪಠ್ಯಗಳಲ್ಲಿ ಲಿಂಗ ಆಧಾರಿತ ಭಾಷಿಕ ವಿವರಗಳ ಕುರಿತು ಅಧ್ಯಯನ ಮಾಡಲು ಅವಕಾಶವಿದೆ.

ಸಾಹಿತ್ಯದ ಭಾಷೆ ಒಳಗಡೆ ಲಿಂಗ ಸಂಬಂಧಿ ಆಯಾಮಗಳನ್ನು ಗುರುತಿಸಬಹುದು, ಸಾಹಿತ್ಯ ಪಠ್ಯದೊಳಗಡೆ ನಡೆಯುತ್ತಿರುವಂತಹ ಭಾಷಿಕ ಬದಲಾವಣೆಗಳು ಲಿಂಗಾತೀತವಾಗಿ ಹೇಗೆ ರೂಪಗೊಂಡಿವೆ ಎಂಬುದನ್ನು ಕುರಿತಂತೆ ಅಧ್ಯಯನ ನಡೆಸಲು ಸಾಧ್ಯವಿದೆ.

ಹಾಗೇನೆ ಮಾಧ್ಯಮಗಳಲ್ಲಿನ ಲಿಂಗಾಧಾರಿತ ಭಾಷೆಯನ್ನು ಅಧ್ಯಯನ ಮಾಡಬಹುದಾದ ಹಲವು ಸಾಧ್ಯತೆಗಳಿವೆ.

ಆಡಳಿತದ ಭಾಷೆಯಲ್ಲಿ ಮಹಿಳೆಯರ ಒಳಗೊಳ್ಳುವಿಕೆ ಯಾವ ಬಗೆಯಲ್ಲಿದೆ ಎಂಬುದನ್ನು ಅಧ್ಯಯನ ಮಾಡಬಹುದಾಗಿದೆ.

ಪಠ್ಯಪುಸ್ತಕಗಳಲ್ಲಿ ಲಿಂಗಾಧಾರಿತವಾಗಿ ಭಾಷೆ ಹೇಗೆ ಬಳಕೆಗೊಳ್ಳುತ್ತಿದೆ ಎಂಬುದನ್ನು ಅಧ್ಯಯನಕ್ಕೆ ಒಳಪಡಿಸಬಹುದಾಗಿದೆ.

ನಿಘಂಟು ಮತ್ತು ಪದಕೋಶಗಳಲ್ಲಿ ಮಹಿಳೆಯರನ್ನು ವಿವರಿಸುತ್ತಿರುವಂತಹ ವಿಧಾನಗಳನ್ನು ಕುರಿತಂತೆ ಅಧ್ಯಯನ ಮಾಡಬಹುದಾಗಿದೆ.

# ಅನುಬಂಧಗಳು

1. ವಿದ್ವಾಂಸರ ಮಾಹಿತಿ
2. ಪ್ರಶ್ನಾವಳಿ
3. ವಕ್ತೃ ವಿವರ
4. ಪರಾಮರ್ಶನ ಗ್ರಂಥಗಳು

## ವಿದ್ವಾಂಸರ ಸಂದರ್ಶನ

1. ವೈಯಕಕ್ತಿಕ ಮಾಹಿತಿ

ಅ. ಹೆಸರು : ಡಾ. ಶೋಭಾದೇವಿ ಎಂ.ಜಿ.

ಆ. ವಿಳಾಸ : ನಿರ್ದೇಶಕರು, ಮಹಿಳಾ ಅಧ್ಯಯನ ಕೇಂದ್ರ ಕನ್ನಡ ವಿಶ್ವ ವಿದ್ಯಾಲಯ ಹಂಪಿ

ಇ. ಜಾತಿ : –

ಈ. ವೃತ್ತಿ : ನಿರ್ದೇಶಕರು

2. ಭಾಷೆಯಲ್ಲಿ ಗಂಡು/ಹೆಣ್ಣು ಎಂಬ ಎರಡು ವಿಧಗಳಿವೆಯೇ? ಅಥವಾ ದೃಷ್ಟಿಕೋನಗಳಿವೆಯೇ?

   ಭಾಷೆಯಲ್ಲಿ ಗಂಡು–ಹೆಣ್ಣು ವಿಧಗಳಿಲ್ಲ. ಆದರೆ ಭಾಷೆಯ ಬಳಕೆಯಲ್ಲಿ ವ್ಯತ್ಯಾಸವಿದೆ. ಇದನ್ನು ಗಂಡು–ಹೆಣ್ಣು ಎಂದು ನೊಡುವುದಕ್ಕಿಂತಲ್ಲೂ ವ್ಯಕ್ತಿ ಎಂದು ನೋಡಬೇಕಾಗಿದೆ. ಭಾಷೆಯ ಬಳಕೆ ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾಗಿರುತ್ತದೆ. ಆದರೆ ಭಾಷಾ ಬಳಕೆಯಲ್ಲಿ ಲಿಂಗತಾರತಮ್ಯ ಇದ್ದು, ನಮ್ಮ ಸಾಮಾಜೀಕರಣ ಪ್ರಕ್ರೀಯೆಯಿಂದ ಬಂದಿದೆ.

3. ಭಾಷೆಯನ್ನು ಗಂಡು ಭಾಷೆ ಮತ್ತು ಹೆಣ್ಣು ಭಾಷೆ ಎಂದು ವಿಭಾಗಿಸಿ ನೋಡುವ ಕ್ರಮ ಸೂಕ್ತವೆ?

   ಇಲ್ಲ.

4. ಭಾಷೆಯ ಸಂರಚಿತ ರೂಪವೇ ಗಂಡು/ಹೆಣ್ಣು ಎಂಬ ತಾರತಮ್ಯದಿಂದ ಕೂಡಿದೆಯೇ ಅಥವಾ ಸಮುದಾಯದ ಸೂಪ್ತ ಚೇತನಗಳ ಸಂಜ್ಞೆಗಳಾಗಿ ಭಾಷೆಯಲ್ಲಿ ಅಂತಸ್ಥಗೊಂಡು ವಿಭಜಿತ ನೆಲೆಗೆ ಬಂದು ನಿಂತಿವೆಯೇ?

   ಮೊದಲೇ ಹೇಳಿದಂತೆ ಭಾಷೆ ಪುರುಷಪ್ರಧಾನ ಸಮಾಜದಿಂದ ಹುಟ್ಟಿದೆ. ಹಾಗಾಗಿ ಪುರುಷ ಪರವಾಗಿದೆ. ಲಿಂಗತಾರತಮ್ಯದಿಂದ ಕೊಡಿದೆ.

5. ಭಾಷೆಯ ಶುದ್ಧತೆಯನ್ನು ಉಳಿಸಿಕೊಂಡು ಬರುವ ಗುಣ ಸ್ತ್ರೀಯರ ಭಾಷೆಯದು.

   ಇದು ಸರೀನಾ?

ಸರಿಯಲ್ಲ. ಭಾಷೆ ಕಾಲಕಾಲಕ್ಕೆ ಬದಲಾಗುತ್ತಲೇ ಇರುತ್ತದೆ. ಇದರಿಂದ ಭಾಷೆ ಉಳಿಯುತ್ತದೆ ಬೆಳೆಯುತ್ತದೆ. ಇದನ್ನು ಸ್ತ್ರೀಯರಿಗೆ ಮಾತ್ರ ಅನ್ವಯಿಸುವುದು ಸರಿಯಲ್ಲ.

6. ಮಹಿಳೆಯರದೇ ಹೊಸ ಭಾಷೆ ಸೃಷ್ಟಿಸಲು ಸಾಧ್ಯವಾಗಿದೆಯೇ?

ಇಲ್ಲ. ಆದರೆ ಭಾಷೆಯ ಬಳಕೆಯಲ್ಲಿ ಲಿಂಗವಾಚಕಗಳನ್ನು ತೆಗೆಯುವ ಪ್ರಯತ್ನ ನಡೆದಿದೆ, ಬಹುವಚನ ಬಳಸಿದರೆ ಕೆಲವೊಮ್ಮೆ ಹುದ್ದೆಗಳನ್ನು ಹೆಸರಿಸುವಾಗ ಕನ್ನಡದಲ್ಲಿ ಸ್ತ್ರೀವಾಚಕ ಪ್ರತ್ಯಯ ಸೇರಿಸುವುದಿದೆ. ವಿದ್ಯಾರ್ಥಿ–ವಿದ್ಯಾರ್ಥಿನಿ, ನಿರ್ದೇಶಕ–ನಿರ್ದೇಶಕಿ ಇತ್ಯಾದಿ ಇವುಗಳಿಗೆ ಬಹುವಚನ ಪ್ರತ್ಯಯ ಸೇರಿದರೆ ಇಬ್ಬರಿಗೂ ಬಳಸಬಹುದು. ಪ್ರಯತ್ನ ನಡೆದಿದೆ ಆದರೆ ಇನ್ನೂ ಅದು ಸಾರ್ವತ್ರೀಕರಣಗೊಂಡಿಲ್ಲ.

7. ಮಹಿಳೆಯರದೇ ಪ್ರತ್ಯೇಕ ಭಾಷೆ ಸೃಷ್ಟಿಯಾದ ಮೇಲೆ ಅದು ಅಪ್ರಜ್ಞಾಪೂರ್ವಕವಾಗಿ ಇಡೀ ಸಮುದಾಯದ ಸಾಂಸ್ಕೃತಿಕ ಭಾಗವಾಗಿ ಬಳಕೆಯಾಗುವಷ್ಟು ಪ್ರಭಾವಯುತವಾಗಿದೆ? ಅಥವಾ ಕೇವಲ ಪ್ರಜ್ಞಾಪೂರ್ವಕ ನೆಲೆಯಲ್ಲಿ ಮಾತ್ರ ನಿಂತು ಬಿಟ್ಟಿದೆಯೇ?

ಪ್ರಜ್ಞಾಪೂರ್ವಕ ನೆಲೆಯಲ್ಲಿಯೇ ನಿಂತಿದೆ ಹಿಂದಿನ ಪ್ರಶ್ನೆಯಲ್ಲಿ ಉತ್ತರಿಸಿದ್ದೇನೆ.

8. ಲಿಂಗಾತೀತವಾದ ಭಾಷೆಯನ್ನು ಸೃಷ್ಟಿಸಲು ಸಾಧ್ಯವಾಗಿದೆಯೇ?

ಪ್ರಯತ್ನವಂತೂ ಸಾಗಿದೆ.

9. ಗಂಡು–ಹೆಣ್ಣಿನ ಅಲೋಚನೆ ಲೋಕಗ್ರಹಿಕೆ ಮತ್ತು ತಾತ್ವಿಕತೆ ಭಿನ್ನವೆ? ಹೌದಾದರೆ ಅದಕ್ಕೆ ಕಾರಣಗಳೇನು?

ಸಾಮಾಜೀಕರಣ ಪ್ರಕ್ರೀಯೆ ಇದಕ್ಕೆ ಮೂಲಕಾರಣ, ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಗಂಡು ಮತ್ತು ಹೆಣ್ಣಿಗೆ ಚೌಕಟ್ಟುಗಳನ್ನು ನಿರ್ಮಿಸಿ ಅದರೊಳಗೆ ಇಬ್ಬರನ್ನೂ ಬೆಳೆಸುವುದರಿಂದ ಹೀಗಾಗಿದೆ. ಕೆಲವೊಮ್ಮೆ ಅಪರಾದಗಳು ಇವೆ.

10. ಸಾಮಾಜಿಕ ಸಂದರ್ಭದಲ್ಲಿ ಸ್ತ್ರೀವಾಚಕಗಳ ಬಳಕೆ ವೈಯಕ್ತಿಕ ನೆಲೆ ಹಾಗೂ ಸಮುದಾಯದ ನೆಲೆಗಳೆರಡರಲ್ಲಿಯು ಅಸ್ತಿತ್ವ ಪಡೆದಿವೆಯೇ? ಪಡೆಯುತ್ತಿವೆಯೇ/ಇಲ್ಲವೇ?

ಇಲ್ಲ.

11. ಎಲ್ಲಾ ವಯೋಮಾನದ ಸ್ತ್ರೀ ಪುರುಷರಿಬ್ಬರಲ್ಲೂ ಸ್ತ್ರೀವಾಚಕಗಳು ಹಾಗೂ ಪುರುಷ ವಾಚಕಗಳನ್ನು ಪ್ರಜ್ಞಾಪೂರ್ವಕವಾಗಿ ಬಳಸುವ ಪರಿಪಾಠ ಶುರುವಾಗಿದೆಯೇ? ಅಥವಾ ಇಲ್ಲವೇ?

ಈಗಾಗಲೇ ಹೇಳದಂತೆ ಶುರುವಾಗಿದೆ.

12. ಪುರುಷ ವಾಚಕಗಳ/ಸ್ತ್ರೀವಾಚಕಗಳು ಎಂದು ಗೆರೆ ಎಳೆದು ಬಳಸುವುದಕ್ಕಿಂತ ಹೊಸ ರೀತಿಯ ಪದಗಳನ್ನು ಸೃಷ್ಟಿಸಿ ಬಳಸುವ ಪರಿಪಾಠ ಇದೆಯೇ?

ಭಾಷೆಯಲ್ಲಿ ಬದಲಾವಣೆ ಸಹಜ. ಮಹಿಳಾವಾದದ ಹಿನ್ನೆಲೆಯಲ್ಲಿ ಹೊಸರೀತಿಯ ಪದಗಳು ಬಳಕೆಯಾಗುತ್ತಿದೆ. ಉದಾ:- Chair Person Human.

**2. ವೈಯಕ್ತಿಕ ಮಾಹಿತಿ**

ಅ. ಹೆಸರು : ಎಂ ಉಷಾ

ಆ. ವಿಳಾಸ : ಕನ್ನಡ ವಿಶ್ವವಿದ್ಯಾಲಯ ಹಂಪಿ

ಇ. ಜಾತಿ : ವೀರಶೈವ

ಈ. ವೃತ್ತಿ : ಅಧ್ಯಾಪನ

2. ಭಾಷೆಯಲ್ಲಿ ಗಂಡು/ಹೆಣ್ಣು ಎಂಬ ಎರಡು ವಿಧಗಳಿವೆಯೇ? ಅಥವಾ ಎರಡು ದೃಷ್ಟಿಕೋನಗಳಿವೆಯೇ?

ಅ) ಪಿತೃ ಪ್ರಧಾನ ಸಮಾಜವು ತನ್ನದೆ ವಿವರರಣೆಯೋಂದಿಗೆ 'ಗಂಡು ಭಾಷೆ' ಎಂಬುದನ್ನು ಬಳಸುತ್ತದೆ. ಉದಾ:- ಉತ್ತರ ಕರ್ನಾಟಕದ ನೆಲವನ್ನು ಗಂಡು ಮೆಟ್ಟಿನ ನಾಡು ಎಂದು ಅಲ್ಲಿನ ಕನ್ನಡವನ್ನು ಗಂಡು ಭಾಷೆ ಎಂದು ಅಲಂಕಾರಕವಾಗಿ ಬಳಸುವುದು. ಇವೆಲ್ಲ ಗಂಡು ಎಂಬ ವಿಶೇಷಣ 'ಒರಟು' ಕಠಿಣ ಕೃತಿಮತ್ತೆಗೆ ಹೊರತಾದ ಎಂಬ ಅರ್ಥಕಾಣುತ್ತದೆ. ಆದರೆ ಇದಕ್ಕೆ ಎದುರು ಪರಿಕಲ್ಪನೆಯಾಗಿ ಹೆಣ್ಣು ಬಾಷೆ ಎಂಬುದನ್ನು ಬಳಸಿದಂತೆ ಕಾಣುವುದಿಲ್ಲ.

ಆ) ಪಿತೃಪ್ರಧಾನ ಸಮಾಜವು ಆಂಗಿಕ ಭಾಷೆಯ ಸಂದರ್ಭದಲ್ಲಿ ಹೆಣ್ಣು-ಗಂಡು ಎಂಬ ವ್ಯಾತ್ಯಾಸವನ್ನು ಗುರುತಿಸುತ್ತದೆ. ಅಥವಾ ಪ್ರತಿಪಾದಿಸುತ್ತದೆ.

ಇ) ಭಾಷೆ ಸಾಮಾಜಿಕವಾದುದ್ದರಿಂದ ಸಮಾಜ ಪಿತೃಪ್ರಧಾನವಾದುದರಿಂದ ವಿಧಗಳ ಬಗೆಗೆ ಅಥವಾ ದೃಷ್ಟಿಕೋನಗಳ ಬಗೆಗೆ ತೀರ್ಮಾನವನ್ನು ಬರುವುದು ಕಷ್ಟಸಾಧ್ಯ.

3. ಭಾಷೆಯನ್ನು ಗಂಡುಬಾಷೆ ಮತ್ತು ಹೆಣ್ಣು ಭಾಷೆ ಎಂದು ವಿಭಾಗಿಸಿ ನೋಡುವ ಕ್ರಮ ಸೂಕ್ತವೆ?

ಸ್ತ್ರೀವಾದಿ ಚಿಂತನೆಯಲ್ಲಿ ಈ ಬಗ್ಗೆ ದ್ವಂದ್ವತೆ ಇದೆ. ಅದು ಒಂದೆಡೆ ಪಿತೃಪ್ರಧಾನ ಸಮಾಜದ ಗಂಡು–ಹೆಣ್ಣು ಎಂಬ ವಿಭಜನೆಯನ್ನು ಪ್ರಶ್ನಿಸುತ್ತದೆ. ಇನ್ನೊಂದೆಡೆ 'ಹೆಣ್ಣು ಭಾಷೆ'ಯ ಅಸ್ತಿತ್ವಕ್ಕಾಗಿ ತಡಕಾಡುತ್ತದೆ.

4. ಭಾಷೆಯ ಸಂರಚಿತ ರೂಪವೇ ಗಂಡು/ಹೆಣ್ಣು ಎಂಬ ತಾರತಮ್ಯದಿಂದ ಕೂಡಿದೆಯೇ ಅಥವಾ ಸಮುದಾಯದ ಸುಪ್ತ ಚೇತನಗಳ ಸಂಜ್ಞೆಗಳಾಗಿ ಭಾಷೆಯಲ್ಲಿ ಅಂತಸ್ಥಗೊಂಡು ವಿಭಜಿತ ನೆಲೆಗೆ ಬಂದು ನಿಂತಿವೆಯೇ?

   ಭಾಷೆಯನ್ನು ವಿಶ್ಲೇಷಿಸುವ ಸಂದರ್ಭದಲ್ಲಿ ಸಮಾಜದಲ್ಲಿ ಲಿಂಗತ್ವವಲ್ಲದೇ, ಪ್ರಾದೇಶಿಕ ಸಮುದಾಯಿಕ ಇತ್ಯಾದಿ ಹಲವು ಮಾನದಂಡಗಳು ಅಸ್ತಿತ್ವದಲ್ಲಿವೆ. ಇದರೊಂದಿಗೆ ವ್ಯಕ್ತಿ, ವೈಶಿಷ್ಟ್ಯ, ವ್ಯುತ್ಪತ್ತಿ, ರಾಜಕೀಯ, ನಿಲುವು ಹೀಗೆ ಹಲವು ವೈಯಕ್ತಿಕ ಸಾಲುಗಳು ಇವೆ. ಹಾಗಾಗಿ ಇವುಗಳಲ್ಲಿ ಒಳಗೊಂಡಂತೆ ಲಿಂಗತ್ವದ ನೆಲೆಯೇ ಸಂರಚನೆಯ ಒಳಗಾಗಲಿ, ಸುಪ್ತ ಚೇತನಗಳ ಸಂಜ್ಞೆಗಳ ಬಗೆಗಾಗಲಿ ಅಭಿಪ್ರಾಯ ಮಂಡಿಸಲು ನನ್ನ ಬಳಿ ಯಾವುದೇ, ದತ್ತಕೋಶವಾಗಿ ಅಧ್ಯಯನದ ಫಲಿತಗಳಾಗಲಿ ಇಲ್ಲ.

5. ಭಾಷೆಯ ಶುದ್ಧತೆಯನ್ನು ಉಳಿಸಿಕೊಂಡು ಬರುವ ಗುಣ ಸ್ತ್ರೀಯರ ಭಾಷೆಯದು. ಇದು ಸರೀನಾ?

   ಪಿತೃಪ್ರಧಾನ ವ್ಯವಸ್ಥೆಯಲ್ಲಿ ಸ್ತ್ರೀ ಇನ್ನೊಂದು ಮನೆಗೆ ಹೋಗಿ ಅಲ್ಲಿನ ಸಂಸ್ಕೃತಿಯನ್ನು ಉಳಿಸಿ ಬೆಳಸುವ ಹೊಣೆಗಾರಿಕೆ ಹೊತ್ತವಳಾದ್ದರಿಂದ ಅವಳು ತಾನು ಹುಟ್ಟನಿಂದ ಕಲಿತ ಭಾಷೆಯನ್ನು ಕಳೆದುಕೊಳ್ಳಬೇಕಾದ ಅನಿವಾರ್ಯ ಇರುತ್ತದೆ. ಇನ್ನು 'ಉಳಿಸಿಕೊಳ್ಳುವ' ಬಗೆ ಹೇಗೆ?

6. ಮಹಿಳೆಯರದೇ ಹೊಸ ಭಾಷೆ ಸೃಷ್ಟಿಸಲು ಸಾಧ್ಯವಾಗಿದೆಯೇ?

   ಇಲ್ಲ.

7. ಮಹಿಳೆಯರದೇ ಪ್ರತ್ಯೇಕ ಭಾಷೆ ಸೃಷ್ಟಿಯಾದ ಮೇಲೆ ಅದು ಅಪ್ರಜ್ಞಾಪೂರ್ವಕವಾಗಿ ಆ ಇಡೀ ಸಮುದಾಯದ ಸಾಂಸ್ಕೃತಿಕ ಭಾಗವಾಗಿ ಬಳಕೆಯಾಗುವಷ್ಟು ಪ್ರಭಾವಯುತವಾಗಿದೆ? ಅಥವಾ ಕೇವಲ ಪ್ರಜ್ಞಾಪೂರ್ವಕ ನೆಲೆಯಲ್ಲಿ ಮಾತ್ರ ನಿಂತು ಬಿಟ್ಟಿದೆಯೇ?

   ಭಾಷೆಯನ್ನು ಸೃಷ್ಟಿ ಮಾಡಿದ ಮೇಲೆ ತಾನೇ ಈ ಪ್ರಶ್ನೆ.

8. ಲಿಂಗಾತೀತವಾದ ಭಾಷೆಯನ್ನು ಸೃಷ್ಟಿಸಲು ಸಾಧ್ಯವಾಗಿದೆಯೇ?

ಸೃಷ್ಟಿ ಪದದ ಬದಲು ಬಳಕೆ ಹೆಚ್ಚು ಸೂಕ್ತ. ಭಾಷೆಯನ್ನು 'ಜೆಂಡರನೊಬ್ಬಾತ' ಮಾಡಿ ಬಳಸುವ ಬಗ್ಗೆ ಕೆಲವು ಸೂಚನೆಗಳನ್ನು ಸ್ತ್ರೀವಾದಿಗಳು ನೀಡುತ್ತಾರೆ. ಪ್ರಶ್ನೆ ಇರುವುದು ಜೆಂಡರನ್ನು ಸೂಚಿಸಬೇಕಾದ ಅಗತ್ಯವಿದ್ದಾಗ ಏನು ಮಾಡುವುದು? ಎನ್ನುವುದು. ಭಾರತದ ಜನಸಂಖ್ಯೆ 125ಕೋಟಿಗೆ ಮಿಕ್ಕಿದೆ ಎಂಬುದಷ್ಟೆ ಸಾಕೆ? ಅದರಲ್ಲಿ ಹೆಣ್ಣು-ಗಂಡಿನ ಪ್ರಮಾಣ ಎಷ್ಟು ಎನ್ನುವುದು ಬೇಡವೇ? ಅಂದರೆ ಭಾಷೆಗೆ ಲಿಂಗ/ ಲಿಂಗತ್ವ ಬೇಕು. ಲಿಂಗತ್ವ ತಾರತಮ್ಯ ಬೇಡ.

9. ಗಂಡು-ಹೆಣ್ಣಿನ ಅಲೋಚನೆ ಲೋಕಗ್ರಹಿಕೆ ಮತ್ತು ತಾತ್ವಿಕತೆ ಭಿನ್ನವೇ? ಹೌದಾದರೆ ಅದಕ್ಕೆ ಕಾರಣಗಳೇನು?

ವ್ಯಕ್ತಿಯ ಅಲೋಚನೆಯನ್ನು ಪ್ರಭಾವಿಸುವ ಇನ್ನು ಹಲವು ಸಂಗತಿಗಳಿದ್ದು, ಅವು ಗಂಡು-ಹೆಣ್ಣು ಎಂಬ ಏಕಾಕಾರದ ಗ್ರಹಿಕೆಗಳನ್ನು ಒಡೆಯುತ್ತದೆ. ಅರ್ಥಾತ ಹೆಚ್ಚಿನ ಲೋಕಗ್ರಹಿಕೆ ಇದ್ದಿರಬಹುದಾದರೂ ಅದು ಹೆಣ್ಣು ಲೋಕ ಗ್ರಹಿಕೆಗಳು ಆಗಿರುತ್ತದೆ.

10. ಸಾಮಾಜಿಕ ಸಂದರ್ಭದಲ್ಲಿ ಸ್ತ್ರೀವಾಚಕಗಳ ಬಳಕೆ ವೈಯಕ್ತಿಕ ನೆಲೆ ಹಾಗೂ ಸಮುದಾಯದ ನೆಲೆಗಳೆರಡರಲ್ಲಿಯೂ ಅಸ್ತಿತ್ವ ಪಡೆದಿವೆಯೇ? ಪಡೆಯುತ್ತಿವೆಯೇ/ಇಲ್ಲವೇ?

–

11. ಎಲ್ಲಾ ವಯೋಮಾನದ ಸ್ತ್ರೀ ಪುರುಷರಿಬ್ಬರಲ್ಲೂ ಸ್ತ್ರೀವಾಚಕಗಳು ಹಾಗೂ ಪುರುಷ ವಾಚಕಗಳನ್ನು ಪ್ರಜ್ಞಾಪೂರ್ವಕವಾಗಿ ಬಳಸುವ ಪರಿಪಾಠ ಶುರುವಾಗಿದೆಯೇ? ಅಥವಾ ಇಲ್ಲವೇ?

–

12. ಪುರುಷ ವಾಚಕಗಳು/ಸ್ತ್ರೀವಾಚಕಗಳು ಎಂದು ಗೆರೆ ಎಳೆದು ಬಳಸುವುದಕ್ಕಿಂತ ಹೊಸ ರೀತಿಯ ಪದಗಳನ್ನು ಸೃಷ್ಟಿಸಿ ಬಳಸುವ ಪರಿಪಾಠ ಇದೆಯೇ?

–

13. ಸ್ತ್ರೀವಾಚಕ ಪದಗಳ ಬಳಕೆಯ ಮಾತಂತಿರಲಿ ಅದರ ಗ್ರಹಿಕೆಯಾದರೂ ಆ ಸಮುದಾಯದ ಜನರೆಲ್ಲರಲ್ಲಿಯು ಮೂಡಿದೆಯೇ?

–

ಭಾಷಾಧ್ಯಯನದ ಬಗ್ಗೆ ನಾನು ಕೆಲಸ ಮಾಡಿಲ್ಲ. ಕನ್ನಡದ ಸಂದರ್ಭದಲ್ಲಿ ಭಾಷೆಯ ಲಿಂಗತ್ವ ಅಧ್ಯಯನಗಳು ಇನ್ನು ನಡೆದಿಲ್ಲವಾದ್ದರಿಂದ ನೀವು ಕೇಳಿರುವ ವಸ್ತುಸ್ಥಿತಿ ಆಧಾರಿತ ಪ್ರಶ್ನೆಗಳಿಗೆ ಉತ್ತರಿಸಲು ನನಗೆ ಸಾಧ್ಯವಿಲ್ಲ. ಹಾಗಾಗಿ ಈ ಪ್ರಶ್ನಾವಳಿ ತಾತ್ವಿಕ ಪ್ರಶ್ನೆಗಳಿಗೆ ಮಾತ್ರ ನನ್ನ ಅಭಿಪ್ರಾಯ ನೀಡುತ್ತೇನೆ.

**3. ವೈಯಕಕ್ತಿಕ ಮಾಹಿತಿ**

ಅ. ಹೆಸರು : ಡಾ. ಶಿವಾನಂದ .ಎಸ್ ವಿರಕ್ತ ಮಠ

ಆ. ವಿಳಾಸ : ಮಹಿಳಾ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ.

ಇ. ಜಾತಿ : –

ಈ. ವೃತ್ತಿ : ಪ್ರಾಧ್ಯಾಪಕರು.

2. ಭಾಷೆಯಲ್ಲಿ ಗಂಡು ಹೆಣ್ಣು ಎಂಬ ಎರಡು ದೃಷ್ಟಿಕೋನಗಳಿವೆಯೇ?

ಭಾಷೆ ಒಂದು ಕಮ್ಯೂನಿಕೇಷನ್, ಹೆಣ್ಣಿಗೆ ಒಂದು ದೃಷ್ಟಿಕೋನ ಗಂಡಿಗೆ ಒಂದು ದೃಷ್ಟಿಕೋನ, ಹೆಣ್ಣು ಮಕ್ಕಳ ಬಾಷೆ ಹೀಗೆ ಬಳಸಬೇಕು, ಯಾವ ನೆಲೆಯಲ್ಲಿ ಬಳಸಬೇಕು, ಅದರ ಪ್ರಯೋಜನ ಏನು ಎಂಬುದು ಅಮೂರ್ತವಾಗಿದೆ. ಹಾಗಾಗಿ ಭಾಷೆ ಬಳಕೆಯ ಬಗ್ಗೆ ಹೀಗೆ ಸಂಭಾಷಣೆ ಮಾಡಬೇಕು, ಹೀಗೆ ಸಂವಾದ ಮಾಡಬೇಕು ಎನ್ನುವ ನೆಲೆಗಳಿವೆ. ಹೆಣ್ಣು ಮಕ್ಕಳು ಮೃದುವಾಗಿ ಮಾತಾಡಬೇಕು, ಗಟ್ಟಿಯಾಗಿ ಮಾತನಾಡಬಾರದು, ಎಂಬ ಆರ್ಡರ್ ರೀತಿಯಲ್ಲಿ ಮಾತನಾಡಬಾರದು. ಕನೆಕ್ಟಿಂಗ್ ಆಗಿ ಮಾತಾಡಬೇಕು ಎನ್ನುವ ದೃಷ್ಟಿಕೋನ ಇದೆ. ಒಂದೇ ಭಾಷೆಯ ಕಮ್ಯೂನಿಕೇಷನ್‌ನಲ್ಲಿ ಯಾರು ಹೇಗೆ ಭಾಷೆಯನ್ನು ಕಮ್ಯುನಿಕೇಟ್ ಮಾಡಬೇಕು ಎನ್ನುವ ಧೋರಣೆ ಕಾಣಿಸುತ್ತದೆ. ಅದನ್ನು ನಿರ್ವಹಿಸಿದವರು ನಾವು ಬಹಳ ಖಚಿತವಾಗಿ ಹೇಳಲಿಕ್ಕೆ ಆಗುವುದಿಲ್ಲ. 'ಲಾಂಗ್ವೇಜ್ ಇಸ್ ಮ್ಯಾನ್ ಮೇಡ್' ಅಂದರೆ ಪೆಟ್ರಿಯಾರ್ಕಿ ಗಂಡು ಕೇಂದ್ರಿತವಾದ ಅಂಡ್ರೋಸಂಟ್ರೇಕ್ ಅಂಡ್ ನ್ಯಾನೂ ಸೆಂಟ್ರಿಕ್ ವಿಭಜನೆ ಮಾಡಿದ್ದೇವೆ. ಹಾಗೆ ಅಂಡ್ರೋಸಂಟ್ರೇಕ್ ಆಗೇನೆ ಅದು ರಚನೆಗೊಂಡ ಹಿನ್ನೆಲೆಯಲ್ಲಿ ಭಾಷೆ ನಿಯೋಗಿಗಳು ಹೀಗೆ ಇವರನ್ನು ಭಾಷೆಗೊಳಿಸಬೇಕು, ಇವರು ಹೀಗೆ ಭಾಷೆ ಬಳಸಬೇಕು ಎನ್ನುವ ಒಂದು ವರ್ಗ ಸ್ಥೂಲವಾಗಿ ಗಂಡಿನ ವರ್ಗ ಹಾಗೂ ಹೆಣ್ಣಿನ ವರ್ಗ ಎನ್ನುವ ಎರಡು ವರ್ಗವನ್ನು ಸ್ಥೂಲವಾಗಿ ವಿಭಜನೆ ಮಾಡಿರುವ ಹಾಗೇ ಕಾಣಿಸುತ್ತದೆ. ಭಾಷೆ ಬಳಕೆಯ ನೆಲೆಗಳಿಂದ ಕಾಣಿಸುತ್ತದೆ. ಹಾಗಾಗಿ ಮಹಿಳೆಯರ ಭಾಷೆಯನ್ನು ಬಳಸುವಾಗ

ವೈಯಕ್ತಿಕ, ಕೌಟುಂಬಿಕ, ಸಾರ್ವತ್ರಿಕ ಸಂದರ್ಭದಲ್ಲಿ ಹೇಗೆ ಬಳಸಬೇಕು? ಹೇಗೆ ಬಳಸಿದರೆ ಅವರಿಗೆ ಸೂಕ್ತ ಎನ್ನುವ ನೆಲೆಗಳಲ್ಲಿ ಭಾಷೆ ಕಲಿಕೆ, ಬಳಕೆ ಅವರ ಆಶಯಗಳು ಕಾಣಿಸುತ್ತದೆ. ಅವಳ ಮಾತಿಗೆ ಡಿಪ್ರೆಸ್ ಆಗುವಂತಹ ಸಂದರ್ಭದಲ್ಲಿ ಮಹಿಳೆ ಮಾತನಾಡುವುದಿಲ್ಲ. ಇಂತಹ ಸಮಯದಲಿ ಮಹಿಳೆಯ ಭಾಷೆ ಶಬ್ದರಹಿತವಾಗುತ್ತದೆ. ತಮ್ಮ ಮಾತಿಗೆ ಎಲ್ಲಿ ಬೆಲೆ ಇದೆ ಅಲ್ಲಿ ಮಾತ್ರ ಬಳಸುತ್ತಾಳೆ. ಇಲ್ಲದಿದ್ದರೆ ಮೌನ ವಹಿಸುತ್ತಾಳೆ. ಡಿಸೆಜೆನ್ ಮೇಕಿಂಗ್ ವಲಯದ ಬಳಕೆಯ ಸ್ವರೂಪವನ್ನು ಅವಳಿಂದ ಕಿತ್ತುಕೊಳ್ಳುವುದು. ಆದುದ್ದರಿಂದ ಅವಳು ಮೌನವಹಿಸುತ್ತಾಳೆ.

3. ಭಾಷೆಯನ್ನು ಗಂಡುಭಾಷೆ ಮತ್ತು ಹೆಣ್ಣುಭಾಷೆ ಎಂದು ವಿಭಾಗಿಸಿ ನೋಡುವ ಕ್ರಮ ಸೂಕ್ತವೆ?

ಇದು ಅಧ್ಯಯನ ಮಾಡುವುದಕ್ಕೆ ಮಾತ್ರ ಸೂಕ್ತ ಹೊರತು, ಭಾಷೆಯನ್ನು ವಿಭಾಗಿಸುವುದಕ್ಕೆ ಆಗಲ್ಲ. ಭಾಷೆಯ ಒಳಗಡೆ ಭಾಷೆಯನ್ನು ವಿಭಾಗಿಸುವುದಕ್ಕೆ ಆಗಲಿ, ಭಾಷೆಯ ಒಳಗಡೆ ಗಂಡಿನ ಭಾಷೆಯ ಸ್ವರೂಪ ಹೀಗೆ ಇದೆ ಎಂದು ನೋಡಬಹುದೇ ಹೊರತು, ಇದನ್ನು ಬೇರೆ ಬೇರೆ ಎಂದು ನೊಡುವುದಕ್ಕೆ ಆಗುವುದಿಲ್ಲ. ಆದುದರಿಂದ ವಿಭಾಗಿಸುವ ಕ್ರಮ ಸೂಕ್ತ ಅಲ್ಲ.

ಗಂಡಿನ ಭಾಷೆಯ ಸ್ವರೂಪ ಬೇರೆ ಇದೆ, ಹೆಣ್ಣಿನ ಭಾಷೆಯ ಸ್ವರೂಪ ಬೇರೆ ಇದೆ. ಅಧ್ಯಯನದಿಂದ ಇದರ ಬೇರೆ ಬೇರೆ ಸಂಗತಿಗಳು ಗೊತ್ತಾಗುತ್ತದೆ. ಕಂಟೆಂಟ್ ಆಧಾರದ ಮೇಲೆ ಭಾಷೆ ವಿಭಾಗೀಕರಣ ಇವು ಒಂದರೊಂದಿಗೆ ಒಂದು ಸೇರಿಕೊಳ್ಳುತ್ತವೆ. ಅದರ ನಿಯೋಗಗಳಲ್ಲಿ ವ್ಯತ್ಯಾಸ ಇದೆ. ಅವರು ಬೇರೆ ಭಾಷೆಯನ್ನು ಬಳಸಿಕೊಳ್ಳುವ ನೆಲೆಗಳಲ್ಲಿ ಈ ರೀತಿ ಇರುತ್ತದೆ. ಗಂಡಿನ ಭಾಷೆ ಜೊತೆಗೆ ಮಾತನಾಡಬೇಕಾದ ಸಂದರ್ಭದಲ್ಲಿ ಹೀಗೆ ಇರುತ್ತದೆ. ಹಾಗಾಗಿ ಅವರು ಹೆಚ್ಚು ಕಡಿಮೆ ಭಾಷೆ ಎನ್ನುವುದೇ ಪುರುಷ ಷಾಹಿಯಾಗಿರುವುದರಿಂದ ಪುರುಷವರ್ಗದ ಹಿತಾಶಕ್ತಿಗಳಿಗೆ ಅನುಗುಣವಾಗಿ ಭಾಷೆ ರಚಿಸಲ್ಪಟ್ಟಿರುವುದುರಿಂದ ಆ ರಚನೆ ಯಾವ ಉದ್ದೇಶಕ್ಕೆ ರಚನೆಯಾಗಿದೇ ಅದೇ ರೀತಿಯಲ್ಲಿ ಬಳಕೆಯಾಗುತ್ತಿದೆ.

4. ಭಾಷೆಯ ಸಂರಚಿತ ರೂಪವು ಗಂಡು/ಹೆಣ್ಣು ಎಂಬ ತಾರತಮ್ಯದಿಂದ ಕೂಡಿದೆಯೇ ಅಥವಾ ಸಮುದಾಯದ ಸುಪ್ತ ಚೇತನಗಳ ಸಂಜ್ಞೆಗಳಾಗಿ ಭಾಷೆಯಲ್ಲಿ ಅಂತಸ್ಥಗೊಂಡು ವಿಭಜಿತ ನೆಲೆಗೆ ಬಂದು ನಿಂತಿವೆಯೇ?

ರಚನೆ ಒಳಗಡೆ ಗಂಡು-ಗೆಣ್ಣು ಎಂಬ ತಾರತಮ್ಯ ಕೂಡಿದೆ. ರಚನೆಯಲ್ಲಿ ಇರುವುದರಿಂದ ಬಳಕೆಯಲ್ಲಿ ಬರುತ್ತದೆ. ಭಾಷೆ ರಚನೆ ಮಾಡುವವರು ಭಾಷೆ ಬಳಕೆ ಹೆಚ್ಚು ಇರುವುದು ಸಾರ್ವಜನಿಕ ವಲಯದಲ್ಲಿ ವಿಸ್ತಾರವಾಗುತ್ತಿದೆ. ಏಕೆಂದರೆ ಪುರುಷರು ಸಾರ್ವಜನಿಕ ವಲಯದಲ್ಲಿ ಇರುವುದರಿಂದ ತಮಗೆ ಬೇಕಾದ ಭಾಷೆಯನ್ನು ಅವರೆ ಕಟ್ಟುತ್ತಿದ್ದಾರೆ. ಹಾಗೂ ಅವರೆ ಬಳಸುತ್ತಿದ್ದಾರೆ. ಆದುದ್ದರಿಂದ ಸೊಸೈಟಿಯಲ್ಲಿ ಗಂಡು ಹೆಣ್ಣಿನ ಭೇದಭಾವ ಇರುವುದರಿಂದ ತಾರತಮ್ಯ ಧೋರಣೆ ವ್ಯವಸ್ಥೆ ಇರುವುದರಿಂದ ಅದು ನೇರವಾಗಿ ಭಾಷೆಯಲ್ಲಿ ಇಂಪ್ಲಿಕ್ಟ್ ಆಗುತ್ತದೆ. ಸಮಾಜದಲ್ಲಿನೆ ಗಂಡು ಹೆಣ್ಣು ಭಿನ್ನ ಇರುವುದರಿಂದ ಸಾಮಾಜಿಕ ವಲಯ ಇದೆ. ಅಧಿಕಾರ ಸಂಬಂಧವಿದೆ. ಆ ಆಧಿಕಾರ ಸಂಬಂದಿತವಾದ ಸಂಗತಿಗಳು ಅದರ ರಿಪ್ಲೆಕ್ಟ್ ಆಗಿರುವ ಭಾಷೆ ಭಾಷೆಯ ರಚನೆಯಲ್ಲಿ ಕೂಡ ಈ ತಾರತಮ್ಯಗಳು ನುಸುಳುತ್ತವೆ. ಸಾರ್ವಜನಿಕ ವಲಯದಲ್ಲಿ ಮಹಿಳೆಯರನ್ನು ಹೇಗೆ ಬಳಕೆ ಮಾಡಬೇಕು ಎಂಬುದನ್ನು ತಿರ್ಮಾನಿಸುವವರು ಪುರುಷರು. ಅಥವಾ ಅಧಿಕಾರ (ನರ್ಸ್, ಅಂಗನವಾಡಿ ಟೀಚರ್) ಇರುವವರು ಹೇಗೆ ಬೇರೆ ಬೇರೆ ವೃತ್ತಿ ಕಾರ್ಯವಿಧಾನಗಳು ನಿರ್ಧರಿಸುತ್ತಾರೆ. ಹಾಗಾಗಿ ಅವರ ಅನುಗುಣವಾಗಿ ಅವರ ಅಧೀನವಲಯದಲ್ಲಿ ಮತ್ತು ಪುರುಷರು ಪ್ರಧಾನ ವಲಯದಲ್ಲಿ ಇವರು ಏನ್ನುವ ಧೋರಣೆ ಅದಕ್ಕೆ ಅನುಗುಣವಾದ ರಿಪ್ಲೆಕ್ಟ್ ಆಗಿರುವ ಭಾಷೆ ಸಂವಹನಕ್ಕಾಗಿ ಬಳಕೆಯಲ್ಲಿರುವ ಭಾಷೆ ಕೂಡ ಆ ರಚನೆಯಲ್ಲಿ ಆಗಿದುದ್ದು ಬಳಕೆ ನೆಲೆಯಲ್ಲಿ ಸಂಬಂಧಿಸಿದೆ. ಸಂರಚನೆಯಲ್ಲಿ ಕೂಡ ಇರುತ್ತದೆ. ಸಂರಚನೆಯ ಸಾಮಾಜಿಕ ವಲಯ (ಜಂಡರ್) ಆಗಿರುವುದರಿಂದ ಅಲ್ಲಿ ಕೂಡ ರಿಪ್ಲೆಕ್ಟ್ ಆಗುತ್ತದೆ. ಹಾಗಾಗಿ ಅದನ್ನು ಸೂಕ್ತಚೇತನ ಎಂದೂ ಹೇಳಬಹುದು. ಅಥವಾ ಲಿಂಗರಾಜಕಾರಣ ಎಂದು ಹೇಳಬಹುದು ಪ್ರಜ್ಞಾಪೂರಕವಾಗಿ ಇದೆ.

5. ಭಾಷೆಯ ಶುದ್ಧತೆಯನ್ನು ಉಳಿಸಿಕೊಂಡು ಬರುವ ಗುಣ ಸ್ತ್ರೀಯರ ಭಾಷೆಯದು. ಇದು ಸರೀನಾ?

ಭಾಷೆಯ ಶುದ್ಧತೆ ಅಶುದ್ಧತೆ ಎನ್ನುವುದಕ್ಕಿಂತ ಭಾಷಾ ನಿಯೋಗವನ್ನು ಹೇಗೆ ಬಳಸಬೇಕು, ಆ ಭಾಷೆಯನ್ನು ಸಂವಹನಕ್ಕಾಗಿ ಹೇಗೆ ಬಳಸಬೇಕು ಎನ್ನುವ ನೆಲೆಯಿಂದ ಭಾಷೆಯನ್ನು ಸೃಷ್ಟಿಸುವವರಿಗೆ ಭಾಷೆಯನ್ನು ಹೀಗೆ ಬಳಸಬೇಕು ಎಂದು ಗೊತ್ತಾಗುತ್ತದೆ. ಸೃಷ್ಟಿಸಿದ ಭಾಷೆಯನ್ನು ಬೇರೆಯವರು ಬಳಸಬೇಕಾದ (ಮಹಿಳೆಯರ) ನಗರಗಳಲ್ಲಿ ಭಾಷೆಯನ್ನು ಲಾಭ, ಸುಳ್ಳು ಉದ್ದಿಮೆಗಳಿಗಾಗಿ ಬಳಸುತ್ತಾರೆ. ಆದರೆ ಭಾಷೆಯನ್ನು ಸಂವಹನಕ್ಕಾಗಿ

ಬಳಸುವವರು ಹಳ್ಳಿಗಳಲ್ಲಿ ಮಾತ್ರ. ಯಾವ ಹೆಣ್ಣು ಭಾಷೆಯನ್ನು ಸಂವಹನಕ್ಕಾಗಿ ಬಳಸುತ್ತಾಳೊ ಆಗ ಮಾತ್ರ ಭಾಷೆಯ ಸಹಜವಾಗಿ ಶುದ್ಧತೆ ಅಥವಾ ಪ್ರಾಮಾಣಿಕ ಅಥವಾ ಟ್ರಾನ್ಸ್‌ಪರೆಂಟ್ ಆಗಿ ಇರುತ್ತದೆ. ಮನಸ್ಸಿನಲ್ಲಿ ಕಲ್ಮಶ ಇಲ್ಲದಿರುವಾಗ ಸಂವಹನ ನಡೆಸಿದರೆ ಅದು ಶುದ್ಧತೆ ಲಾಭ ಪಡೆಯುವ ಸಂದರ್ಭದಲ್ಲಿ ಸಂವಹನ ನಡೆಸಿದರೆ ಅಲ್ಲಿ ಬೇರೆ ಯೋಚನೆಗಳು ಕೌಶಲ್ಯಗಳನ್ನು ಬಳಸಬೇಕಾಗುತ್ತದೆ. ಇದು ದುಡಿಯುವ ಮಹಿಳೆಯರಲ್ಲಿ ಅಸಂಘಟಿತ ವಲಯದಲ್ಲಿ ಭಾಷೆ ಬಳಕೆ ಟ್ರಾನ್ಸ್‌ಪರೆಂಟ್ ಆಗಿರುವುದರಿಂದ ಭಾಷೆ ಬಳಕೆಯಾಗುತ್ತದೆ. ಇಲ್ಲಿ ಸಂವಹನ ಬಹಳ ಮುಖ್ಯ.

6. ಮಹಿಳೆಯರದೇ ಹೊಸ ಭಾಷೆ ಸೃಷ್ಟಿಸಲು ಸಾಧ್ಯವಾಗಿದೆಯೇ?

ಇಲ್ಲ. ಅಂದರೆ ಅವರದೇ ಒಂದು ಸಮೂಹ/ಗುಂಪು ಇದ್ದಾಗ ಈ ತರಹದ ಸಾಧ್ಯತೆ ಇರುವುದಕ್ಕೆ ಸಾಧ್ಯ. ಅವರದೇ ಆದ ಗುಂಪು ಉಂಟಾಗುವುದಕ್ಕೆ ಸಾಮಾಜಿಕ ಸ್ಥಳವಕಾಶ ಎಲ್ಲಿದೆ? ಆ ಸ್ಥಳಾವಕಾಶಕ್ಕೆ ಗಂಡಸರು ಬಿಡುವುದಿಲ್ಲ. ಆದುದ್ದರಿಂದ ಬೆಳಗಿನ ಜಾವ, ನೀರು ತುಂಬುವ ಸಂದರ್ಭದಲ್ಲಿ ಹೆಣ್ಣು ಮಕ್ಕಳು ಜಾಸ್ತಿ ಮಾತನಾಡುತ್ತಾರೆ ಅದಕ್ಕೆ ಕಾರಣವೇ ಇದು.

ಹೆಣ್ಣು ಮಕ್ಕಳು ಸ್ವಂತಂತ್ರವಾಗಿ ಒಂದು ಕಡೆ ಇರಲು ಸಾಧ್ಯವಾಗದೆ ಇರುವುದರಿಂದ ಅವರದೇ ಆದ ಭಾಷೆ ಹುಟ್ಟಲು ಸಾಧ್ಯವಾಗಿಲ್ಲ. ಇನ್ನೊಂದು ಸಾಧ್ಯತೆ ಅಂದರೆ ಹೆಣ್ಣು ಮಕ್ಕಳೆ ಸೇರಿ ಸಂವಹನ ನಡೆಸುವಾಗ ಅಲ್ಲಿ ಕೆಲವು ಪದರು(Layer) ಸಿಗುತ್ತದೆ. ಅಲ್ಲಿ ಅವರದೇ ಆದ ಸಂವಹನ ಕೌಶಲ್ಯಗಳು ಸ್ವರೂಪಗಳು ಆಯಾ ಮಟ್ಟದಲ್ಲಿ ಇರುವುದಕ್ಕೆ ಸಾಧ್ಯ. ಸ್ತ್ರೀಯರದೇ ಒಂದು ಭಾಷಾ ಬಳಕೆ ನೆಲೆಗಳು ಇರುವುದಕ್ಕೆ ಸಾಧ್ಯ ಇಂತಹ ಸಂವಹನಗಳು ಸ್ತ್ರೀಯರು ಆತ್ಮಚರಿತ್ರೆ ಬರೆಯುವಾಗ ತನ್ನ ಬಗ್ಗೆ ತಾನು ಹೇಳಿಕೊಳ್ಳುವಾಗ ಈ ನೆಲೆಗಳು ಸಿಗುವ ಸಾಧ್ಯತೆ ಇದೆ. (ಹಾಸ್ಟೆಲ್, ಗಾರ್ಮೆಂಟ್‌ಗಳಲ್ಲಿ) ಕಾವ್ಯ, ಕಥನ, ನಾಟಕ, ಸಂವಾದಗಳಲ್ಲಿ ಹೆಣ್ಣಿನ ಭಾಷೆ ಅನುಭವ ಅಸ್ತಿತ್ವವನ್ನು ರಿಫ್ಲೆಕ್ಟ್ ಮಾಡುವ ಭಾಷಾ ಬಳಕೆಯನ್ನು ಈ ತರಹದ ದೃಶ್ಯಗಳಲ್ಲಿ ಕಂಟೆಂಟ್‌ಗಳಲ್ಲಿ ಅದು ಪ್ರಜ್ಞಾಪೂರ್ವಕವಾಗಿ ರಚನೆ ಮಾಡುತ್ತಿದ್ದಾರೆ. ಸ್ತ್ರೀವಾದಿ ಭಾಷೆ ಎಂದು ಸಹ ಕರೆಯುತ್ತಾರೆ. ವೈದೇಹಿ ಬರಹಗಳಲ್ಲಿ, ಕಥನದಲ್ಲಿ, ನಾಟಕದಲ್ಲಿ, ಸಾರಾ ಅಬೂಬಕ್ಕರ್ ಬರಹಗಳಲ್ಲಿ ಹಾಗೂ 70ರ ದಶಕದ ನಂತರದ ಸ್ತ್ರೀಯರ ಬರಹಗಳಲ್ಲಿ ಪ್ರಜ್ಞಾಪೂರಕವಾದ ಹೆಣ್ಣುಮಕ್ಕಳ ಭಾಷೆ ಸಿಗುತ್ತದೆ.

7. ಮಹಿಳೆಯರದೇ ಪ್ರತ್ಯೇಕ ಭಾಷೆ ಸೃಷ್ಟಿಯಾದ ಮೇಲೆ ಅದು ಅಪ್ರಜ್ಞಾಪೂರ್ವಕವಾಗಿ ಆ ಇಡೀ ಸಮುದಾಯದ ಸಾಂಸ್ಕೃತಿಕ ಭಾಗವಾಗಿ ಬಳಕೆಯಾಗುವಷ್ಟು ಪ್ರಭಾವಯುತವಾಗಿದೆ? ಅಥವಾ ಕೇವಲ ಪ್ರಜ್ಞಾಪೂರ್ವಕ ನೆಲೆಯಲ್ಲಿ ಮಾತ್ರ ನಿಂತು ಬಿಟ್ಟಿದೆಯೇ?

ಖಂಡಿತ ಅದು ಪ್ರಜ್ಞಾಪೂರ್ವಕವಾದ ನೆಲೆಯಲ್ಲಿ ನಿಂತು ಬಿಟ್ಟಿದೆ. ಸಮೂಹ ಅಥವಾ ಗುಂಪು ಅದನ್ನು ಅಭಿವೃದ್ಧಿ ಮಾಡಲಿಕ್ಕೆ ಹೋಗಿಲ್ಲ. ಹೊಗಬೇಕೆಂದರೆ ಅವರಿಗೆ ಎಲ್ಲಾ ಬಗೆಯ ಸ್ವಾತಂತ್ರ್ಯ ಸಿಕ್ಕಾಗ ಮಾತ್ರ ಅದು ಬಳಸಲಿಕ್ಕೆ ಸಾಧ್ಯವಾಗುತ್ತದೆ. ಅದನ್ನು ಮತ್ತೆ ಮತ್ತೆ ಕೊಂಕುಮಾಡಿ ಪೆಟ್ರಿಯಾರ್ಕಿಗೆನೆ ಸೇಟ್ ಮಾಡುವುದಕ್ಕೆ ಪ್ರಯತ್ನ ಮಾಡುವುದರಿಂದ ಮತ್ತೆ ಮತ್ತೆ ಸ್ಥಿರ ಮಾದರಿಗೆ ಹೆಣ್ಣು ಮಕ್ಕಳನ್ನು ಕಟ್ಟಿ ಹಾಕೋಕೆ ಸಮಾಜ ಪ್ರಯತ್ನ ಮಾಡುವುದರಿಂದ ಪೆಟ್ರಿಯಾರ್ಕಿ ಆಚೆಗೆ ಹೆಣ್ಣು ಮಕ್ಕಳನ್ನು ಬಿಡೊಲ್ಲ. ಹೀಗೆ ಬಿಡದೇ ಇರುವುದರಿಂದ ಪೆಟ್ರಿಯಾರ್ಕಿ ಲಿಂಗ ಮುಕ್ತವಾದ ಸಮಾಜ ರಚನೆಗೆ ಬೆಂಬಲ ಮಾಡಿದರೆ ಸರಿಹೋಗುತ್ತದೆ. ಪ್ರಜ್ಞಾಪೂರ್ವಕ ವಲಯದಲ್ಲಿ ಈ ಭಾಷೆ ಬೆಳವಣಿಗೆಯಾಗಿದೆ.

8. ಲಿಂಗಾತೀತವಾದ ಭಾಷೆಯನ್ನು ಸೃಷ್ಟಿಸಲು ಸಾಧ್ಯವಾಗಿದೆಯೇ?

ಲಿಂಗಾತೀತವಾದ ಭಾಷೆ ಬಳಕೆ ಸೃಷ್ಟಿಸಲು ಸಾಧ್ಯವಾಗಿಲ್ಲ. ಸಾಧ್ಯವಾಗಬೇಕೆನ್ನುವುದು ಆಶಯ. ಆದರೆ ಅದು ಆಗಿಲ್ಲ ಎನ್ನುವುದು ವಾಸ್ತವ.

9. ಗಂಡು–ಹೆಣ್ಣಿನ ಅಲೋಚನೆ ಲೋಕಗ್ರಹಿಕೆ ಮತ್ತು ತಾತ್ವಿಕತೆ ಭಿನ್ನವೆ? ಹೌದಾದರೆ ಅದಕ್ಕೆ ಕಾರಣಗಳೇನು?

ಪುರುಷಲೋಕ ಗ್ರಹಿಕೆ ಇದೆ. ಸ್ತ್ರೀಲೋಕ ಗ್ರಹಿಕೆ ಇದೆ. ಆದರೆ ಅದು ಅಭಿವ್ಯಕ್ತಿ ಆಗಿಲ್ಲ. ಪುರುಷಲೋಕ ಗ್ರಹಿಕೆಯನ್ನೇ ಸ್ತ್ರೀಯರ ಮೇಲೆ ಹೇರಲಾಗುತ್ತದೆ. ಪುರುಷರ ಆಲೋಚನ ಕ್ರಮ, ಗ್ರಹಿಕೆ, ಅಭಿವ್ಯಕ್ತಿ ಎಲ್ಲಾವನ್ನು ಮಹಿಳೆಯ ಮೇಲೆ ಹೇರಲಾಗುತ್ತದೆ. ಹೆಣ್ಣಿನ ಲೋಕಗ್ರಹಿಕೆಗೆ ಸಾಮಾಜಿಕ ಚಲನೆ ಇಲ್ಲ. ಅಭಿವ್ಯಕ್ತಿ ಕೂಡ ಇಲ್ಲ. ಸ್ತ್ರೀಲೋಕ ಗ್ರಹಿಕೆ ಮತ್ತು ತಾಂತ್ರಿಕತೆ ವರ್ತಮಾನಕ್ಕೆ ಸಂಬಂಧಿಸಿದ ಪುರುಷ ಲೋಕಗ್ರಹಿಕೆಗೆ ಭೂತ ಮತ್ತು ಭವಿಷ್ಯತ್ತಿಗೆ ಸಂಬಂಧಿಸಿದ ಹೆಣ್ಣು, ವರ್ತಮಾನದಲ್ಲಿ ಬದುಕುವ ಹೆಣ್ಣು ವರ್ತಮಾನವನ್ನೇ ಆಲೋಚನೆ ಮಾಡಬೇಕು. ಪುರುಷಲೋಕಕ್ಕೆ ವರ್ತಮಾನದಿಂದ ಭವಿಷ್ಯತ್ತಿಗೆ ಜಿಗಿಯುವ ವ್ಯವಸ್ಥೆ ಇದೆ.

10. ಸಾಮಾಜಿಕ ಸಂದರ್ಭದಲ್ಲಿ ಸ್ತ್ರೀವಾಚಕಗಳ ಬಳಕೆ ವೈಯಕ್ತಿಕ ನೆಲೆ ಹಾಗೂ ಸಮುದಾಯದ ನೆಲೆಗಳೆರಡರಲ್ಲಿಯು ಅಸ್ತಿತ್ವ ಪಡೆದಿವೆಯೇ? ಪಡೆಯುತ್ತಿವೆಯೇ/ಇಲ್ಲವೇ?

ಶ್ರಮದ ವಲಯದಲ್ಲಿ ಇದೆ. ಆದರೆ ಸ್ತ್ರೀವಾಚಕಗಳಲ್ಲಿ ಪರಿವರ್ತಿಸುತ್ತವೆ. ಆ್ಯಂಡ್ರೋಸೆಂಟ್ರಿಕ್ ಪ್ರಕಾರ ಸ್ತ್ರೀಯರು ಏಕತನತೆಯ ಕೆಲಸವನ್ನು ಮಾಡುತ್ತಾರೆ. ಚೌಕಟ್ಟನ್ನು ಪುರುಷ ಸಿದ್ಧಪಡಿಸುವುದು, ಅನುಸರಣೆಯನ್ನು ಮಹಿಳೆ ಮಾಡುತ್ತಾಳೆ. ಲಾಭದ ಸಂಗತಿಗಳಲ್ಲಿ ಪುರುಷವಾಚಕ ಮುಂದುವರೆಯುತ್ತದೆ. ಏಕಾತನತೆ ಕೆಲಸ ಬಂದಾಗ ಮಹಿಳೆಯತ್ತ ತಿರುಗಿಸುತ್ತದೆ. ಮುಂದೆ ಬಂದಂತೆಲ್ಲಾ ಬದಲಾವಣೆಯಾಗುತ್ತದೆ. ಸಣ್ಣ ಪುಟ್ಟ ಕೆಲಸಗಳಲ್ಲಿ ಪುರುಷ ವಾಚಕಗಳೆಲ್ಲವು ಸ್ತ್ರೀ ವಾಚಕಗಳಾಗಿ ಬದಲಾವಣೇ ಆಗುತ್ತದೆ(ಲಾಭ ಬಂದಾಗ ಮಾತ್ರ). ನಿರ್ಧಾರ ಮಾಡುವವರು ಪುರುಷರಾಗಿದ್ದರೆ, ಅವುಗಳಿಗೆ ಸಹಾಯಕವಾಗಿ ಸ್ತ್ರೀಯರು ಇರುತ್ತಾರೆ. ಉದಾ:- ಹೋಟೇಲ್‌ಗಳಲ್ಲಿ ಮ್ಯಾನೇಜರ್ ಮಾತ್ರ ಪುರುಷರು, ಮಹಿಳೆಯರು ಸ್ವಚ್ಚತೆ ಕೆಲಸ, ಅಡುಗೆ ಮಾಡುವವರು, ಸಹಾಯಕರಾಗಿರುತ್ತಾರೆ. ಪುರುಷವಾಚಕಗಳು ಸ್ತ್ರೀವಾಚಕಗಳಾಗಿ ಬದಲಾವಣೆಯಾದಾಗ ಯಾರಿಗೆ ಲಾಭವಾಗುತ್ತದೆ ಎಂಬುದು ತಿಳಿಯುತ್ತದೆ.

11. ಎಲ್ಲಾ ವಯೋಮಾನದ ಸ್ತ್ರೀ ಪುರುಷರಿಬ್ಬರಲ್ಲೂ ಸ್ತ್ರೀವಾಚಕಗಳು ಹಾಗೂ ಪುರುಷ ವಾಚಕಗಳನ್ನು ಪ್ರಜ್ಞಾಪೂರ್ವಕವಾಗಿ ಬಳಸುವ ಪರಿಪಾಠ ಶುರುವಾಗಿದೆಯೇ? ಅಥವಾ ಇಲ್ಲವೇ?

    ಪ್ರಜ್ಞಾಪೂರ್ವಕವಾಗಿ ಇದೆ. ಅಪ್ರಜ್ಞಾ ಪೂರ್ವಕವಾಗಿ ಉಳಿಸುವ ಸಂದರ್ಭ ಬರುವುದಿಲ್ಲ.

12. ಪುರುಷ ವಾಚಕಗಳು/ಸ್ತ್ರೀವಾಚಕಗಳು ಎಂದು ಗೆರೆ ಎಳೆದು ಬಳಸುವುದಕ್ಕಿಂತ ಹೊಸ ರೀತಿಯ ಪದಗಳನ್ನು ಸೃಷ್ಟಿಸಿ ಬಳಸುವ ಪರಿಪಾಠ ಇದೆಯೇ?

    ಯಾವುದಕ್ಕೆ ಸಾಮಾಜಿಕ ಚಹರೆ ಇದೆ ಅದು ಉಳಿದುಕೊಳ್ಳುತ್ತದೆ. ಸ್ತ್ರೀವಾಚಕಗಳು ಮುಕ್ತ ಬಳಕೆ ಇದ್ದರೂ ಪುರುಷರು ಅದನ್ನು ಬಳಸುತ್ತಾರೆ. ಲಾಭ ಬಂದಾಗ ಪುರುಷರು ಇರುತ್ತಾರೆ. ನಷ್ಟಬಂದಾಗ ಸ್ತ್ರೀಯರು ಇರುತ್ತಾರೆ. ಅಡುಗೆ ಎಂಬ ಶಬ್ದ ಬಂದಾಗ ಮಹಿಳೆ ಬರುತ್ತಾಳೆ. ಮ್ಯಾನೆಜರ್ ಎಂಬ ಶಬ್ದ ಬಂದಾಗ ಪುರುಷ ಗೊಚರವಾಗುತ್ತಾನೆ. ಹೆಸರು ಮಾತ್ರ ಸಾಮಾನ್ಯ ಲಿಂಗ ಇರುತ್ತದೆ. ಅದರಲ್ಲಿ ಕಾಣಿಸುವುದು ಮಾತ್ರ ಪುರುಷವಾಚಕ. ಸ್ತ್ರೀವಾಚಿ ಇರುವುದಿಲ್ಲ.

13. ಸ್ತ್ರೀವಾಚಕ ಪದಗಳ ಬಳಕೆಯ ಮಾತಂತಿರಲಿ ಅದರ ಗ್ರಹಿಕೆಯಾದರೂ ಸಮುದಾಯದ ಜನರೆಲ್ಲರಲ್ಲಿಯು ಮೂಡಿದೆಯೇ?

ಇದು ಸವಾಲಿನ ಪ್ರಶ್ನೆ, ಜಾಗೃತಿ ಮೂಡಿಸಬೇಕು. ಸ್ತ್ರೀ ವಾಚಕಗಳನ್ನು ಸಮುದಾಯಗಳಲ್ಲಿ ಮೂಡಿಸುವುದು ನಮ್ಮ ಆಶಯ, ಆದರೆ ಅದು ನಿಜವಾಗಿ ನಡೆಯುತ್ತಿದೆಯಾ? ಸ್ವಲ್ಪ ಮಟ್ಟಿಗೆ ಈ ಬಗ್ಗೆ ಮಾಧ್ಯಮಗಳು ಸ್ವಲ್ಪ ಪ್ರಮಾಣದಲ್ಲಿ ಈ ಕೆಲಸ ಮಾಡುತ್ತಿವೆ. ಅದರಿಂದಾಗಿ ಜಾಗೃತಿ ಮೂಡುತ್ತಿದೆ. ಸ್ತ್ರೀ ವಾಚಕಗಳು ಸ್ತ್ರೀಯರ ಅಸ್ತಿತ್ವ ಪ್ರಶ್ನೆಗಳು ಎನ್ನುವ ಯೋಚನೆ ಅವರಲ್ಲಿ ಮೂಡಿಸುತ್ತಿದೆ. ಈ ತರಹದ ಅನೇಕ ಸಂಗತಿಗಳು ಕಂಡುಬರುತ್ತಿವೆ. ಉದಾ:- ಮದುವೆಯ ವಿಷಯ, ಉದ್ಯೋಗ ವಿಷಯಗಳು ಬಂದಾಗ ಉದ್ಯೋಗ ಖಾತ್ರಿಯೋಜನೆಯಲ್ಲಿ, ಅನ್ನಭಾಗ್ಯಯೋಜನೆ, ರೇಷನ್‌ಕಾರ್ಡ್, ಸರ್ಕಾರದ ಮನೆ ನಿರ್ಮಾಣದ ವಿಷಯಗಳಲ್ಲಿ ಮಹಿಳೆಯ ಆಸ್ತಿತ್ವ ಕಂಡುಬರುತ್ತಿದೆ.

**೫. ವೈಯಕ್ತಿಕ ಮಾಹಿತಿ**

**ಅ. ಹೆಸರು: ಬಸವರಾಜ ಕೋಡಗುಂಟಿ**

ಆ. ವಿಳಾಸ : ಸಹಾಯಕ ಪ್ರಾಧ್ಯಾಪಕ, ಕನ್ನಡ ವಿಭಾಗ, ಕರ್ನಾಟಕ 'ಕೇಂದ್ರೀಯ ವಿಶ್ವವಿದ್ಯಾಲಯ, ಕಡಗಂಚಿ, ಕಲಬುರಗಿ

ಇ. ಜಾತಿ ಪದ್ಮಶಾಲಿ, ೨ ಎ:

ಈ. ವೃತ್ತಿ ಸರಕಾರಿ ನೌಕರಿ

೧. ಭಾಷೆಯಲ್ಲಿ ಗಂಡು/ಹೆಣ್ಣು ಎಂಬ ಎರಡು ವಿಧಗಳಿವೆಯೇ? ಅಥವಾ ಎರಡು ದೃಷ್ಟಿಕೋನಗಳಿವೆಯೇ?

ಎರಡು ದೃಷ್ಟಿಕೋನಗಳು ಎಂದೆನ್ನಬಹುದು.

೨. ಭಾಷೆಯನ್ನು ಗಂಡುಭಾಷೆ ಮತ್ತು ಹೆಣ್ಣು ಭಾಷೆ ಎಂದು ವಿಭಾಗಿಸಿ ನೋಡುವ ಕ್ರಮ ಸೂಕ್ತವೆ?

ಗಂಡು ಮತ್ತು ಹೆಣ್ಣು ಎಂಬುವುದು ಇರುವುದರಿಂದ ಇದು ಸೂಕ್ತ

೩. ಭಾಷೆಯ ಸಂರಚಿತ ರೂಪವೇ ಗಂಡು/ಹೆಣ್ಣು ಎಂಬ ತಾರತಮ್ಯದಿಂದ ಕೂಡಿದೆಯೇ ಅಥವಾ ಸಮುದಾಯದ ಸುಪ್ತ ಚೇತನಗಳ ಸಂಜ್ಞೆಗಳಾಗಿ ಭಾಷೆಯಲ್ಲಿ ಅಂತಸ್ಥಗೊಂಡು ವಿಭಜಿತ ನೆಲೆಗೆ ಬಂದು ನಿಂತಿವೆಯೇ?

ಭಾಷೆಯ ಸಂರಚಿತ ರೂಪ ಸಮುದಾಯದ ಅಂತಸ್ಸತ್ವದಿಂದ ರೂಪುಗೊಂಡಿರುವುದು. ಇದು ತಾರತಮ್ಯವೆ ಎಂಬುದನ್ನು ನೋಡಬೇಕು. ಭಿನ್ನತೆಗಳೆಲ್ಲ ತಾರತಮ್ಯಗಳಲ್ಲ. ಇಲ್ಲಿ ಭಿನ್ನತೆ ಸಮುದಾಯದ ಅಂತಸ್ಸತ್ವವನ್ನು ರೂಪಿಸುವುದು ಮತ್ತು ತಾರತಮ್ಯ ಸಾಮಾಜಿಕತೆಯಿಂದ ರೂಪುಗೊಳ್ಳುವುದು.

೪. ಭಾಷೆಯ ಶುದ್ಧತೆಯನ್ನು ಉಳಿಸಿಕೊಂಡು ಬರುವ ಗುಣ ಸ್ತ್ರೀಯರ ಭಾಷೆಯದು. ಇದು ಸರೀನಾ?

ಭಾಷೆಯ ಶುದ್ದತೆ ಎಂಬುದು ಇರುವುದಿಲ್ಲ.

೫. ಮಹಿಳೆಯರದೆ ಹೊಸ ಭಾಷೆ ಸೃಷ್ಟಿಸಲು ಸಾಧ್ಯವಾಗಿದೆಯೇ?

ಕ್ರುತ್ರಿಮ ಪ್ರಯತ್ನಗಳು ಏನನ್ನು ಬೇಕಾದರೂ ಹುಟ್ಟಿಸಲು ಸಾದ್ಯವಾಗಬಹುದು. ಆದರೆ, ಭಾಷೆ ಎನ್ನುವುದು ಸೃಷ್ಟಿಸುವಂತದ್ದೆ, ಬೆಳೆಯುವಂತದ್ದೆ ಎಂಬುದನ್ನು ಗಮನಿಸಬೇಕು.

೬. ಮಹಿಳೆಯರದೇ ಪ್ರತ್ಯೇಕ ಭಾಷೆ ಸೃಷ್ಟಿಯಾದ ಮೇಲೆ ಅದು ಅಪ್ರಜ್ಞಾಪೂರ್ವಕವಾಗಿ ಆ ಇಡೀ ಸಮುದಾಯದ ಸಾಂಸ್ಕೃತಿಕ ಭಾಗವಾಗಿ ಬಳಕೆಯಾಗುವಷ್ಟು ಪ್ರಭಾವಯುತವಾಗಿದೆ? ಅಥವಾ ಕೇವಲ ಪ್ರಜ್ಞಾಪೂರ್ವಕ ನೆಲೆಯಲ್ಲಿ ಮಾತ್ರ ನಿಂತು ಬಿಟ್ಟಿದೆಯೇ?

ಹಾಗೊಂದು, ಒಂದು ಲಿಂಗದ ಭಾಷೆ ಎಂಬುದರ ಸೃಷ್ಟಿಯ ವಿಚಾರವೆ ಸೂಕ್ತವಲ್ಲ, ಇನ್ನು ಅದರ ಅಸ್ತಿತ್ವದ ಬಗೆಗೆ ಮಾತನಾಡುವುದು ಇನ್ನೂ ಕಷ್ಟ.

೭. ಲಿಂಗಾತೀತವಾದ ಭಾಷೆಯನ್ನು ಸೃಷ್ಟಿಸಲು ಸಾಧ್ಯವಾಗಿದೆಯೇ?

ಲಿಂಗಾತೀತ ಸಮಾಜ ಸಾದ್ಯವಿಲ್ಲದಿರುವುದರಿಂದ, ಲಿಂಗಾತೀತ ಭಾಷೆ ಕೂಡ ಅಸಾದ್ಯ. ಬೇಕಿರುವುದು ಲಿಂಗ ತಾರತಮ್ಯವಿಲ್ಲದ ಭಾಷೇಯೆ ಹೊರತು ಲಿಂಗಾತೀತ, ಇಲ್ಲವೆ ಲಿಂಗವಿಲ್ಲದ ಭಾಷೆ ಅಲ್ಲ.

೮. ಗಂಡು–ಹೆಣ್ಣಿನ ಆಲೋಚನೆ ಲೋಕಗ್ರಹಿಕೆ ಮತ್ತು ತಾತ್ವಿಕತೆ ಭಿನ್ನವೇ? ಹೌದಾದರೆ ಅದಕ್ಕೆ ಕಾರಣಗಳೇನು?

ಗಂಡು ಮತ್ತು ಹೆಣ್ಣು ಎರಡು ಭಿನ್ನ ಲಿಂಗಗಳು, ಎರಡು ಭಿನ್ನ ಸೃಷ್ಟಿಗಳು, ಎರಡು ಭಿನ್ನ ರಚನೆಗಳು. ಸಹಜವಾಗಿವೆ ಅವುಗಳ ನಡುವೆ ಭಿನ್ನತೆ ಇದೆ, ಇರುತ್ತದೆ, ಇರಬೇಕು ಕೂಡ.

೯. ಸಾಮಾಜಿಕ ಸಂದರ್ಭದಲ್ಲಿ ಸ್ತ್ರೀವಾಚಕಗಳ ಬಳಕೆ ವೈಯಕ್ತಿಕ ನೆಲೆ ಹಾಗೂ ಸಮುದಾಯದ ನೆಲೆಗಳೆರಡರಲ್ಲಿಯು ಅಸ್ತಿತ್ವ ಪಡೆದಿವೆಯೇ? ಪಡೆಯುತ್ತಿವೆಯೇ/ಇಲ್ಲವೇ?

ಕ್ಷಮೆ ಇರಲಿ, ನನಗೆ ಸ್ತ್ರೀವಾಚಕ ಎಂದರೆ ಸಂಭೋದನ ರೂಪಗಳೆ ಹೇಗೆ ಎಂಬುದು ಸರಿಯಾಗಿ ಗೊತ್ತಾಗುತ್ತಿಲ್ಲ,

೧೦. ಎಲ್ಲಾ ವಯೋಮಾನದ ಸ್ತ್ರೀಪುರುಷರಿಬ್ಬರಲ್ಲೂ ಸ್ತ್ರೀವಾಚಕಗಳು ಹಾಗೂ ಪುರುಷ ವಾಚಕಗಳನ್ನು ಪ್ರಜ್ಞಾಪೂರ್ವಕವಾಗಿ ಬಳಸುವ ಪರಿಪಾಠ ಶುರುವಾಗಿದೆಯೇ? ಅಥವಾ ಇಲ್ಲವೇ?

ಕ್ಷಮೆ ಇರಲಿ, ನನಗೆ ಸ್ತ್ರೀವಾಚಕ ಎಂದರೆ ಸಂಭೋದನ ರೂಪಗಳೆ ಹೇಗೆ ಎಂಬುದು ಸರಿಯಾಗಿ ಗೊತ್ತಾಗುತ್ತಿಲ್ಲ,

೧೧. ಪುರುಷ ವಾಚನಕಗಳ/ಸ್ತ್ರೀವಾಚಕಗಳು ಎಂದು ಗೆರೆ ಎಳೆದು ಬಳಸುವುದಕ್ಕಿಂತ ಹೊಸ ರೀತಿಯ ಪದಗಳನ್ನು ಸೃಷ್ಟಿಸಿ ಬಳಸುವ ಪರಿಪಾಠ ಇದೆಯೇ?

೧೨. ಸ್ತ್ರೀವಾಚಕ ಪದಗಳ ಬಳಕೆಯ ಮಾತಂತಿರಲಿ ಅದರ ಗ್ರಹಿಕೆಯಾದರೂ ಆ ಸಮುದಾಯದ ಜನರೆಲ್ಲರಲ್ಲಿಯು ಮೂಡಿದೆಯೇ?

# ಪ್ರಶ್ನಾವಳಿ

೧. **ವೈಯಕ್ತಿಕ ಮಾಹಿತಿ**

ಅ. ಹೆಸರು : ವಿದ್ಯಾಶ್ರೀ ಎಸ್.

ಆ. ವಿಳಾಸ : ಬೀದಿಬಾವಿ ಓಣಿ, ಹಿರೇಜಂತಕಲ್ ಗಂಗಾವತಿ

ಇ. ವಿದ್ಯಾರ್ಹತೆ : ಬಿ.ಇಡಿ.

ಈ. ಜಾತಿ : ಬಲಿಜ

ಉ. ವೃತ್ತಿ ; ವಿದ್ಯಾರ್ಥಿನಿ

ಊ. ವಯಸ್ಸು : ೧೯

೨. ನೀವು ಆಡುವ ಭಾಷೆ ಯಾವುದು? :

ಕನ್ನಡ

೩. ನಿಮ್ಮ ಮನೆತನದ ಹೆಸರೇನು? (ಕುಲನಾಮ) ಅದಕ್ಕೆ ಹಿನ್ನೆಲೆ ಏನಾದರೂ ಇದೆಯೇ?

ಬೀದಿಭಾವಿ. ಈ ಕುಲನಾಮ ನಮ್ಮ ಪೂರ್ವಜರ ಕಾಲದಿಂದಲೂ ರೂಢಿಯಲ್ಲಿದ್ದು, ಇಂದಿಗೂ ಜಾರಿಯಲ್ಲಿದೆ. ನಮ್ಮ ಮನೆಯ ಮುಂದೆ 'ಬಾವಿ' ಇರುವುದರಿಂದ ಇದು ವಾಡಿಕೆಯಾಗಿದೆ.

೪. ನಿಮ್ಮ ಮನೆತನದ ವೃತ್ತಿ ಯಾವುದು? ಅದರ ಪರಿಕರಗಳು ಯಾವುವು?

ವ್ಯವಸಾಯ, ಪರಿಕರಗಳು: ಎತ್ತಿನಬಂಡಿ, ಟ್ರ್ಯಾಕ್ಟರ್, ಇತ್ಯಾದಿ

೫. ನಿಮ್ಮ ಮನೆಯಲ್ಲಿ ಆಚರಿಸುವ ವಿಶೇಷ ಆಚರಣೆಗಳು ಯಾವುವು? ಯಾವುದಾದರೂ ಒಂದು ಆಚರಣೆಯನ್ನು ವಿವರಿಸಿ

–

೬. ನಿಮ್ಮ ಮನೆಯಲ್ಲಿ ಹೆಚ್ಚು ಮಾತನಾಡುವವರು ಯಾರು? ಏಕೆ?

ನಾನೇ. ಯಾಕೆ ಅಂದ್ರೆ ಮಾತನಾಡಲು ಕಾರಣವನ್ನು ಹುಡುಕದೇ ನಿರಂತರವಾಗಿ ಮಾತಾಡ್ತಾನೇ ಇರ್ತೀನಿ

೭. ನಿಮ್ಮ ಮನೆಯ ನಿರ್ಧಾರಗಳನ್ನು ತೆಗೆದುಕೊಳ್ಳುವವರು ಯಾರು? ತಂದೆ/ತಾಯಿ ಮತ್ತು ಯಾಕೆ ಅವರೇ/ಅವಳೇ ತೆಗೆದುಕೊಳ್ಳುತ್ತಾರೆ?

ನಿರ್ದಿಷ್ಟವಾಗಿ ಹೇಳೋದಾದ್ರೆ ತಂದೆ ಎಲ್ಲಾ ನಿರ್ಧಾರಗಳನ್ನು ಮಾಡುತ್ತಾರೆ. ಕಾರಣ ಹೆಚ್ಚು ಸಾಮಾನ್ಯ ಜ್ಞಾನ ಹೊಂದಿರುವುದರಿಂದಾಗಿ.

೮. ಕೆಳಗೆ ಕೊಟ್ಟಿರುವ ಕೆಲಸಗಳಲ್ಲಿ ಯಾರು ಯಾವ ಕೆಲಸವನ್ನು ಮಾಡಬೇಕು? ಮತ್ತು ಯಾಕೆ?

| ಕ್ರಸಂ. | ಕೆಲಸ | ಪುರುಷ | ಮಹಿಳೆ | ಯಾಕೆ |
|---|---|---|---|---|
| ೧. | ಟೈಲರಿಂಗ್ | ✓ | ✓ | ಬಟ್ಟೆ ಹೊಲಿಯುವುದು ಪುರುಷ ಮತ್ತು ಮಹಿಳೆಯರಿಗೆ ಅವಶ್ಯಕವಾದ ವೃತ್ತಿಯಾಗಿದೆ. |
| ೨. | ಏಮ್‌ರೈಡಿಂಗ್ | | ✓ | ಮಹಿಳೆಯರು ಹೆಚ್ಚಾಗಿ ಹೊಸತನ್ನು ಬಯಸುವುದರಿಂದ ಈ ಕಸೂತಿ ಕಲೆ ಅವರಿಗೆ ಸೀಮಿತ. |
| ೩. | ಪೋಲಿಸ್ | ✓ | ✓ | ಇದು ಇಬ್ಬರಿಗೂ ಸರಿಹೊಂದುತ್ತದೆ |
| ೪. | ಡಾಕ್ಟರ್ | ✓ | ✓ | ಇದು ಇಬ್ಬರಿಗೂ ಸರಿಹೊಂದುತ್ತದೆ. |
| ೫. | ನರ್ಸ್ | | ✓ | ಇದು ಇಬ್ಬರಿಗೂ ಸರಿಹೊಂದುತ್ತದೆ. |
| ೬. | ಲಾಯರ್ | ✓ | ✓ | ಇದು ಇಬ್ಬರಿಗೂ ಸರಿಹೊಂದುತ್ತದೆ. |
| ೭. | ಟೀಚರ್ | ✓ | ✓ | ಇದು ಇಬ್ಬರಿಗೂ ಸರಿಹೊಂದುತ್ತದೆ. |
| ೮. | ರೈತ | ✓ | | ಇದು ಇಬ್ಬರಿಗೂ ಸರಿಹೊಂದುತ್ತದೆ. |
| ೯. | ಮಿಲಿಟರಿ | ✓ | | ಪುರುಷರಿಗೆ ಸೂಕ್ತವಾದುದ್ದಾಗಿದೆ. |
| ೧೦. | ಪೈಲೆಟ್ | ✓ | | ಇದು ಇಬ್ಬರಿಗೂ ಸರಿಹೊಂದುತ್ತದೆ. |
| ೧೧. | ಡ್ರೈವರ್ | ✓ | | ಪುರುಷರಿಗೆ ಸೂಕ್ತವಾದುದ್ದಾಗಿದೆ. |
| ೧೨. | ಕಂಡಕ್ಟರ್ | ✓ | | ಪುರುಷರಿಗೆ ಸೂಕ್ತವಾದುದ್ದಾಗಿದೆ. |
| ೧೩. | ಸಮಾಜ ಸುಧಾರಕರು | ✓ | ✓ | ಇಬ್ಬರಿಗೂ ಅನ್ವಯಿಸುತ್ತದೆ. |
| ೧೪. | ಮನೆ ಕೆಲಸ, ಅಡುಗೆ, ಬಟ್ಟೆ ತೊಳೆಯುವುದು, ಕಸ ಗುಡಿಸುವುದು. | ✓ | ✓ | ಇಬ್ಬರಿಗೂ ಅನ್ವಯಿಸುತ್ತದೆ. |
| ೧೫. | ಸೂಳೆ | | | ಅನೈತಿಕ ಚಟುವಟಿಕೆ ಸಮಾಜಕ್ಕೆ ಮಾರಕ |

೯. ಕೆಳಗೆ ಕೊಟ್ಟಿರುವ ಶಿಕ್ಷಣ ಪದವಿಗಳಲ್ಲಿ ಯಾರು ಯಾವ ಬಗೆಯ ಶಿಕ್ಷಣ ಪಡೆಯಬೇಕು? ಯಾಕೆ?

| ಕ್ರ.ಸಂ. | ಪದವಿ | ಪುರುಷ | ಮಹಿಳೆ | ಯಾಕೆ |
|---|---|---|---|---|
| ೧. | ಪಿ.ಯು.ಸಿ. ಆರ್ಟ್ಸ್, ಸೈನ್ಸ್, ಕಾಮರ್ಸ್ | ✓ | ✓ | ವಿದ್ಯಾಭ್ಯಾಸ ಮಾಡಲು |
| ೨. | ಡಿಪ್ಲೊಮಾ | ✓ | | ಪುರುಷರಿಗೆ ಸೂಕ್ತ |
| ೩. | ಡಿ.ಎಡ್., ಬಿ.ಎಡ್. | ✓ | ✓ | ಮಹಿಳೆಯರಿಗೆ ಸೂಕ್ತ |
| ೪. | ಐಟಿಐ | ✓ | | ಪುರುಷರು ತಂತ್ರಜ್ಞಾನವನ್ನು ಇಷ್ಟಪಡುತ್ತಾರೆ. |
| ೫. | ಜೆ.ಒ.ಸಿ. | ✓ | ✓ | ಮಹಿಳೆಯರೊಂದಿಗೆ ಭವಿಷ್ಯ ರೂಪಿಸುತ್ತಾರೆ. |
| ೬. | ಎಂ.ಕಾಂ | ✓ | ✓ | ಉನ್ನತ ಶಿಕ್ಷಣ ಇಬ್ಬರಿಗೂ ಸೂಕ್ತ |
| ೭. | ಇಂಜಿನಿಯರಿಂಗ್ | ✓ | ✓ | ಉನ್ನತ ಶಿಕ್ಷಣ ಇಬ್ಬರಿಗೂ ಸೂಕ್ತ |
| ೮. | ಬಿ.ಎ. | ✓ | ✓ | ಉನ್ನತ ಶಿಕ್ಷಣ ಇಬ್ಬರಿಗೂ ಸೂಕ್ತ |
| ೯. | ಪಿಎಚ್.ಡಿ. | ✓ | ✓ | ಉನ್ನತ ಶಿಕ್ಷಣ ಇಬ್ಬರಿಗೂ ಸೂಕ್ತ |

೧೦. ಮನೆಯಲ್ಲಿ ಹೊರಗಡೆ ಯಾರು ಮಾತನಾಡಬೇಕು? ಹೆಣ್ಣು/ಗಂಡೋ ಮತ್ತು ಯಾಕೆ?
ನಮ್ಮ ಸಮಾಜ ಪುರುಷ ಪ್ರಧಾನವಾಗಿರುವುದರಿಂದ ಮನೆಯ ಹೊರಗಡೆ ಪುರುಷ (ಗಂಡು) ಮಾತನಾಡುವುದೇ ಒಳಿತು.

೧೧. ನಿಮಗಿಂತ ಮೇಲಿನ ಜಾತಿಯವರೂ ನಿಮ್ಮನ್ನು ಹೇಗೆ ಮಾತನಾಡಿಸುತ್ತಾರೆ.
ಹೀಯಾಳಿಸಿ ಮಾತನಾಡಿಸುತ್ತಾರೆ.

೧೨. ನಿಮಗಿಂತ ಕೆಳಗಿನ ಜಾತಿಯವರೂ ನಿಮ್ಮನ್ನು ಹೇಗೆ ಮಾತನಾಡಿಸುತ್ತಾರೆ.
ಗೌರವದಿಂದ ಮಾತನಾಡಿಸುತ್ತಾರೆ.

೧೩. ನಿಮಗೆ ಇಷ್ಟವಾದ ಹಬ್ಬದ ಆಚರಣೆಯನ್ನು ವಿವರಿಸಿ. ನಿಮಗೆ ಇಷ್ಟವಾದ ಕಥೆಯನ್ನು ಹೇಳಿ.

'ಯುಗಾದಿ' : ಹಿಂದೂ ಪುರಾಣಗಳ ಪ್ರಕಾರ ಯುಗಾದಿ ಭಾರತೀಯ ಹೊಸ ವರ್ಷದ ಪ್ರಾರಂಭ ಕಾಲ ವಸಂತ ಕಾಲ, ಗಿಡಮರಗಳ ಹೊಸತಾಗಿ ಜಿಗಿಯುತ್ತವೆ. ಯುಗಾದಿ ಬೇವು-ಬೆಲ್ಲದ ಹಬ್ಬವಾಗಿರುವುದರಿಂದ ಇದು ಕಷ್ಟ-ಸುಖದ ಪ್ರತೀಕವಾಗಿದೆ.

೧೪. ನಿಮಗೆ ತಿಳಿದಿರುವ ಎರಡು ಗಾದೆ ಮಾತುಗಳನ್ನು ವಿವರಿಸಿ? ಇಲ್ಲಿ ಕೊಟ್ಟಿರುವ ಗಾದೆಯನ್ನು ವಿವರಿಸಿ.

'ಹಂಡೆ ಬಾಯಿ ಕಟ್ಟಬಹುದು. ಮುಂಡೆ ಬಾಯಿ ಕಟ್ಟಲಾಗದು.'

ಹಂಡೆ ಬಾಯಿ ಚಿಕ್ಕದಿರುವುದರಿಂದ ಅದನ್ನು ಮುಚ್ಚಬಹುದು. ಈ ಮಾತಿನ ಪ್ರಕಾರ ಇಲ್ಲಿ ಮುಂಡೆ ಎಂದರೆ ಜನರನ್ನು ಸೂಚಿಸುತ್ತದೆ. ಈ ಗಾದೆಗೆ ಹೋಲಿಸುವಂತೆ ಇನ್ನೊಂದು ಮಾತಿದೆ. ಮಡಕೆಯ ತೂತನ್ನು ಮುಚ್ಚಬಹುದು. ಜನರ ಬಾಯಿ ಮುಚ್ಚಲಾಗದೆ.

'ಮಾತು ಬಲ್ಲವನಿಗೆ ಜಗಳವಿಲ್ಲ'.

# ಪ್ರಶ್ನಾವಳಿ

೧. **ವೈಯಕ್ತಿಕ ಮಾಹಿತಿ**

ಅ. ಹೆಸರು : ಪುಷ್ಪಾವತಿ ಎನ್.

ಆ. ವಿಳಾಸ : ಜವುಕು, ಹೊಸಪೇಟೆ ತಾಲೂಕು, ಬಳ್ಳಾರಿ ಜಿಲ್ಲೆ.

ಇ. ವಿದ್ಯಾರ್ಹತೆ : ಬಿ.ಎ.

ಈ. ಜಾತಿ : ನೇಕಾರ

ಉ. ವೃತ್ತಿ ; ವಿದ್ಯಾರ್ಥಿನಿ

ಊ. ವಯಸ್ಸು : ೨೦

೨. ನೀವು ಆಡುವ ಭಾಷೆ ಯಾವುದು?

ಕನ್ನಡ, ತೆಲುಗು

೩. ನಿಮ್ಮ ಮನೆತನದ ಹೆಸರೇನು? (ಕುಲನಾಮ) ಅದಕ್ಕೆ ಹಿನ್ನೆಲೆ ಏನಾದರೂ ಇದೆಯೇ?

ಪದ್ಮಶಾಲಿ : ಈ ಕುಲನಮ ನಮ್ಮ ಪೂರ್ವಜರ ಕಾಲದಿಂದಲೂ ರೂಢಿಯಲ್ಲಿದ್ದು, ಇಂದಿಗೂ ಜಾರಿಯಲ್ಲಿದೆ. ನೇಕಾರ ಜಾತಿಯಲ್ಲಿ ಬರುವ ನಮ್ಮ ಕುಲನಾಮ 'ಪದ್ಮಶಾಲಿ' ಯಾಗಿದೆ.

೪. ನಿಮ್ಮ ಮನೆತನದ ವೃತ್ತಿ ಯಾವುದು? ಅದರ ಪರಿಕರಗಳು ಯಾವುವು?

ವ್ಯವಸಾಯ, ಪರಿಕರಗಳು: ಎತ್ತಿನಬಂಡಿ, ಟ್ರ್ಯಾಕ್ಟರ್, ಇತ್ಯಾದಿ

೫. ನಿಮ್ಮ ಮನೆಯಲ್ಲಿ ಆಚರಿಸುವ ವಿಶೇಷ ಆಚರಣೆಗಳು ಯಾವುವು? ಯಾವುದಾದರೂ ಒಂದು ಆಚರಣೆಯನ್ನು ವಿವರಿಸಿ

–

೬. ನಿಮ್ಮ ಮನೆಯಲ್ಲಿ ಹೆಚ್ಚು ಮಾತನಾಡುವವರು ಯಾರು? ಏಕೆ?

ನಮ್ಮ ಮನೆಯಲ್ಲಿ ಹೆಚ್ಚು ಮಾತನಾಡುವವರು ಅಜ್ಜಿ. ಕಾರಣವನ್ನು ಹುಡುಕದೇ ನಿರಂತರವಾಗಿ ಮಾತಾಡ್ತಾನೆ ಇರುತ್ತಾರೆ.

೭. ನಿಮ್ಮ ಮನೆಯ ನಿರ್ಧಾರಗಳನ್ನು ತೆಗೆದುಕೊಳ್ಳುವವರು ಯಾರು? ತಂದೆ/ತಾಯಿ ಮತ್ತು ಯಾಕೆ ಅವನೇ/ಅವಳೇ ತೆಗೆದುಕೊಳ್ಳುತ್ತಾರೆ?

ನಿರ್ದಿಷ್ಟವಾಗಿ ಹೇಳೋದಾದ್ರೆ ತಂದೆ ಎಲ್ಲಾ ನಿರ್ಧಾರಗಳನ್ನು ಮಾಡುತ್ತಾರೆ. ಕಾರಣ ಹೆಚ್ಚು ಸಾಮಾನ್ಯ ಜ್ಞಾನ ಹೊಂದಿರುವುದರಿಂದಾಗಿ.

೮. ಕೆಳಗೆ ಕೊಟ್ಟಿರುವ ಕೆಲಸಗಳಲ್ಲಿ ಯಾರು ಯಾವ ಕೆಲಸವನ್ನು ಮಾಡಬೇಕು? ಮತ್ತು ಯಾಕೆ?

| **ಕ್ರಸಂ** | **ಕೆಲಸ** | **ಪುರುಷ** | **ಮಹಿಳೆ** | **ಯಾಕೆ** |
|---|---|---|---|---|
| ೧. | ಟೈಲರಿಂಗ್ | ✓ | ✓ | ಬಟ್ಟೆ ಹೊಲಿಯುವುದು ಪುರುಷ ಮತ್ತು ಮಹಿಳೆಯರಿಗೆ ಅವಶ್ಯಕವಾದ ವೃತ್ತಿಯಾಗಿದೆ. |
| ೨. | ಎಮ್‌ರೈಡಿಂಗ್ |  | ✓ | ಮಹಿಳೆಯರು ಹೆಚ್ಚಾಗಿ ಹೊಸತನ್ನು ಬಯಸುವುದರಿಂದ ಈ ಕಸೂತಿ ಕಲೆ ಅವರಿಗೆ ಸೀಮಿತ. |
| ೩. | ಪೋಲಿಸ್ | ✓ |  | ಪುರುಷರು ದೈಹಿಕವಾಗಿ ಸಾಮರ್ಥ್ಯ ಹಾಗೂ ಬಲಾಢ್ಯವಿರುವುದರಿಂದ ಈ ವೃತ್ತಿ ಅವರಿಗೆ ಒಪ್ಪುತ್ತದೆ. |
| ೪. | ಡಾಕ್ಟರ್ | ✓ | ✓ | ಇದು ಇಬ್ಬರಿಗೂ ಸರಿಹೊಂದುತ್ತದೆ. |
| ೫. | ನರ್ಸ್ | ✓ | ✓ | ಇದು ಇಬ್ಬರಿಗೂ ಸರಿಹೊಂದುತ್ತದೆ. |
| ೬. | ಲಾಯರ್ | ✓ | ✓ | ಇದು ಇಬ್ಬರಿಗೂ ಸರಿಹೊಂದುತ್ತದೆ. |
| ೭. | ಟೀಚರ್ | ✓ | ✓ | ಇದು ಇಬ್ಬರಿಗೂ ಸರಿಹೊಂದುತ್ತದೆ. |
| ೮. | ರೈತ | ✓ | ✓ | ಇದು ಇಬ್ಬರಿಗೂ ಸರಿಹೊಂದುತ್ತದೆ. |
| ೯. | ಮಿಲಿಟರಿ | ✓ |  | ಪುರುಷರಿಗೆ ಸೂಕ್ತವಾದುದ್ದಾಗಿದೆ. |
| ೧೦. | ಪೈಲೆಟ್ | ✓ | ✓ | ಇದು ಇಬ್ಬರಿಗೂ ಸರಿಹೊಂದುತ್ತದೆ. |
| ೧೧. | ಡ್ರೈವರ್ | ✓ |  | ಪುರುಷರಿಗೆ ಸೂಕ್ತವಾದುದ್ದಾಗಿದೆ. |
| ೧೨. | ಕಂಡಕ್ಟರ್ | ✓ |  | ಪುರುಷರಿಗೆ ಸೂಕ್ತವಾದುದ್ದಾಗಿದೆ. |
| ೧೩. | ಸಮಾಜ ಸುಧಾರಕರು | ✓ | ✓ | ಇಬ್ಬರಿಗೂ ಅನ್ವಯಿಸುತ್ತದೆ. |
| ೧೪. | ಮನೆ ಕೆಲಸ, ಅಡುಗೆ, ಬಟ್ಟೆ ತೊಳೆಯುವುದು, ಕಸ ಗುಡಿಸುವುದು. |  |  | ಇಬ್ಬರಿಗೂ ಅನ್ವಯಿಸುತ್ತದೆ. |
| ೧೫. | ಸೂಳೆ |  |  | ಅನೈತಿಕ ಚಟುವಟಿಕೆ ಸಮಾಜಕ್ಕೆ ಮಾರಕ |

೯. ಕೆಳಗೆ ಕೊಟ್ಟಿರುವ ಶಿಕ್ಷಣ ಪದವಿಗಳಲ್ಲಿ ಯಾರು ಯಾವ ಬಗೆಯ ಶಿಕ್ಷಣ ಪಡೆಯಬೇಕು? ಯಾಕೆ?

| ಕ್ರಸಂ. | ಪದವಿ | ಪುರುಷ | ಮಹಿಳೆ | ಯಾಕೆ |
|---|---|---|---|---|
| ೧. | ಪಿ.ಯು.ಸಿ. ಆರ್ಟ್ಸ್, ಸೈನ್ಸ್, ಕಾಮರ್ಸ್ | ✓ | ✓ | ವಿದ್ಯಾಭ್ಯಾಸ ಮಾಡಲು |
| ೨. | ಡಿಪ್ಲೊಮಾ | ✓ | | ಪುರುಷರಿಗೆ ಸೂಕ್ತ |
| ೩. | ಡಿ.ಎಡ್., ಬಿ.ಎಡ್. | ✓ | ✓ | ಮಹಿಳೆಯರಿಗೆ ಸೂಕ್ತ |
| ೪. | ಐಟಿಐ | ✓ | | ಪುರುಷರು ತಂತ್ರಜ್ಞಾನವನ್ನು ಇಷ್ಟಪಡುತ್ತಾರೆ. |
| ೫. | ಜೆ.ಒ.ಸಿ. | ✓ | ✓ | ಮಹಿಳೆಯರೊಂದಿಗೆ ಭವಿಷ್ಯ ರೂಪಿಸುತ್ತಾರೆ. |
| ೬. | ಎಂ.ಕಾಂ | ✓ | ✓ | ಉನ್ನತ ಶಿಕ್ಷಣ ಇಬ್ಬರಿಗೂ ಸೂಕ್ತ |
| ೭. | ಇಂಜಿನಿಯರಿಂಗ್ | ✓ | ✓ | ಉನ್ನತ ಶಿಕ್ಷಣ ಇಬ್ಬರಿಗೂ ಸೂಕ್ತ |
| ೮. | ಬಿ.ಎ. | ✓ | ✓ | ಉನ್ನತ ಶಿಕ್ಷಣ ಇಬ್ಬರಿಗೂ ಸೂಕ್ತ |
| ೯. | ಪಿಎಚ್.ಡಿ. | ✓ | ✓ | ಉನ್ನತ ಶಿಕ್ಷಣ ಇಬ್ಬರಿಗೂ ಸೂಕ್ತ |

೧೦. ಮನೆಯಲ್ಲಿ ಹೊರಗಡೆ ಯಾರು ಮಾತನಾಡಬೇಕು? ಹೆಣ್ಣು/ಗಂಡೋ ಮತ್ತು ಯಾಕೆ?

ನಮ್ಮ ಸಮಾಜ ಪುರುಷ ಪ್ರಧಾನವಾಗಿರುವುದರಿಂದ ಮನೆಯ ಹೊರಗಡೆ ಪುರುಷ (ಗಂಡು) ಮಾತನಾಡುವುದೇ ಒಳಿತು.

೧೧. ನಿಮಗಿಂತ ಮೇಲಿನ ಜಾತಿಯವರೂ ನಿಮ್ಮನ್ನು ಹೇಗೆ ಮಾತನಾಡಿಸುತ್ತಾರೆ.

ಹೀಯಾಳಿಸಿ ಮಾತನಾಡಿಸುತ್ತಾರೆ.

೧೨. ನಿಮಗಿಂತ ಕೆಳಗಿನ ಜಾತಿಯವರೂ ನಿಮ್ಮನ್ನು ಹೇಗೆ ಮಾತನಾಡಿಸುತ್ತಾರೆ.

ಗೌರವದಿಂದ ಮಾತನಾಡಿಸುತ್ತಾರೆ.

೧೩. ನಿಮಗೆ ಇಷ್ಟವಾದ ಹಬ್ಬದ ಆಚರಣೆಯನ್ನು ವಿವರಿಸಿ. ನಿಮಗೆ ಇಷ್ಟವಾದ ಕಥೆಯನ್ನು ಹೇಳಿ.

'ಯುಗಾದಿ' : ಹಿಂದೂ ಪುರಾಣಗಳ ಪ್ರಕಾರ ಯುಗಾದಿ ಭಾರತೀಯ ಹೊಸ ವರ್ಷದ ಪ್ರಾರಂಭ ಕಾಲ ವಸಂತ ಕಾಲ, ಗಿಡಮರಗಳ ಹೊಸತಾಗಿ ಚಿಗಿಯುತ್ತವೆ. ಯುಗಾದಿ ಬೇವು-ಬೆಲ್ಲದ ಹಬ್ಬವಾಗಿರುವುದರಿಂದ ಇದು ಕಷ್ಟ-ಸುಖದ ಪ್ರತೀಕವಾಗಿದೆ.

೧೪. ನಿಮಗೆ ತಿಳಿದಿರುವ ಎರಡು ಗಾದೆ ಮಾತುಗಳನ್ನು ವಿವರಿಸಿ? ಇಲ್ಲಿ ಕೊಟ್ಟಿರುವ ಗಾದೆಯನ್ನು ವಿವರಿಸಿ

'ಹಂಡೆ ಬಾಯಿ ಕಟ್ಟಬಹುದು. ಮುಂಡೆ ಬಾಯಿ ಕಟ್ಟಲಾಗದು.'

'ಮಾತು ಬಲ್ಲವನಿಗೆ ಜಗಳವಿಲ್ಲ'.

ಮಾತು ಬಲ್ಲವನಿಗೆ ಜಗಳವಿಲ್ಲ ಎನ್ನುವ ಜನಪದರ ನುಡಿ ಬಹಳ ಉಚಿತವಾಗಿದೆ. ವೇದ ಸುಳ್ಳಾದರೂ ಗಾದೆ ಸುಳ್ಳಾಗದು ಎನ್ನುವ ವಾಕ್ಯವನ್ನು ನಿಜ ಮಾಡಿದೆ. ಯಾವಾಗಲೂ ಮಾತ ನಾಡುವವರಿಗೆ ಇನ್ನೊಬ್ಬರ ಬಗ್ಗೆ ಮಾತನಾಡಿ ಜಗಳ ಕಾಯುತ್ತಿರುತ್ತಾರೆ. ಹೀಗೆ ಯಾವಾಗಲೂ ಮಾತನಾಡುವವರಿಗೆ ಬಹಳ ಜ್ಞಾನ ಇರುವುದಿಲ್ಲ ಎಂದು ಹಿರಿಯರು ಹೇಳುತ್ತಾರೆ. ಜ್ಞಾನ ಇಲ್ಲದೇ ಮಾತನಾಡುವುದರಿಂದ ಬಹಳಷ್ಟು ಜಗಳಗಳು ಆಗುವ ಸಂಭವವಿದೆ. ಆದ್ದರಿಂದ ನಮ್ಮ ಪೂರ್ವಜರು ಮಾತು ಬಲ್ಲವನಿಗೆ ಜಗಳವೇ ಇಲ್ಲ ಎಂದು ಹೇಳಿದ್ದಾರೆ.

# ಪ್ರಶ್ನಾವಳಿ

೧. **ವೈಯಕ್ತಿಕ ಮಾಹಿತಿ**

ಅ. ಹೆಸರು : ಡಿ. ಮಂಜಕ್ಕ

ಆ. ವಿಳಾಸ : ಡಿ. ಮಂಜಕ್ಕ, ಗಂಡ: ಬಿ. ದತ್ತಪ್ಪ ಕಮಲಾಪುರ

ಇ. ವಿದ್ಯಾರ್ಹತೆ : ಪಿ.ಯು.ಸಿ., ಟಿ.ಸಿ.ಎಚ್., ಬಿ.ಎ., ಎಂ.ಎ.

ಈ. ಜಾತಿ : ನಾಯಕ

ಉ. ವೃತ್ತಿ : ಶಿಕ್ಷಕಿ

ಊ. ವಯಸ್ಸು : ೩೭

೨. ನೀವು ಆಡುವ ಭಾಷೆ ಯಾವುದು?

ಕನ್ನಡ

೩. ನಿಮ್ಮ ಮನೆತನದ ಹೆಸರೇನು? (ಕುಲನಾಮ) ಅದಕ್ಕೆ ಹಿನ್ನೆಲೆ ಏನಾದರೂ ಇದೆಯೇ?

ಬ್ಯಾಲಾಳ ಕುಟುಂಬ, ತಿಳಿದಿಲ್ಲ.

೪. ನಿಮ್ಮ ಮನೆತನದ ವೃತ್ತಿ ಯಾವುದು? ಅದರ ಪರಿಕರಗಳು ಯಾವುವು?

ಯಾವುದು ಇಲ್ಲ.

೫. ನಿಮ್ಮ ಮನೆಯಲ್ಲಿ ಆಚರಿಸುವ ವಿಶೇಷ ಆಚರಣೆಗಳು ಯಾವುವು? ಯಾವುದಾದರೂ ಒಂದು ಆಚರಣೆಯನ್ನು ವಿವರಿಸಿ.

ಸಾಮಾನ್ಯವಾಗಿ ಹಿಂದೂಗಳು ಆಚರಿಸುವ ಹಬ್ಬ ಹರಿದಿನಗಳು ಮಾತ್ರ.

೬. ನಿಮ್ಮ ಮನೆಯಲ್ಲಿ ಹೆಚ್ಚು ಮಾತನಾಡುವವರು ಯಾರು? ಏಕೆ?

ನಾನು. ಏಕೆಂದರೆ ಹೆಚ್ಚು ಕಾಲ ಮನೆಯಲ್ಲಿ ಮಕ್ಕಳೊಂದಿಗೆ ಇರುವವಳು ನಾನೇ ಆದ್ದರಿಂದ.

೭. ನಿಮ್ಮ ಮನೆಯ ನಿರ್ಧಾರಗಳನ್ನು ತೆಗೆದುಕೊಳ್ಳುವವರು ಯಾರು? ತಂದೆ/ತಾಯಿ ಮತ್ತು ಯಾಕೆ ಅವನೇ/ಅವಳೇ ತೆಗೆದುಕೊಳ್ಳುತ್ತಾರೆ?

–

೮. ಕೆಳಗೆ ಕೊಟ್ಟಿರುವ ಕೆಲಸಗಳಲ್ಲಿ ಯಾರು ಯಾವ ಕೆಲಸವನ್ನು ಮಾಡಬೇಕು? ಮತ್ತು ಯಾಕೆ?

| ಕ್ರಸಂ. | ಕೆಲಸ | ಪುರುಷ | ಮಹಿಳೆ | ಯಾಕೆ |
|---|---|---|---|---|
| ೧. | ಟೈಲರಿಂಗ್ | ✓ | | ಆಧುನಿಕ ಸಮಾಜದಲ್ಲಿ ಪುರುಷರಗಷ್ಟೇ. |
| ೨. | ಏಮ್‌ರೈಡಿಂಗ್ | | ✓ | ಸಮಾನತೆ ಮಹಿಳೆಯರಿಗೂ |
| ೩. | ಪೋಲಿಸ್ | ✓ | | ಇರುವುದರಿಂದ ಅಲ್ಲದೆ ಮಹಿಳೆ |
| ೪. | ಡಾಕ್ಟರ್ | ✓ | ✓ | ಮಹಿಳೆಯರು ಸಹ ಎಲ್ಲಾ ಕೆಲಸದಲ್ಲಿಯೂ |
| ೫. | ನರ್ಸ್ | | ✓ | ತಾನು ಸಹಭಾಗಿತ್ವವನ್ನು ಪಡೆದುಕೊಂಡಿರುವುದರಿಂದ |
| ೬. | ಲಾಯರ್ | | | |
| ೭. | ಟೀಚರ್ | | | |
| ೮. | ರೈತ | | | |
| ೯. | ಮಿಲಿಟರಿ | | | |
| ೧೦. | ಪೈಲೆಟ್ | | | |
| ೧೧. | ಡ್ರೈವರ್ | | | |
| ೧೨. | ಕಂಡಕ್ಟರ್ | | | |
| ೧೩. | ಸಮಾಜ ಸುಧಾರಕರು | | | |
| ೧೪. | ಮನೆ ಕೆಲಸ, ಅಡುಗೆ, ಬಟ್ಟೆ ತೊಳೆಯುವುದು, ಕಸ ಗುಡಿಸುವುದು. | | | |
| ೧೫. | ಸೂಳೆ | | | |

೯. ಕೆಳಗೆ ಕೊಟ್ಟಿರುವ ಶಿಕ್ಷಣ ಪದವಿಗಳಲ್ಲಿ ಯಾರು ಯಾವ ಬಗೆಯ ಶಿಕ್ಷಣ ಪಡೆಯಬೇಕು? ಯಾಕೆ?

| ಕ್ರಸಂ. | ಪದವಿ | ಪುರುಷ | ಮಹಿಳೆ | ಯಾಕೆ |
|---|---|---|---|---|
| ೧. | ಪಿ.ಯು.ಸಿ. ಆರ್ಟ್ಸ್, ಸೈನ್ಸ್, ಕಾಮರ್ಸ್ | | | ಸಮಾಜದಲ್ಲಿ ಹೆಣ್ಣು ಗಂಡು ಇಬ್ಬರೂ ಸಮಾನರು. |
| ೨. | ಡಿಪ್ಲೊಮಾ | | | ಹಾಗೆಯೇ ಶಿಕ್ಷಣ ಕ್ಷೇತ್ರದಲ್ಲಿಯೂ |
| ೩. | ಡಿ.ಎಡ್., ಬಿ.ಎಡ್. | | | ಸಹ ಪುರುಷ ಮತ್ತು ಮಹಿಳೆ |
| ೪. | ಐಟಿಐ | | | ಇಬ್ಬರಿಗೂ ಸಮಾನತೆ ಇದೆ |
| ೫. | ಜೆ.ಒ.ಸಿ. | | | |
| ೬. | ಎಂ.ಕಾಂ | | | |
| ೭. | ಇಂಜಿನಿಯರಿಂಗ್ | | | |
| ೮. | ಬಿ.ಎ. | | | |
| ೯. | ಪಿಎಚ್.ಡಿ. | | | |

೧೦. ಮನೆಯಲ್ಲಿ ಹೊರಗಡೆ ಯಾರು ಮಾತನಾಡಬೇಕು? ಹೆಣ್ಣು/ಗಂಡೋ ಮತ್ತು ಯಾಕೆ?

ಸಮಯ ಮತ್ತು ಸಂದರ್ಭಕ್ಕೆ ತಕ್ಕಂತೆ ಇಬ್ಬರು ಮಾತನಾಡಬಹುದು.

೧೧. ನಿಮಗಿಂತ ಮೇಲಿನ ಜಾತಿಯವರೂ ನಿಮ್ಮನ್ನು ಹೇಗೆ ಮಾತನಾಡಿಸುತ್ತಾರೆ

ಯಾವುದೇ ಅನುಭವ ಆಗಿರುವುದಿಲ್ಲ. ಆದರೂ ಕೆಲವೊಂದು ಸಮಯದಲ್ಲಿ ಕೀಳಿರಿಮೆ ಉಂಟಾಗಿರುವುದು ಸಹಜ.

೧೨. ನಿಮಗಿಂತ ಕೆಳಗಿನ ಜಾತಿಯವರೂ ನಿಮ್ಮನ್ನು ಹೇಗೆ ಮಾತನಾಡಿಸುತ್ತಾರೆ.

–

೧೩. ನಿಮಗೆ ಇಷ್ಟವಾದ ಹಬ್ಬದ ಆಚರಣೆಯನ್ನು ವಿವರಿಸಿ. ನಿಮಗೆ ಇಷ್ಟವಾದ ಕಥೆಯನ್ನು ಹೇಳಿ.

'ದೀಪಾವಳಿ' ಎಂದರೆ ಇಷ್ಟ. ಕಾರಣ ಮನೆಯಲ್ಲಿ ಸಂಬಂಧಿಕರು ಒಂದೆಡೆ ಸೇರಿ ಒಟ್ಟಾಗಿ ಖುಷಿಯಿಂದ ಸಂತೋಷದಿಂದ ಹಬ್ಬ ಆಚರಿಸುತ್ತಾರೆ.

೧೪. ನಿಮಗೆ ತಿಳಿದಿರುವ ಎರಡು ಗಾದೆ ಮಾತುಗಳನ್ನು ವಿವರಿಸಿ? ಇಲ್ಲಿ ಕೊಟ್ಟಿರುವ ಗಾದೆಯನ್ನು ವಿವರಿಸಿ

'ಹಂಡೆ ಬಾಯಿ ಕಟ್ಟಬಹುದು. ಮುಂಡೆ ಬಾಯಿ ಕಟ್ಟಲಾಗದು.'

'ಮಾತು ಬಲ್ಲವನಿಗೆ ಜಗಳವಿಲ್ಲ'.

ಸಮಯ ಮತ್ತು ಸಂದರ್ಭಕ್ಕೆ ಅನುಗುಣವಾಗಿ ನಯವಾಗಿ ಮಾತನಾಡುವ ವ್ಯಕ್ತಿಗೆ ಜಗಳವಿಲ್ಲ ಎಂದರ್ಥ.

# ಪ್ರಶ್ನಾವಳಿ

೧. **ವೈಯಕ್ತಿಕ ಮಾಹಿತಿ**

ಅ. ಹೆಸರು : ಪುಷ್ಪವತಿ

ಆ. ವಿಳಾಸ : ನಂ.೧೦, ಮುದ್ದಾಪುರ ಕಂಪ್ಲಿ ಶುಗರ್ ಫ್ಯಾಕ್ಟ್ರೀ ಪ್ರಭು ಕ್ಯಾಂಪ್

ಇ. ವಿದ್ಯಾರ್ಹತೆ : ಬಿ.ಕಾಂ.

ಈ. ಜಾತಿ : ಪ.ಜಾ.

ಉ. ವೃತ್ತಿ ; ವಿದ್ಯಾರ್ಥಿನಿ

ಊ. ವಯಸ್ಸು : ೨೨

೨. ನೀವು ಆಡುವ ಭಾಷೆ ಯಾವುದು? :

ತೆಲುಗು

೩. ನಿಮ್ಮ ಮನೆತನದ ಹೆಸರೇನು? (ಕುಲನಾಮ) ಅದಕ್ಕೆ ಹಿನ್ನೆಲೆ ಏನಾದರೂ ಇದೆಯೇ?

ಘಜಲ್ (ಕಾಲುಗೆಜ್ಜೆ) ಮುತ್ತಾತ ಅವರು ಗೆಜ್ಜೆ ಕಟ್ಟಿಕೊಂಡು ಊರಲ್ಲಿ ಓಡಾಡುತ್ತಿದ್ದರು. ಆದ್ದರಿಂದ ಈ ಹೆಸರು ಬಂದಿದೆ.

೪. ನಿಮ್ಮ ಮನೆತನದ ವೃತ್ತಿ ಯಾವುದು? ಅದರ ಪರಿಕರಗಳು ಯಾವುವು?

ವ್ಯವಸಾಯ, ಪರಿಕರಗಳು: ಎತ್ತಿನಬಂಡಿ, ಟ್ರ್ಯಾಕ್ಟರ್, ಇತ್ಯಾದಿ

೫. ನಿಮ್ಮ ಮನೆಯಲ್ಲಿ ಆಚರಿಸುವ ವಿಶೇಷ ಆಚರಣೆಗಳು ಯಾವುವು? ಯಾವುದಾದರೂ ಒಂದು ಆಚರಣೆಯನ್ನು ವಿವರಿಸಿ

ಎಲ್ಲರ ಹುಟ್ಟುಹಬ್ಬವನ್ನು ಆಚರಿಸುತ್ತೇವೆ. ಕ್ರಿಸ್‌ಮಸ್, ಗುಡ್‌ಫ್ರೈಡೆ,ಹುಟ್ಟುಹಬ್ಬವನ್ನು ಅವರ ಸಂತೋಷಕ್ಕಾಗಿ ಆಚರಿಸುತ್ತೇವೆ.

೬. ನಿಮ್ಮ ಮನೆಯಲ್ಲಿ ಹೆಚ್ಚು ಮಾತನಾಡುವವರು ಯಾರು? ಏಕೆ?

ಪುಷ್ಪವತಿ. ಮನೆಯಲ್ಲಿ ಎಲ್ಲಾರು ಒಂದೇ ಕಡೆ ಸೇರಿರುವುದರಿಂದ ಎಲ್ಲರು ಖುಷಿ ಪಡುವ ರೀತಿಯಲ್ಲಿ ಮಾತನಾಡುತ್ತೇನೆ.

೭. ನಿಮ್ಮ ಮನೆಯ ನಿರ್ಧಾರಗಳನ್ನು ತೆಗೆದುಕೊಳ್ಳುವವರು ಯಾರು? ತಂದೆ/ತಾಯಿ ಮತ್ತು ಯಾಕೆ ಅವನೇ/ಅವಳೇ ತೆಗೆದುಕೊಳ್ಳುತ್ತಾರೆ?

ತಂದೆ ಇಲ್ಲದ ಕಾರಣ ದೊಡ್ಡ ನಿರ್ಧಾರಗಳನ್ನು ತಾಯಿಯವರು ತೆಗೆದುಕೊಳ್ಳುತ್ತಾರೆ. ನಮ್ಮ ವಿದ್ಯಾಭ್ಯಾಸಗಳಲ್ಲಿ ನಮ್ಮ ನಿರ್ಧಾರಗಳನ್ನು ನಾವೇ ತೆಗೆದುಕೊಳ್ಳುತ್ತೇವೆ.

೧. ಕೆಳಗೆ ಕೊಟ್ಟಿರುವ ಕೆಲಸಗಳಲ್ಲಿ ಯಾರು ಯಾವ ಕೆಲಸವನ್ನು ಮಾಡಬೇಕು? ಮತ್ತು ಯಾಕೆ?

| ಕ್ರಸಂ. | ಕೆಲಸ | ಪುರುಷ | ಮಹಿಳೆ | ಯಾಕೆ |
|---|---|---|---|---|
| ೧. | ಟೈಲರಿಂಗ್ | ✓ | ✓ | ಪುರುಷರ ಬಟ್ಟೆ ಪುರುಷರು ಮಹಿಳೆಯ ಬಟ್ಟೆ ಮಹಿಳೆಯರು |
| ೨. | ಏಮ್‌ರೈಡಿಂಗ್ | | ✓ | ತಾಳ್ಮೆ ಹೆಚ್ಚಾಗಿರುತ್ತದೆ. |
| ೩. | ಪೋಲಿಸ್ | ✓ | | ಇವರೆಲ್ಲ ಸಹೃದಯದ ಪ್ರಜ್ಞೆ ಇಲ್ಲದೇ ಕೆಲಸ ಮಾಡುತ್ತಾರೆ. |
| ೪. | ಡಾಕ್ಟರ್ | | | ಇವರು ಮನುಷ್ಯರ ಪ್ರಾಣವನ್ನು ಕಾಪಾಡುತ್ತಾರೆ. |
| ೫. | ನರ್ಸ್ | | ✓ | ಬಂದಿರುವ ಅನಾರೋಗಗಿಗಳಿಗೆ ಸಹಾಯ ಮಾಡುತ್ತಾರೆ. |
| ೬. | ಲಾಯರ್ | ✓ | ✓ | ಇಬ್ಬರು ಸರಿಸಮನಾವಾದ ನ್ಯಾಯ ಒದಗಿಸತ್ತಾರೆ. |
| ೭. | ಟೀಚರ್ | ✓ | ✓ | ಮಕ್ಕಳ ಜೊತೆಗೆ ಹೊಂದಿಕೊಂಡು ಹೋಗುವ ಭಾವನೆ ಇರುತ್ತದೆ. |
| ೮. | ರೈತ | ✓ | | ರೈತ ದೇಶದ ಅನ್ನದಾತ. ಇದರಲ್ಲಿ ಮಹಿಳೆಯರು ಮಾಡುತ್ತಾರೆ. |
| ೯. | ಮಿಲಿಟರಿ | ✓ | | ದೇಶದ ಗಡಿಯಲ್ಲಿ ಕೆಲಸ ಮಾಡುಬೇಕು. ಮನೆಯಲ್ಲಿ ಮಹಿಳೆಯರನ್ನು ಕಳುಹಿಸುವುದಿಲ್ಲ. |
| ೧೦. | ಪೈಲೆಟ್ | ✓ | | ಇದರಲ್ಲಿ ಅಪಘಾತಗಳು ಹೆಚ್ಚಾಗಿರುತ್ತದೆ. ಇದಕ್ಕೆ ಪುರುಷರೇ ಸರಿ. |
| ೧೧. | ಡ್ರೈವರ್ | ✓ | | ವಾಹನಗಳ ಬ್ಯಾಲೆನ್ಸ್ ಸರಿಯಾಗಿ ತೆಗೆದುಕೊಳ್ಳುತ್ತಾರೆ. |
| ೧೨. | ಕಂಡಕ್ಟರ್ | ✓ | | ಇದು ಸುಲಭವಾದ ಕೆಲಸ |
| ೧೩. | ಸಮಾಜ ಸುಧಾರಕರು | ✓ | ✓ | ಇದು ಕೆಲಸ ಅಲ್ಲ ಸಮಾಜದ ಮೇಲಿನ ಗೌರವ |
| ೧೪. | ಮನೆ ಕೆಲಸ, ಅಡುಗೆ, ಬಟ್ಟೆ ತೊಳೆಯುವುದು, ಕಸ ಗುಡಿಸುವುದು. | ✓ | ✓ | ಮಹಿಳೆಯರು ತಾಳ್ಮೆಯಿಂದ ಮನೆಯ ಸ್ವಚ್ಛತೆಯನ್ನು ಕಾಪಾಡುತ್ತಾರೆ. |
| ೧೫. | ಸೂಳೆ | ✓ | ✓ | ಈ ಕೆಲಸದಲ್ಲಿ ಇಬ್ಬರ ತಪ್ಪು ಇರುತ್ತದೆ. |

೯. ಕೆಳಗೆ ಕೊಟ್ಟಿರುವ ಶಿಕ್ಷಣ ಪದವಿಗಳಲ್ಲಿ ಯಾರು ಯಾವ ಬಗೆಯ ಶಿಕ್ಷಣ ಪಡೆಯಬೇಕು? ಯಾಕೆ?

| ಕ್ರಸಂ. | ಪದವಿ | ಪುರುಷ | ಮಹಿಳೆ | ಯಾಕೆ |
|---|---|---|---|---|
| ೧. | ಪಿ.ಯು.ಸಿ. ಆರ್ಟ್ಸ್, ಸೈನ್ಸ್, ಕಾಮರ್ಸ್ | ✓ | ✓ | ಎಸ್.ಎಸ್.ಎಲ್.ಸಿ. ಮುಗಿದ ನಂತರ ಎಲ್ಲರೂ ತೆಗೆದುಕೊಳ್ಳುವ ಕಾಮನ್ ಸಬ್ಜಕ್ಟ್ |
| ೨. | ಡಿಪ್ಲೊಮಾ | ✓ | | ಅವರಿಗೆ ಆಯ್ಕೆ |
| ೩. | ಡಿ.ಎಡ್., ಬಿ.ಎಡ್. | ✓ | ✓ | – |
| ೪. | ಐಟಿಐ | ✓ | | ಇದು ಯಂತ್ರೋಪಕರಣಗಳ ಮೂಲಕ ಕೂಡಿರುತ್ತವೆ. |
| ೫. | ಜೆ.ಓ.ಸಿ. | ✓ | ✓ | ಕಾಲೇಜಿನಲ್ಲಿ ಮಹಿಳೆಯರಿಗೆ ಮಾತ್ರ ಇರುತ್ತದೆ. |
| ೬. | ಎಂ.ಕಾಂ | ✓ | ✓ | ಡಿಗ್ರಿ ಮುಗಿದ ನಂತರ ಮುಂದಿನ ವಿದ್ಯಾಭ್ಯಾಸ |
| ೭. | ಇಂಜಿನಿಯರಿಂಗ್ | ✓ | ✓ | ಹೊರಗಿನ ಆಲೋಚನೆಗಳಿಂದ ಕೂಡಿರುತ್ತದೆ. |
| ೮. | ಬಿ.ಎ. | ✓ | ✓ | ಪಿ.ಯು.ಸಿ. ಮುಗಿದ ನಂತರ ಮುಂದಿನ ವಿದ್ಯಾಭ್ಯಾಸ |
| ೯. | ಪಿಎಚ್.ಡಿ. | ✓ | ✓ | – |

೧೦. ಮನೆಯಲ್ಲಿ ಹೊರಗಡೆ ಯಾರು ಮಾತನಾಡಬೇಕು? ಹೆಣ್ಣು/ಗಂಡೋ ಮತ್ತು ಯಾಕೆ?

–

೧೧. ನಿಮಗಿಂತ ಮೇಲಿನ ಜಾತಿಯವರೂ ನಿಮ್ಮನ್ನು ಹೇಗೆ ಮಾತನಾಡಿಸುತ್ತಾರೆ.

ಯಾವುದೇ ಭೇದಭಾವವಿಲ್ಲ. ನನ್ನನು ಚೆನ್ನಾಗಿ ಮಾತನಾಡಿಸುತ್ತಾರೆ. ಮುಖ್ಯವಾಗಿ ನನ್ನ ಸ್ನೇಹಿತರು ನನ್ನ ಜಾತಿಗಿಂತ ಮೇಲಿನ ಜಾತಿಯವರು.

೧೨. ನಿಮಗಿಂತ ಕೆಳಗಿನ ಜಾತಿಯವರೂ ನಿಮ್ಮನ್ನು ಹೇಗೆ ಮಾತನಾಡಿಸುತ್ತಾರೆ.

ಸೂಪರ್ ಆಗಿ ಮಾತನಾಡಿಸುತ್ತಾರೆ.

೧೩. ನಿಮಗೆ ಇಷ್ಟವಾದ ಹಬ್ಬದ ಆಚರಣೆಯನ್ನು ವಿವರಿಸಿ. ನಿಮಗೆ ಇಷ್ಟವಾದ ಕಥೆಯನ್ನು ಹೇಳಿ

ಕ್ರಿಸ್‌ಮಸ್ ಡ್ರಾಮಾ ಡ್ಯಾನ್ಸ್‌ಗಳ ಮುಖಾಂತರ ಆಚರಿಸುತ್ತಾರೆ. ಮನೆಯಲ್ಲಿ ಅವರವರ ಸ್ನೇಹಿತರನ್ನು ಕರೆದುಕೊಂಡು ಬರುತ್ತಾರೆ. ಸಂಜೆ ವೇಳೆ ಎಲ್ಲರು ಚರ್ಚಿಗೆ ಹೋಗುತ್ತೇವೆ.

೧೪. ನಿಮಗೆ ತಿಳಿದಿರುವ ಎರಡು ಗಾದೆ ಮಾತುಗಳನ್ನು ವಿವರಿಸಿ? ಇಲ್ಲಿ ಕೊಟ್ಟಿರುವ ಗಾದೆಯನ್ನು ವಿವರಿಸಿ.

'ಹಂಡೆ ಬಾಯಿ ಕಟ್ಟಬಹುದು. ಮುಂಡೆ ಬಾಯಿ ಕಟ್ಟಲಾಗದು.'

ಇದು ಒಂದು ಕಷ್ಟವಾದ ಗಾದೆಯಾಗಿದೆ. ನನಗೆ ಗೊತ್ತಿಲ್ಲ. ಆದರೂ ಹೇಳುತ್ತೇನೆ. ಹೆಂಡತಿಯು ಇದ್ದರೂ ಗಂಡನು ಬೇರೆಯವರ ಸಂಚಾರವನ್ನು ನಡೆಸುತ್ತಾನೆ.

'ಮಾತು ಬಲ್ಲವನಿಗೆ ಜಗಳವಿಲ್ಲ'.

# ಪ್ರಶ್ನಾವಳಿ

೧. **ವೈಯಕ್ತಿಕ ಮಾಹಿತಿ**

ಅ. ಹೆಸರು : ಕೋಕಿಲಾ ಹಳ್ಳಿ

ಆ. ವಿಳಾಸ : ಮ.ನಂ: ೨೧, ಬನ್ನಿಹಟ್ಟಿ ಗ್ರಾಮ
ಸಂಡೂರು ತಾಲೂಕು, ಬಳ್ಳಾರಿ ಜಿಲ್ಲೆ,

ಇ. ವಿದ್ಯಾರ್ಹತೆ : ಬಿ.ಎ. (ತೃತೀಯ ವರ್ಷ)

ಈ. ಜಾತಿ : ೩ಬಿ (ಲಿಂಗಾಯತ)

ಉ. ವೃತ್ತಿ ; ವಿದ್ಯಾರ್ಥಿನಿ

ಊ. ವಯಸ್ಸು : ೨೧

೨. ನೀವು ಆಡುವ ಭಾಷೆ ಯಾವುದು? :

ಕನ್ನಡ

೩. ನಿಮ್ಮ ಮನೆತನದ ಹೆಸರೇನು? (ಕುಲನಾಮ) ಅದಕ್ಕೆ ಹಿನ್ನೆಲೆ ಏನಾದರೂ ಇದೆಯೇ?

ಹಳ್ಳಿ. ಇದರ ಹಿನ್ನೆಲೆ ನನಗೆ ತಿಳಿದಿಲ್ಲ.

೪. ನಿಮ್ಮ ಮನೆತನದ ವೃತ್ತಿ ಯಾವುದು? ಅದರ ಪರಿಕರಗಳು ಯಾವುವು?

ಕೃಷಿ/ವ್ಯವಸಾಯ. ಮಡಿಕೆ, ಕುಂಟೆ ಹೊಡೆಯುವ ಕಟ್ಟಿಗೆಯ ಪರಿಕರಗಳು, ಟ್ರ್ಯಾಕ್ಟರ್ ಇತ್ಯಾದಿ.

೫. ನಿಮ್ಮ ಮನೆಯಲ್ಲಿ ಆಚರಿಸುವ ವಿಶೇಷ ಆಚರಣೆಗಳು ಯಾವುವು? ಯಾವುದಾದರೂ ಒಂದು ಆಚರಣೆಯನ್ನು ವಿವರಿಸಿ

ದಸರಾ, ದೀಪಾವಳಿ, ಯುಗಾದಿ, ಮೊಹರಂ ಇತ್ಯಾದಿ ಎಲ್ಲಾ ಹಬ್ಬವನ್ನು ಆಚರಿಸುತ್ತೇವೆ. ಆದರೆ ಭರತ ಹುಣ್ಣಿಮೆ ವಿಶೇಷವಾಗಿ ಆಚರಿಸುತ್ತೇವೆ. ಕುಲದೇವರಾದ ಹುಲಿಗೆಮ್ಮನ ಪೂಜೆ, ಜೊತೆಗೆ ಮನೆ ಹಿರಿಯರ ದಿವಂಗತರಾಗಿದ್ದರೆ ಅವರ ಪೂಜೆಯನ್ನು ಸಹ ವಿಶೇಷವಾಗಿ ಆಚರಿಸಲಾಗುತ್ತದೆ. ಮತ್ತು ಬಂಧುಗಳಿಗೆ ಊಟ-ಉಪಹಾರದ ವ್ಯವಸ್ಥೆಯನ್ನು ನಮ್ಮ ಮನೆಯಲ್ಲಿಯೇ ಮಾಡಿರುತ್ತೇವೆ. ಇತ್ಯಾದಿ ಈ ರೀತಿಯಾಗಿ ಆಚರಿಸುತ್ತೇವೆ.

೬. ನಿಮ್ಮ ಮನೆಯಲ್ಲಿ ಹೆಚ್ಚು ಮಾತನಾಡುವವರು ಯಾರು? ಏಕೆ?

ಅತಿಯಾಗಿ ಮಾತನಾಡುವವಳು ನಾನೆ. ಏಕೆಂದರೆ ಎಲ್ಲರನ್ನು ನಗಿಸುವ ಸಲುವಾಗಿ ಮನೇಲಿ ಎಲ್ಲ್ರೂ ಹೆಚ್ಚಾಗಿ ನನ್ನಿಂದ ಖುಷಿಯಾಗಿರುತ್ತಾರೆ.

೭. ನಿಮ್ಮ ಮನೆಯ ನಿರ್ಧಾರಗಳನ್ನು ತೆಗೆದುಕೊಳ್ಳುವವರು ಯಾರು? ತಂದೆ/ತಾಯಿ ಮತ್ತು ಯಾಕೆ ಅವನೇ/ಅವಳೇ ತೆಗೆದುಕೊಳ್ಳುತ್ತಾರೆ?

ನಮ್ಮ ಮನೆಯಲ್ಲಿ ತಂದೆ ನಿರ್ಧಾರ ತೆಗೆದುಕೊಳ್ಳುವುದು. ಆದರೆ ಆ ನಿರ್ಧಾರ ಸರಿ ಅನಿಸಿದರೆ ಮಾತ್ರ ಇಲ್ಲವಾದರೆ ನಾನು ಹೇಳಿದ ಮಾತು ನನ್ನ ತಂದೆಯ ಕೊನೆಯ ನಿರ್ಧಾರವಾಗಿರುತ್ತದೆ.

೮. ಕೆಳಗೆ ಕೊಟ್ಟಿರುವ ಕೆಲಸಗಳಲ್ಲಿ ಯಾರು ಯಾವ ಕೆಲಸವನ್ನು ಮಾಡಬೇಕು? ಮತ್ತು ಯಾಕೆ?

| ಕ್ರ.ಸಂ. | ಕೆಲಸ | ಪುರುಷ | ಮಹಿಳೆ | ಯಾಕೆ |
|---|---|---|---|---|
| ೧. | ಟೈಲರಿಂಗ್ | | ✓ | ಸ್ವಾವಲಂಬಿಯಾಗಿರಲು |
| ೨. | ಏಮ್‌ರೈಡಿಂಗ್ | ✓ | ✓ | ಸ್ವಾವಲಂಬಿಯಾಗಿರಲು |
| ೩. | ಪೋಲಿಸ್ | ✓ | | ರಕ್ಷಣೆ ನೀಡುವುದರಲ್ಲಿ ಮಹಿಳೆಗಿಂತ ಒಂದು ಕೈ ಮೇಲು. |
| ೪. | ಡಾಕ್ಟರ್ | | ✓ | ಆರೈಕೆ ಮಾಡುವುದರಲ್ಲಿ ಸ್ತ್ರೀಯು ಉತ್ತಮಳು. |
| ೫. | ನರ್ಸ್ | ✓ | ✓ | ಇಬ್ಬರು ಅರ್ಹರು |
| ೬. | ಲಾಯರ್ | | ✓ | ಮಾತಿನ ಮಾತೆಯರು ಮಹಿಳೆಯರು ಹಾಗಾಗಿ ಇದಕ್ಕೆ ಸೂಕ್ತ |
| ೭. | ಟೀಚರ್ | | ✓ | ಇಬ್ಬರಿಗೂ ಅರ್ಹತೆ ಇದೆ. |
| ೮. | ರೈತ | ✓ | | ಮಹಿಳೆಗಿಂತ ಹೆಚ್ಚು ಬಲಶಾಲಿ ಪುರುಷನು |
| ೯. | ಮಿಲಿಟರಿ | ✓ | ✓ | ಇಬ್ಬರಿಗೂ ಧೈರ್ಯ ಹೆಚ್ಚಿದೆ. |
| ೧೦. | ಪೈಲೆಟ್ | | ✓ | ಈ ವೃತ್ತಿಯಲ್ಲಿ ಮಹಿಳೆಯರು ಕಡಿಮೆ ಇದ್ದಾರೆ. ಹಾಗಾಗಿ ಇವರಿಗೂ ಅವಕಾಶ ದೊರೆಯಲಿ |
| ೧೧. | ಡ್ರೈವರ್ | ✓ | | ಹೆಚ್ಚು ಸೂಕ್ತ |
| ೧೨. | ಕಂಡಕ್ಟರ್ | ✓ | | ಮಹಿಳೆಯರು ವೈಯಕ್ತಿಕ ಕಾರಣಗಳಿಂದ ಸಮಸ್ಯೆಗಳಿಂದ ಸೂಕ್ತವಲ್ಲ. |
| ೧೩. | ಸಮಾಜ ಸುಧಾರಕರು | ✓ | ✓ | ಇಬ್ಬರಲ್ಲಿ ಸಾಮರ್ಥ್ಯವಿದೆ. |
| ೧೪. | ಮನೆ ಕೆಲಸ, ಅಡುಗೆ, ಬಟ್ಟೆ ತೊಳೆಯುವುದು, ಕಸ ಗುಡಿಸುವುದು | ✓ | ✓ | ಇಬ್ಬರ ಕರ್ತವ್ಯವಿದು. ಹಾಗಾಗಿ ಇಬ್ಬರೂ ಈ ಎಲ್ಲಾ ಕೆಲಸವನ್ನು ಮಾಡಬೇಕು. |
| ೧೫. | ಸೂಳೆ | | | – |

೯. ಕೆಳಗೆ ಕೊಟ್ಟಿರುವ ಶಿಕ್ಷಣ ಪದವಿಗಳಲ್ಲಿ ಯಾರು ಯಾವ ಬಗೆಯ ಶಿಕ್ಷಣ ಪಡೆಯಬೇಕು? ಯಾಕೆ?

| ಕ್ರಸಂ. | ಪದವಿ | ಪುರುಷ | ಮಹಿಳೆ | ಯಾಕೆ |
|---|---|---|---|---|
| ೧. | ಪಿ.ಯು.ಸಿ. ಆರ್ಟ್ಸ್, ಸೈನ್ಸ್, ಕಾಮರ್ಸ್ | ✓ | ✓ | ಸಮಾನತೆಯ ದೃಷ್ಟಿ |
| ೨. | ಡಿಪ್ಲೊಮಾ | ✓ | ✓ | ಸಮಾನತೆಯ ದೃಷ್ಟಿ |
| ೩. | ಡಿ.ಎಡ್., ಬಿ.ಎಡ್. | ✓ | ✓ | ಸಮಾನತೆಯ ದೃಷ್ಟಿ |
| ೪. | ಐಟಿಐ | ✓ | ✓ | ಸಮಾನತೆಯ ದೃಷ್ಟಿ |
| ೫. | ಜೆ.ಓ.ಸಿ. | ✓ | ✓ | ಸಮಾನತೆಯ ದೃಷ್ಟಿ |
| ೬. | ಎಂ.ಕಾಂ | ✓ | ✓ | ಸಮಾನತೆಯ ದೃಷ್ಟಿ |
| ೭. | ಇಂಜಿನಿಯರಿಂಗ್ | ✓ | ✓ | ಸಮಾನತೆಯ ದೃಷ್ಟಿ |
| ೮. | ಬಿ.ಎ. | ✓ | ✓ | ಸಮಾನತೆಯ ದೃಷ್ಟಿ |
| ೯. | ಪಿಎಚ್.ಡಿ. | ✓ | ✓ | ಸಮಾನತೆಯ ದೃಷ್ಟಿ |

೧೦. ಮನೆಯಲ್ಲಿ ಹೊರಗಡೆ ಯಾರು ಮಾತನಾಡಬೇಕು? ಹೆಣ್ಣು/ಗಂಡೋ

ಹೆಣ್ಣಾಗಲಿ, ಗಂಡಾಗಲಿ ಅವರು ತೆಗೆದುಕೊಳ್ಳುವ ನಿರ್ಧಾರಗಳು ಸರಿ ಇದ್ದರೆ ಯಾರಾದರೂ ಮಾತನಾಡಬಹುದು. ಇಲ್ಲಿ ಮೇಲು-ಕೀಳು, ಗಂಡು-ಹೆಣ್ಣು ಯಾಕೆ-ಏನು ಎಂಬ ಪ್ರಶ್ನೆಗಳು ಬರಕೂಡದು.

೧೧. ನಿಮಗಿಂತ ಮೇಲಿನ ಜಾತಿಯವರೂ ನಿಮ್ಮನ್ನು ಹೇಗೆ ಮಾತನಾಡಿಸುತ್ತಾರೆ.

ಗೆಳೆಯರಾದರೆ ಸಲಿಗೆಯಿಂದ ಮಾತನಾಡುತ್ತಾರೆ. ಹಿರಿಯರಾದರೆ ಹೆಸರನ್ನು ಸೂಚಿಸಿ ಮಾತನಾಡಿಸುತ್ತಾರೆ.

೧೨. ನಿಮಗಿಂತ ಕೆಳಗಿನ ಜಾತಿಯವರೂ ನಿಮ್ಮನ್ನು ಹೇಗೆ ಮಾತನಾಡಿಸುತ್ತಾರೆ.

ಗೆಳೆಯರಾದರೆ ಸಲಿಗೆಯಿಂದ ವರ್ತಿಸುತ್ತಾರೆ. ಹಿರಿಯರು ಗೌಡತಿ, ಅಮ್ಮ ಎಂಬ ಪದಗಳನ್ನು ಕರೆಯುತ್ತಾರೆ.

೧೩. ನಿಮಗೆ ಇಷ್ಟವಾದ ಹಬ್ಬದ ಆಚರಣೆಯನ್ನು ವಿವರಿಸಿ. ನಿಮಗೆ ಇಷ್ಟವಾದ ಕಥೆಯನ್ನುಹೇಳಿ

'ಮೊಹರಂ' ಹಬ್ಬವೆಂದರೆ ಬಹಳ ಇಷ್ಟ. ಕಾರಣ ಯಾವುದೇ ಒಂದು ಧರ್ಮಕ್ಕೆ ಸೀಮಿತವಾಗಿರದೆ ನಮ್ಮೂರಲ್ಲಿ ಹಿಂದೂ ಮತ್ತು ಮುಸ್ಲಿಂ ಭಾಂದವರು ಸೇರಿ ಹಬ್ಬವನ್ನು ವಿಜೃಂಭಣೆಯಿಂದ ನಡೆಸುತ್ತಾರೆ. ಹಾಗಾಗಿ ಈ ಹಬ್ಬದಲ್ಲಿ ಐಕ್ಯತೆಯು ಕಂಡುಬರುತ್ತದೆ.

೧೪. ನಿಮಗೆ ತಿಳಿದಿರುವ ಎರಡು ಗಾದೆ ಮಾತುಗಳನ್ನು ವಿವರಿಸಿ? ಇಲ್ಲಿ ಕೊಟ್ಟಿರುವ ಗಾದೆಯನ್ನು ವಿವರಿಸಿ. '

'ಹಂಡೆ ಬಾಯಿ ಕಟ್ಟಬಹುದು. ಮುಂಡೆ ಬಾಯಿ ಕಟ್ಟಲಾಗದು.'

ಹಂಡೆ ಬಾಯಿ ಕಟ್ಟಬಹುದು, ಆದ್ರೆ ಮುಂಡೆಬಾಯಿ ಕಟ್ಟಲಾಗದು. ಈ ಗಾದೆ ಮಾತು ಹೆಚ್ಚು ಸೂಕ್ತವಾಗುವುದೆಂದರೆ ಮಾತಿನ ಮಿತಿ ತಿಳಿಯದೆ ಇರುವವರಿಗೆ. ವಟಗುಟ್ಟುವಿಕೆಯ ಗುಣ ಹೆಚ್ಚು ಇರುವವರು ಯಾವುದೆ ಒಂದು ಮಾತನ್ನು ಸಹಿಸದೆ ಆ ಮಾತಿಗೆ ಪ್ರತಿರೋಧವನ್ನು ಒಡ್ಡುವುದು ಹಾಗಾಗಿ ದೊಡ್ಡದಿರುವ ಹಂಡೆ ಬಾಯಿ ಕಟ್ಟಬಹುದು. ಹೆಚ್ಚು ಮಾತನಾಡುವ ಈ ನಿನ್ನ ಬಾಯಿ ಕಟ್ಟಲಾಗದು ಎನ್ನುವರು.

'ಮಾತು ಬಲ್ಲವನಿಗೆ ಜಗಳವಿಲ್ಲ'.

ಮೌನಂ ಸಮ್ಮತಿ ಲಕ್ಷಣಂ ಎನ್ನುವ ಹಾಗೆ ಮೌನವಾಗಿ ಎಲ್ಲರೂ ಇರುತ್ತಾರೆ. ಆದರೆ ಮಾತನಾಡಲೇ ಬೇಕು ಎಂಬ ಪರಿಸ್ಥಿತಿ ಇದ್ದಾಗ ಮಾತಿನ ಅಂಕೆಯನ್ನು ತಿಳಿದುಕೊಂಡು ವಿರೋಧವನ್ನು ವ್ಯಕ್ತಪಡಿಸದೆ, ಅವರ ವಾದವನ್ನು ಒಪ್ಪಿಕೊಳ್ಳದೆ ಇರದ ಸಂದರ್ಭದಲ್ಲಿ ನಿಮ್ಮ ಉತ್ತರವನ್ನು ಸಮಾಜಾಯಿಸಿ ನೀಡುವ ಪರಿಯನ್ನು ಹೊಂದಿರಬೇಕು. ಆಗ ಮಾತು ನಮಗೆ ಗೊತ್ತಿದೆ ಎಂದು ನಾವು ಅರಿಯಬಹುದು. ಮತ್ತು ಯಾವುದೇ ಜಗಳಗಳಿಗೆ ಕಾರಣವಾಗುವುದಿಲ್ಲ ಎಂದು ಹೇಳಬಹುದು.

